# ಸಂತೆ ಮತ್ತು ಬುಡಕಟ್ಟು ಸಮುದಾಯ

(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ, ಒಂದು ಅರ್ಥಶಾಸ್ತ್ರೀಯ ಅಧ್ಯಯನ)

ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರ ಪಡಿಸಿದ ಎಂ.ಫಿಲ್ ಸಂಪ್ರಬಂಧ



ಸಂಶೋಧಕ

ಕೊಂತಮ್ ಸತೀಶ

ಮಾರ್ಗದರ್ಶಕರು

ಡಾ. ಕೇಶವನ್ ಪ್ರಸಾದ್ ಕೆ.

ಪ್ರವಾಚಕರು



ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೫

# ಸಂತೆ ಮತ್ತು ಬುಡಕಟ್ಟು ಸಮುದಾಯ

(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ, ಒಂದು ಅರ್ಥಶಾಸ್ತ್ರೀಯ ಅಧ್ಯಯನ)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಎಂ.ಫಿಲ್ ಸಂಪ್ರಬಂಧ

ಸಂಶೋಧಕ

**ಕೊಂತಮ್ ಸತೀಶ**

ಮಾರ್ಗದರ್ಶಕರು

**ಡಾ. ಕೇಶವನ್ ಪ್ರಸಾದ್ ಕೆ.**

ಪ್ರವಾಚಕರು





ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೫



# ಮಾರ್ಗದರ್ಶಕರ ಪ್ರಮಾಣ ಪತ್ರ

**ಸಂತೆ ಮತ್ತು ಬುಡಕಟ್ಟು ಸಮುದಾಯ** (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ, ಒಂದು ಅರ್ಥಶಾಸ್ತ್ರೀಯ ಅಧ್ಯಯನ) ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಎಂ.ಫಿಲ್ ಪದವಿಗಾಗಿ ಕೊಂತಮ್ ಸತೀಶ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 14-10-2005

**ಡಾ. ಕೇಶವನ್ ಪ್ರಸಾದ್ ಕೆ.**
ಪ್ರವಾಚಕರು ಹಾಗೂ ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಸಂಶೋಧಕನ ಪ್ರಮಾಣ ಪತ್ರ

**ಸಂತೆ ಮತ್ತು ಬುಡಕಟ್ಟು ಸಮುದಾಯ** (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ, ಒಂದು ಅರ್ಥಶಾಸ್ತ್ರೀಯ ಅಧ್ಯಯನ) ಎಂಬ ಸಂಪ್ರಬಂಧವನ್ನು ಡಾ. ಕೇಶವನ್‌ಪ್ರಸಾದ್ ಕೆ. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

Satish. K.

ಸ್ಥಳ : ವಿದ್ಯಾರಣ್ಯ
ದಿನಾಂಕ : 14-10-2005

**ಕೊಂತಮ್ ಸತೀಶ**
ಸಂಶೋಧಕ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

# ಪರಿಶಿಷ್ಟಗಳು

## ೧. ಪ್ರಸ್ತುತ ಕರ್ನಾಟಕ ರಾಜ್ಯದಲ್ಲಿ ಬಳ್ಳಾರಿ ಜಿಲ್ಲೆ



## ೨. ಬಳ್ಳಾರಿ ಜಿಲ್ಲೆಯ ನಕಾಶೆ



## ೩. ಬಳ್ಳಾರಿ ತಾಲೂಕು ನಕಾಶೆ




| ಊರುಗಳು | ಸಂತೆಯ ದಿನ |
|---|---|
| ೧. ಬಳ್ಳಾರಿ | ಶುಕ್ರವಾರ, ಮಂಗಳವಾರ |
| ೨. ಕುಡುತಿನಿ | ರವಿವಾರ |
| ೩. ಕುರುಗೋಡು | ಗುರುವಾರ |
| ೪. ಎಮ್ಮಿಗನೂರು | ಬುಧುವಾರ |
| ೫. ಕೊಟಾಲ | ಬುಧವಾರ |

## ೪. ಸಿರುಗುಪ್ಪ ತಾಲೂಕು ನಕಾಶೆ




| ಊರುಗಳು | ಸಂತೆಯ ದಿನ |
|---|---|
| ೧. ಸಿರುಗುಪ್ಪ | ರವಿವಾರ |
| ೨. ಸಿರಿಗೇರಿ | ಬುಧುವಾರ |
| ೩. ತೆಕ್ಕಲಕೋಟೆ | ಸೋಮವಾರ |
| ೪. ಸಿಂದಿಗೇರೆ | ಮಂಗಳವಾರ |
| ೫. ಬೈಲೂರು | ಗುರುವಾರ |

## ೫. ಹೊಸಪೇಟೆ ತಾಲೂಕು ನಕಾಶೆ




| ಊರುಗಳು | ಸಂತೆಯ ದಿನ |
|---|---|
| ೧. ಹೊಸಪೇಟೆ | ರವಿವಾರ |
| ೨. ಕಮಲಾಪುರ | ಸೋಮವಾರ |
| ೩. ಕಂಪ್ಲಿ | ಮಂಗಳವಾರ |
| ೪. ಮರಿಯಮ್ಮನಹಳ್ಳಿ | ಸೋಮವಾರ |

## ೬. ಸಂಡೂರು ತಾಲೂಕು ನಕಾಶೆ




| ಊರುಗಳು | ಸಂತೆಯ ದಿನ |
|---|---|
| ೧. ಸಂಡೂರು | ರವಿವಾರ |
| ೨. ತೋರಣಗಲ್ಲು | ರವಿವಾರ |
| ೩. ಬಂಡ್ರಿ | ಬುಧವಾರ |
| ೪. ಚೂರ್‌ನೂರು | ಸೋಮವಾರ |
| ೫. ಬೊಮ್ಮಗಟ್ಟ | ಶನಿವಾರ |
| ೬. ಇಟ್ನಾಪುರ | ಸೋಮವಾರ |
| ೭. ದರೋಜಿ | ಬುಧವಾರ |

# ೭. ಕೂಡ್ಲಿಗಿ ತಾಲೂಕು ನಕಾಶೆ




| ಊರುಗಳು | ಸಂತೆಯ ದಿನ |
|---|---|
| ೧. ಕೂಡ್ಲಿಗಿ | ಶುಕ್ರವಾರ |
| ೨. ಕೊಟ್ಟೂರು | ಗುರುವಾರ |
| ೩. ಚಿಕ್ಕಜೋಗಿಹಳ್ಳಿ | ಸೋಮವಾರ |
| ೪. ಖಾನಾವಸಳ್ಳಿ | ಮಂಗಳವಾರ |
| ೫. ಸೊಂಕೆ | ರವಿವಾರ |
| ೬. ಉಜ್ಜಿನಿ | ಸೋಮವಾರ |
| ೭. ಹೊಸಳ್ಳಿ | ಸೋಮವಾರ |
| ೮. ಗುಡೇಕೋಟೆ | ಬುಧವಾರ |
| ೯. ಸುಂದರಳ್ಳಿ | ಶನಿವಾರ |
| ೧೦. ಬಣವಿಕಲ್ಲು | ರವಿವಾರ |
| ೧೧. ಐನಳ್ಳಿ, (ಕುರಿ ಸಂತೆ) | ಶನಿವಾರ, ಗುರುವಾರ |

# ೮. ಹಗರಿಬೊಮ್ಮನಹಳ್ಳಿ ತಾಲೂಕು ನಕಾಶೆ




| ಊರುಗಳು | ಸಂತೆಯ ದಿನ |
|---|---|
| ೧. ಹಗರಿಬೊಮ್ಮನಹಳ್ಳಿ | ರವಿವಾರ |
| ದನಗಳ ಸಂತೆ | ಗುರುವಾರ |
| ೨. ಮೊರಿಗೇರಿ | ಗುರುವಾರ |
| ೩. ಹಂಪಸಾಗರ ೨ | ರವಿವಾರ |
| ೪. ಗದ್ದಿಕೇರಿ | ಗುರುವಾರ |
| ೫. ತಂಬ್ರಳ್ಳಿ | ಮಂಗಳವಾರ |
| ೬. ಹನಸಿ | ಶನಿವಾರ |

# ೯. ಹೂವಿನ ಹಡಗಲಿ ತಾಲೂಕು ನಕಾಶೆ




| ಊರುಗಳು | ಸಂತೆಯ ದಿನ |
|---|---|
| ೧. ಹೂವಿನ ಹಡಗಲಿ | ಶನಿವಾರ |
| ದನಗಳ ಸಂತೆ | ಸೋಮವಾರ |
| ೨. ಹೊಳಗುಂದಿ | ಬುಧುವಾರ |
| ೩. ಸೋವಿನಹಳ್ಳಿ | ಶುಕ್ರವಾರ |
| ೪. ಸೋಗಿ | ಸೋಮವಾರ |
| ೫. ಹೊಳಲು | ಮಂಗಳವಾರ |
| ೬. ಹಿರೇಮಲ್ಲಿನಕೇರಿ | ಗುರುವಾರ |
| ೭. ಹಿರೇ ಹಡಗಲಿ | ಗುರುವಾರ |
| ೮. ನಾಗ್ತಿ ಬಸಾಪುರ | ಮಂಗಳವಾರ |
| ೯. ಮಾಗಳ | ರವಿವಾರ |
| ೧೦. ಕತ್ತೆ ಬೆನ್ನೂರು | ಸೋಮವಾರ |
| ೧೧. ಮೈಲಾರ | ಶುಕ್ರವಾರ |
| ೧೨. ಮಾನ್ಯರ ಮಸಲವಾಡ | ಮಂಗಳವಾರ |
| ೧೩. ಇಟಗಿ | ಶುಕ್ರವಾರ |

## ಸಂತೆಗಳ ಸಂಖ್ಯೆ ಮತ್ತು ನಡೆಯುವ ವಾರ




### ಕೋಷ್ಟಕ

| ಕ್ರ.ಸಂ. | ವಾರಗಳು | ಸಂತೆಯ ಸಂಖ್ಯೆ |
|---|---|---|
| ೦೧. | ರವಿವಾರ | ೧೧ |
| ೦೨. | ಸೋಮವಾರ | ೧೧ |
| ೦೩. | ಮಂಗಳವಾರ | ೦೮ |
| ೦೪. | ಬುಧವಾರ | ೦೭ |
| ೦೫. | ಗುರುವಾರ | ೦೯ |
| ೦೬. | ಶುಕ್ರವಾರ | ೦೫ |
| ೦೭. | ಶನಿವಾರ | ೦೫ |

ಬಳ್ಳಾರಿ ಜಿಲ್ಲೆಯಲ್ಲಿ ೭ ತಾಲ್ಲೂಕುಗಳಿದ್ದು ಒಟ್ಟು ೫೬ ಸಂತೆಗಳು ನಡೆಯುತ್ತವೆ. ಮೇಲಿನ ಕೋಷ್ಟಕವನ್ನು ಗಮನಿಸಿದಲ್ಲಿ ಸಂತೆಗಳು ಯಾವ ವಾರದಲ್ಲಿ ಹೆಚ್ಚು ಮತ್ತು ಯಾವ ವಾರಗಳಲ್ಲಿ ಕಡಿಮೆ ಎಂಬ ಮಾಹಿತಿಯನ್ನು ನೀಡುತ್ತವೆ.

# ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಮಹತ್ವ ಮತ್ತು ಸಾಹಿತ್ಯ ಸಮೀಕ್ಷೆ

೧:೧ ಪೀಠಿಕೆ

೧:೨ ಅಧ್ಯಯನದ ಉದ್ದೇಶ

೧:೩ ಅಧ್ಯಯನದ ವ್ಯಾಪ್ತಿ

೧:೪ ಅಧ್ಯಯನದ ಮಹತ್ವ

೧:೫ ಅಧ್ಯಯನದ ವಿಧಾನ

೧:೬ ಸಾಹಿತ್ಯ ಸಮೀಕ್ಷೆ

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಮಹತ್ವ ಮತ್ತು ಸಾಹಿತ್ಯ ಸಮೀಕ್ಷೆ

### ೧:೧ ಪೀಠಿಕೆ

ನಮ್ಮ ಜಗತ್ತು ಎಂದು, ಯಾವಾಗ, ಏಕೆ, ಹೇಗೆ, ಹುಟ್ಟಿಕೊಂಡಿತು ಎಂದು ನಿಖರವಾಗಿ ಹೇಳಲಾಗದಿದ್ದರೂ, ಜೀವವಿಜ್ಞಾನದ ಪ್ರಕಾರ ಜಗತ್ತಿನ ಹುಟ್ಟಿನ ಬಗೆಗೆ ಎಲ್ಲರೂ ಒಪ್ಪುವಂತ ಒಂದು ಅಭಿಪ್ರಾಯವಿದೆ. ಜಗತ್ತು ಹುಟ್ಟಿದ ಕೋಟ್ಯಂತರ ವರ್ಷಗಳ ಅನಂತರ ಮಾನವರ ನಡುವೆ ಒಂದು ವ್ಯವಸ್ಥಿತ ರೀತಿಯಲ್ಲಿ ಸಾಮಾಜಿಕ ಸಂಬಂಧಗಳು, ರಕ್ಷಣಾ ವ್ಯವಸ್ಥೆ ಕಂಡುಬಂದು ಸಮಾಜ ರೂಪುಗೊಂಡಿತು. ಹಾಗೆ ಕ್ರಮೇಣವಾಗಿ ಆರ್ಥಿಕತೆಯ ಕಲ್ಪನೆಯೂ ರೂಪು ತಳೆಯಿತು. ವಿನಿಮಯ ಸಾಧನವಾದ ಹಣ ಅಂದು ಇರದಿದ್ದರೂ ವಸ್ತು ವಿನಿಮಯ ಪದ್ಧತಿಯನ್ನು ರೂಢಿಸಿಕೊಂಡಿದ್ದುದು ತಿಳಿದುಬರುತ್ತದೆ. ಜನ ಸಮುದಾಯದಿಂದ ಗ್ರಾಮ, ಗ್ರಾಮದಿಂದ ಪಟ್ಟಣ, ಪಟ್ಟಣದಿಂದ ನಗರ, ನಗರದಿಂದ ರಾಜ್ಯ, ರಾಜ್ಯಕ್ಕೊಂದು ರಾಜಧಾನಿ, ದೇಶ ಹೀಗೆ ಭೌಗೋಳಿಕ ವ್ಯಾಪ್ತಿಯಂತೆ ಆರ್ಥಿಕತೆ ಜನರ ಮನದಲ್ಲಿ ಬೆಳೆಯುತ್ತಾ ಬಂದಿದೆ. ಇಂದಿನ ಕಂಪ್ಯೂಟರ್ ಯುಗದಲ್ಲಿ ಆಯಾ ದೇಶದ ಕರೆನ್ಸಿಯಲ್ಲಿ ಕ್ರೆಡಿಟ್ ಕಾರ್ಡ್, ಬ್ಯಾಂಕ್‌ಚೆಕ್, ಡಿ.ಡಿ.ಗಳಲ್ಲಿ ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದಲ್ಲಿ ವ್ಯವಹಾರ ನಡೆಯುತ್ತಿರುವುದನ್ನು ಕಾಣುತ್ತಿದ್ದೇವೆ. ಈ ಮೇಲಿನ ವಿಷಯ ಆಧುನಿಕತೆಯ ಸುತ್ತ ಸುತ್ತುತ್ತಿದ್ದರೇ ಗ್ರಾಮೀಣ ಬದುಕಿನ ಜೀವನ ವ್ಯವಸ್ಥೆ ತನ್ನದೇ ಆದ ಪ್ರಾಚೀನತೆಯ ಕಾಲಪ್ರಜ್ಞೆಯನ್ನೇ ಪ್ರತಿಬಿಂಬಿಸುತ್ತದೆ. ಇಂದಿಗೂ ಗ್ರಾಮೀಣಮಟ್ಟದಲ್ಲಿ ಮಾರುಕಟ್ಟೆಗಳಿದ್ದು, ಒಂದು ನಿಗದಿತ ಸ್ಥಳದಲ್ಲಿ ವಾರಕ್ಕೊಮ್ಮೆ ವ್ಯವಹಾರಕ್ಕಾಗಿ ರೂಪು ತಳೆಯುತ್ತವೆ. ಇವುಗಳಿಗೆ ಸಂತೆಗಳೆಂದು ಕರೆಯುತ್ತಾರೆ. ಈ ಸಂತೆಗಳು ಆಧುನಿಕ ಮಾರುಕಟ್ಟೆಯ ಒಂದು ರೂಪವೇ ಹೊರತು ಮಾರುಕಟ್ಟೆಯಂತೆ ವಿಶಾಲವಾದ ವ್ಯಾಪ್ತಿಯನ್ನು ಹೊಂದಿಲ್ಲ. ಈ ಸಂತೆಗಳನ್ನು ಐತಿಹಾಸಿಕ ಕುರುಹುಗಳಾಗಿ ಕಾಣುತ್ತೇವೆ. ಇತಿಹಾಸದ ಪುಟಗಳನ್ನು ತಿರುವಿದಾಗ ಸಂತೆಗಳ ಮಹತ್ವ ನಮಗೆ ತಿಳಿದುಬರುತ್ತದೆ. ಸಂತೆಗಳಲ್ಲಿ ಅನೇಕ ಸಮುದಾಯಗಳು ಪಾಲ್ಗೊಳ್ಳುವುದು ಕಂಡುಬರುತ್ತದೆ. ಅವುಗಳಲ್ಲಿ ಮುಖ್ಯವಾಗಿ ಬುಡಕಟ್ಟು ಸಮುದಾಯಗಳ ಪಾತ್ರ ಮಹತ್ವದ್ದು. ಉದಾಹರಣೆಗೆ ವಿಜಯನಗರ ಸಾಮ್ರಾಜ್ಯದ ರಾಜಬೀದಿಗಳಲ್ಲಿ ಅಥವಾ ಬಜಾರುಗಳಲ್ಲಿ ಸಂತೆಗಳು ನಡೆಯುತ್ತಿದ್ದವು. ಹಂಪೆಯಲ್ಲಿರುವ ಬಾಲಕೃಷ್ಣ ದೇವಾಲಯದ ಮುಂದಿರುವ ಬಜಾರ್, ವಿಜಯ ವಿಠಲಸ್ವಾಮಿ ದೇವಾಲಯದ ಮುಂದಿರುವ ಬಜಾರ್, ಶ್ರೀ ವಿರೂಪಾಕ್ಷ ದೇವಾಲಯದ ಮುಂದಿರುವ ಬಜಾರ್ ಹೀಗೆ ಅನೇಕ ದೇವಾಲಯಗಳ ಮುಂದಿರುವ

ವಿಶಾಲ ಬಜಾರುಗಳಲ್ಲಿ ಸಂತೆಗಳು ನಡೆಯುತ್ತಿದ್ದವು ಎನ್ನುವುದಕ್ಕೆ ಇಂದು ಆಯಾ ದೇವಾಲಯಗಳ ಮುಂದಿರುವ ಅಳಿದುಳಿದ ಬಜಾರುಗಳ ಸ್ಮಾರಕಗಳೇ ಸಾಕ್ಷಿಯಾಗಿವೆ.

ಕೃಷಿಪ್ರಧಾನ ಸ್ವಯಂಪೂರ್ಣ ಗ್ರಾಮಗಳಲ್ಲಿ ಆರ್ಥಿಕ ಚಟುವಟಿಕೆಗಳು ಕೇಂದ್ರೀಕೃತಗೊಂಡಿದ್ದವು. ಹೀಗೆ ಹಳ್ಳಿಗಳು 'ಸ್ವಯಂಪೂರ್ಣ'ಗೊಳ್ಳುವುದಕ್ಕೆ ಈ ದೇಶದ ಪಾರಂಪರಿಕ ಉತ್ಪಾದನಾ ವ್ಯವಸ್ಥೆ ಕಾರಣವಾಗಿತ್ತು. ಇಂತಹ ಹಳ್ಳಿಗಳಲ್ಲಿ ಉತ್ಪಾದನಾ ಸಂಬಂಧಗಳು ನಿಯಮಬದ್ಧವಾಗಿದ್ದು, ವಸ್ತು ವಿನಿಮಯ ಪದ್ಧತಿ ಮಾತ್ರ ಜಾರಿಯಲ್ಲಿತ್ತು. ಗ್ರಾಮವೊಂದು ಆರ್ಥಿಕವಾಗಿ ಒಂದು ಕೇಂದ್ರೀಕೃತ ವ್ಯವಸ್ಥೆಗೆ ಒಳಪಟ್ಟಿತ್ತು. ಈ ಕಾರಣಕ್ಕಾಗಿ ಅಲ್ಲಿನ ಆರ್ಥಿಕ ಚಟುವಟಿಕೆಗಳು ಒಂದು ಗ್ರಾಮಕ್ಕೆ ಮಾತ್ರ ಸೀಮಿತಗೊಂಡಿದ್ದವು. ಆದರೆ ಬಹಳ ಕಾಲ ಈ ಆರ್ಥಿಕ ವ್ಯವಸ್ಥೆಯು ಬದುಕಲಿಲ್ಲ. ಉತ್ಪಾದನೆ ಹಲವು ಹೊಸ ಆಯಾಮಗಳಲ್ಲಿ ವಿಸ್ತರಣೆಗೊಂಡ ಮೇಲೆ ಹಲವು ಜನವಸತಿಗಳು ಪರಸ್ಪರ ಅವಲಂಬಿಸುವುದು ಅನಿವಾರ್ಯವಾಗಿತ್ತು. ಗ್ರಾಮಗಳ 'ಸ್ವಯಂಪೂರ್ಣತೆ'ಯು ಈ ಬಗೆಯ ಆರ್ಥಿಕ ಚಟುವಟಿಕೆಗಳ ವಿಸ್ತರಣೆಯಿಂದ ಸಡಿಲವಾಗತೊಡಗಿತು. ಉತ್ಪಾದನಾ ಸಂಬಂಧಗಳು ಹೆಚ್ಚು ವಿಸ್ತಾರವಾಗುತ್ತಿದ್ದಂತೆ, ಗ್ರಾಮಗಳು ಆರ್ಥಿಕವಾಗಿ ಪರಸ್ಪರ ಅವಲಂಬಿಸುವುದು ಅನಿವಾರ್ಯವಾಗಿತ್ತು. ಗೊತ್ತಾದ ಸ್ಥಳವೊಂದರಲ್ಲಿ, ನಿಗದಿತ ಅವಧಿಯಲ್ಲಿ ಹಳ್ಳಿಗಳು ಆರ್ಥಿಕವಾಗಿ ಸಂಧಿಸಲಾರಂಭಿಸಿದವು. ಸಂತೆಗಳು ಈ ಕಾರಣಕ್ಕಾಗಿ ಹುಟ್ಟಿರಬಹುದೆಂದು ಊಹಿಸಬಹುದಾಗಿದೆ. ಸಂತೆಗಳಿಗೆ ಮತ್ತು ಆದಿಮ ಸಮುದಾಯಗಳು ಕಂಡುಕೊಂಡ ಪಾರಂಪರಿಕ ಸಮಾಜಗಳಿಗೆ ಇರುವ ಸಾವಯವ ಸಂಬಂಧ ಇಂದಿಗೂ ಜೀವಂತವಿದೆ. ಪ್ರಸ್ತುತ ಅಧ್ಯಯನವು ಸಂತೆ ಮತ್ತು ಆದಿಮ ಸಮಾಜಗಳ ನಡುವಿನ ಆರ್ಥಿಕ ಸಂಬಂಧಗಳನ್ನು ವಿವರಿಸುವ ಪ್ರಯತ್ನವಾಗಿದೆ.

ಸಂತೆ ಎಂಬುದು ಕೇವಲ ವ್ಯವಹಾರಕ್ಕಾಗಿ ಅಲ್ಲದೆ ಅಲ್ಲಿ ಮನರಂಜನೆಗೆ ಅವಕಾಶವಿತ್ತು. ಇಂದು ನಾವು ಕರೆಯಲ್ಪಡುವ ಬುಡಕಟ್ಟು, ಶೋಷಿತ ಹಾಗೂ ನಿರ್ಲಕ್ಷಿತ ಸಮುದಾಯಗಳಾದ ಕರಡಿ ಕುಣಿಸುವವರು, ಹಗಲುವೇಷಗಾರರು, ಡೊಂಬರು, ಹಾವಾಡಿಗರು, ಸುಡುಗಾಡು ಸಿದ್ಧರು, ಮನರಂಜನೆ ನೀಡುವ ಮೂಲಕ ಗಳಿಸಿದ ಹಣದಿಂದ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ನಾಟೀ ವೈದ್ಯ, ಔಷಧಿ ಮಾರಾಟ, ಕುರುಡರು-ಕುಂಟರು, ಅನಾಥರು, ಅಂಗವಿಕಲರು, ವೃದ್ಧರು, ದೇವದಾಸಿಯರು, ಜೋಗಮ್ಮ, ಜೋಗಪ್ಪನವರು ಸಂತೆಯಲ್ಲಿ ಭಿಕ್ಷೆ ಬೇಡುವ ಮೂಲಕ ಬದುಕಿಗೆ ಅವಶ್ಯಕವಾದ ಒಂದಿಷ್ಟು ಗಳಿಕೆಯನ್ನು (ಆ ದಿನದ ಜೀವನಕ್ಕೆ ಅವಶ್ಯವಾದ) ಸಂತೆಯ ದಿನ ಪಡೆಯುತ್ತಾರೆ. ಇಂದಿಗೂ ಸಹ ಈ ವ್ಯವಸ್ಥೆಯು ರೂಢಿಯಲ್ಲಿದೆ. ಸಂತೆಗಳು ಅನೇಕ ಜನ ಸಮುದಾಯಗಳಿಗೆ ಆಶ್ರಯ ತಾಣಗಳಾಗಿವೆ. ಅಂದರೆ ವ್ಯಾಪಾರಿಗಳಿಗೆ, ಮಧ್ಯವರ್ತಿಗಳಿಗೆ, ಗ್ರಾಹಕರಿಗೆ ಮತ್ತು ಕೃಷಿಕರಿಗೆ ಅನುಕೂಲಕರವಾಗಿವೆ. ಈ ಸಂತೆಗಳಿಂದ ಅನೇಕ ಅನುಕೂಲಗಳು ಉಂಟು. ಅದಕ್ಕಾಗಿಯೇ ಈ ಸಂತೆಗಳು ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ಸಾಗಿಕೊಂಡು ಬರುತ್ತಿವೆ. ಆದರೆ ಸಂತೆಯ ಸ್ವರೂಪದಲ್ಲಿ ಬದಲಾವಣೆಗಳು ಸಹ ಆಗುತ್ತಿವೆ. ಈ ಸಂತೆಗಳು ಗ್ರಾಮೀಣ ಮಟ್ಟದಲ್ಲಿ ಮಾತ್ರ ಉಳಿದಿದ್ದು, ಅನೇಕ ಜನರು ಅದರಲ್ಲೂ ಬುಡಕಟ್ಟು ಸಮುದಾಯಗಳಿಗೆ ಸ್ವಲ್ಪಮಟ್ಟಿಗೆ ಸಹಾಯಕವಾಗಿದೆ. ಬುಡಕಟ್ಟು ಜನರ ಪಾಲ್ಗೊಳ್ಳುವಿಕೆಯನ್ನು ಸಂತೆಗಳಲ್ಲಿ

ವಿಶೇಷವಾಗಿ ಕಾಣುತ್ತೇವೆ. ಸಂತೆಯಲ್ಲಿ ಜೀವನಾವಶ್ಯಕ ಪದಾರ್ಥಗಳನ್ನು ಖರೀದಿಸಲು ಬರುವ ಗ್ರಾಹಕರ ಜನಜಂಗುಳಿಯಲ್ಲಿ ವಿಶೇಷವಾಗಿ ಕಾಣಸಿಗುವ ಬುಡಕಟ್ಟು ಜನರನ್ನು ಸ್ಪಷ್ಟವಾಗಿ ಗುರುತಿಸಲು ಬರುತ್ತದೆ. ಉದಾಹರಣೆಗೆ, ಹಗಲುವೇಷಗಾರರು, ಕರಡಿ ಕುಣಿಸುವವರು, ಡೊಂಬರು, ಹಾವಾಡಿಗರು, ಇವರು ತಮ್ಮ ಜೀವನೋಪಾಯಕ್ಕಾಗಿ ಮನರಂಜನೆ ನೀಡುವ ವೃತ್ತಿಯನ್ನು ನಿರ್ವಹಿಸುತ್ತಿದ್ದಾರೆ. ಒಂದೊಂದು ವಾರದ ದಿನಗಳಲ್ಲಿ ಒಂದೊಂದು ಪ್ರದೇಶದಲ್ಲಿ ಸಂತೆ ಜರುಗುವುದರಿಂದ ಇವರಿಗೆ ಸಂತೆಗಳೇ ಗಳಿಕೆಯ ಆಧಾರವಾಗಿದೆ. ಇದಲ್ಲದೇ ಲಂಬಾಣಿ ಜನಸಮುದಾಯ ಕಟ್ಟಿಗೆ ಮತ್ತು ದನಗಳಿಗೆ ಮೇವು ಮಾರುವುದನ್ನು ಸಂತೆಗಳಲ್ಲಿ ಕಾಣುತ್ತೇವೆ. ಅವರು ತಮ್ಮ ಜೀವನಕ್ಕಾಗಿ ಈ ಸಂತೆಗಳನ್ನೇ ನಂಬಿ ಬದುಕುತ್ತಿದ್ದಾರೆ. ಅಂದರೆ ಈ ಸಂತೆಗಳಿಗೂ ಮತ್ತು ಬುಡಕಟ್ಟು ಸಮುದಾಯಗಳಿಗೂ ವಿಶಿಷ್ಟತೆರನಾದ ಸಂಬಂಧವಿರುವುದನ್ನು ನಾವು ಗುರುತಿಸುತ್ತೇವೆ. ಸಂತೆಗಳು ನಿರ್ದಿಷ್ಟವಾದ ಪ್ರದೇಶಗಳಲ್ಲಿ ನಡೆಯುತ್ತಿದ್ದರೂ ಅದರಿಂದ ಎಲ್ಲ ರಂಗಗಳಿಗೂ ಅನುಕೂಲವಾಗಿ ಎಲ್ಲಾ ಕ್ಷೇತ್ರಗಳಿಗೆ ಪೂರಕವಾಗಿ ನಡೆಯುತ್ತಿರುವುದನ್ನು ಕಾಣುತ್ತೇವೆ.

ಸಂತೆಗಳು ಮತ್ತು ಬುಡಕಟ್ಟು ಸಮುದಾಯಗಳ ಮಧ್ಯೆ ಅನ್ಯೋನ್ಯವಾದ ಸಂಬಂಧವಿದೆ. ಸಂತೆಯಿಂದಲೇ ಬದುಕನ್ನು ಸಾಗಿಸುವ ಬುಡಕಟ್ಟುಗಳು ಅನೇಕ. ವಿವಿಧ ಸಂತೆಗಳಲ್ಲಿ ವ್ಯಾಪಾರ ನಡೆಸಿಕೊಂಡೇ ಜೀವನ ಸಾಗಿಸುವ ಬುಡಕಟ್ಟು ಸಮುದಾಯಗಳು ಅನೇಕ ಇವೆ. ಉದಾಹರಣೆಗೆ ಮೇದರು ತಾವು ಸಿದ್ಧಪಡಿಸಿದ ಬಿದಿರಿನ ಸಾಧನ ಸಾಮಗ್ರಿಗಳನ್ನು ಒಂದೊಂದು ಗ್ರಾಮದಲ್ಲಿ ಸಂತೆ ಕಟ್ಟುವ ನಿರ್ದಿಷ್ಟ ದಿನಗಳಂದು ಹೋಗಿ ಮಾರಾಟ ಮಾಡುವ ಮೂಲಕ ತಮ್ಮ ಜೀವನವನ್ನು ಸಾಗಿಸುವುದು ಅನಿವಾರ್ಯವಾಗಿದೆ. ಇವರಿಗೆ ಸಿದ್ಧಪಡಿಸಿದ ವಸ್ತುಗಳ ಮಾರಾಟಕ್ಕೆ ಸಂತೆಯೇ ಆಧಾರ. ಅದರಂತೆಯೇ ಸಂತೆಯ ಬಗೆಗಳು ಸಹ ಅನೇಕ ಇವೆ. ಅದರಲ್ಲಿ ಕುರಿಗಳ ಸಂತೆ, ದನಕರುಗಳ ಸಂತೆ, ಬಟ್ಟೆಯ ಸಂತೆ, ಸಾರ್ವತ್ರಿಕ ಅಥವಾ ಸಾಮಾನ್ಯ ಸಂತೆಗಳನ್ನು ಕಾಣುತ್ತೇವೆ. ಆದರೆ ಸಂತೆಯಲ್ಲಿರುವ ಬುಡಕಟ್ಟುಗಳು ಅಲ್ಪಸ್ವಲ್ಪ ಬಂಡವಾಳವನ್ನು ಹಾಕಿ ಅಥವಾ ಬಂಡವಾಳವನ್ನು ತೊಡಗಿಸಿ, ಆರ್ಥಿಕತೆಯ ಕೊರತೆ ಇರುವ ಬಂಡವಾಳರಹಿತ ವ್ಯಾಪಾರಿ ಬುಡಕಟ್ಟುಗಳು ಹೇಗೋ ಜೀವನವನ್ನು ಸಾಗಿಸುತ್ತಿರುವುದನ್ನು ಇಂದು ನಡೆಯುವ ಸಂತೆಗಳಲ್ಲಿ ಪ್ರತ್ಯಕ್ಷವಾಗಿ ಕಾಣುತ್ತೇವೆ. ಸಂತೆಗಳು ಬಂಡವಾಳಶಾಹಿಗಳ ಹಿಡಿತದಲ್ಲಿ ಉಳಿದುಕೊಂಡಿದ್ದು, ಮಧ್ಯವರ್ತಿಗಳ ಶೋಷಣೆಗೆ ಒಳಗಾಗಿ ಬುಡಕಟ್ಟು ಜನರು ತೊಂದರೆ ಅನುಭವಿಸುವಂತಾಗಿದೆ.

ಸಂತೆಯಲ್ಲಿ ಹತ್ತು ಹಲವಾರು ಮಾದರಿಯ ವ್ಯಾಪಾರಿಗಳಿದ್ದಾರೆ. ಇವರನ್ನು ಸಗಟು ವ್ಯಾಪಾರಿಗಳು (ಬಂಡವಾಳಶಾಹಿ ವ್ಯಾಪಾರಿಗಳು), ಚಿಲ್ಲರೆ ವ್ಯಾಪಾರಿಗಳು, ಅಲೆಮಾರಿ ವ್ಯಾಪಾರಿಗಳು, ದಲ್ಲಾಳಿ ಅಥವಾ ಮಧ್ಯವರ್ತಿಗಳು, ಬಂಡವಾಳರಹಿತ ವ್ಯಾಪಾರಿಗಳು ಇನ್ನು ಮುಂತಾಗಿ ಹೆಸರಿಸಬಹುದು. ಈ ವ್ಯಾಪಾರಿ ಸಮೂಹದಲ್ಲಿ ಅನೇಕ ಜಾತಿ ವರ್ಗಗಳಿಗೆ ಸೇರಿದವರನ್ನು ಸಹ ಕಾಣುತ್ತೇವೆ. ಆದರೆ ಅವರಲ್ಲಿ ಉನ್ನತ ಜಾತಿ ವರ್ಗಕ್ಕೆ ಸೇರಿದವರೇ ಹೆಚ್ಚು. ಬುಡಕಟ್ಟು ಜನ ಸಮುದಾಯಕ್ಕೆ ಸೇರಿದವರು ಕಡಿಮೆ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಸಂತೆಯಲ್ಲಿ ಬುಡಕಟ್ಟು ಜನರು ಗ್ರಾಹಕರಾಗಿರುವುದನ್ನು ಕಾಣುತ್ತೇವೆ. ಅವರಲ್ಲಿ

ಬುಡಕಟ್ಟು ಕೂಲಿ ಸಮುದಾಯ, ಬುಡಕಟ್ಟು ಕೃಷಿಕರು, ಬುಡಕಟ್ಟು ಗೃಹ ಕೈಗಾರಿಕೆಗಳನ್ನು ಹೊಂದಿರುವವರು ಕಂಡುಬರುತ್ತಾರೆ. ಅಲ್ಲದೇ ಸಂತೆಯಲ್ಲಿ ಬುಡಕಟ್ಟು ಜನಸಮುದಾಯಕ್ಕೆ ಸೇರಿದ ಭಿಕ್ಷುಕರನ್ನು ಸಹ ಕಾಣುತ್ತೇವೆ. ಅದರಲ್ಲೂ ಧಾರ್ಮಿಕ ಭಿಕ್ಷುಕರು, ತಮ್ಮ ದೈವಗಳ ಹೆಸರಲ್ಲಿ ಭಿಕ್ಷೆ ಬೇಡುವವರಾಗಿರುತ್ತಾರೆ. ಅಲೆಮಾರಿ ಭಿಕ್ಷುಕರು, ಸಾಮಾನ್ಯ ಭಿಕ್ಷುಕರು ಇವರು ಸ್ಥಳಾಂತರದ ಅಥವಾ ವಲಸೆ ಹೋಗುವ ಭಿಕ್ಷುಕರಾಗಿದ್ದು, ಸಂತೆಗಳಲ್ಲಿ ಕಾಣಸಿಗುತ್ತಾರೆ. ಇನ್ನು ಅಂಗವಿಕಲ ಭಿಕ್ಷುಕರು, ವೃದ್ಧ ಭಿಕ್ಷುಕರು ಮತ್ತು ಬುದ್ಧಿಮಾಂದ್ಯ ಭಿಕ್ಷುಕರು ಇವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅಲ್ಲದಿದ್ದರೂ ಅಲ್ಪ ಪ್ರಮಾಣದಲ್ಲಿ ಬುಡಕಟ್ಟು ಸಮುದಾಯದವರು ಇದ್ದಾರೆ. ಬುಡಕಟ್ಟು ಸಮುದಾಯದವರು ಇಂದಿಗೂ ಭಿಕ್ಷಾಟನೆ ಮಾಡಲು ಇಷ್ಟಪಡುವುದಿಲ್ಲ. ಇವರ ಪ್ರಕಾರ ಧಾರ್ಮಿಕ ಆಚರಣೆ ಮಾಡುತ್ತ ಹಣ ಬೇಡುವುದು ವೃತ್ತಿಯೇ ಹೊರತು ಭಿಕ್ಷಾಟನೆ ಅಲ್ಲ.

ಒಟ್ಟಾರೆ ಸಂತೆ ಎಂಬ ಕಲ್ಪನೆ ಮಾರುಕಟ್ಟೆಯ ಒಂದು ರೂಪ. ಗ್ರಾಮೀಣ ಜನರ ಬದುಕಿನಲ್ಲಿ ಸಂತೆಯು ಪ್ರಮುಖ ಸ್ಥಾನವನ್ನು ಹೊಂದಿದೆ. ಸಂತೆಯಲ್ಲಿ ಪರಸ್ಪರ ವಿನಿಮಯ, ಕೃಷಿ ಉತ್ಪನ್ನಗಳ ಕೊಡುಕೊಳ್ಳುವಿಕೆ, ಜೀವನಾವಶ್ಯಕ ಪದಾರ್ಥಗಳ ಖರೀದಿಸುವಿಕೆ, ಮನರಂಜನಾ ಚಟುವಟಿಕೆ, ಅನೇಕ ಸಮುದಾಯಗಳ ಬೆರೆಯುವಿಕೆ ಹೀಗೆ ವಿವಿಧ ಉದ್ದೇಶಗಳಿಗಾಗಿ ಒಟ್ಟುಗೂಡಿಸುವ ಈ ವ್ಯವಸ್ಥೆಯೇ ಸಂತೆ. ಇಂಥ ಸಂತೆಯಲ್ಲಿ ಬುಡಕಟ್ಟು ಸಮುದಾಯಗಳು ತಮ್ಮ ಮೂಲ ವೃತ್ತಿ ಹಾಗೂ ಇನ್ನಿತರ ವೃತ್ತಿಗಳನ್ನು ಮಾಡುತ್ತ ತಮ್ಮ ಜೀವನವನ್ನು ಕಂಡುಕೊಂಡಿದ್ದಾರೆ ಎಂಬುದನ್ನು ಅಧ್ಯಯನ ಮಾಡುವುದಕ್ಕಾಗಿ "ಸಂತೆ ಮತ್ತು ಬುಡಕಟ್ಟು ಸಮುದಾಯ" ಎಂಬ ಶೀರ್ಷಿಕೆ ಅಡಿಯಲ್ಲಿ ಈ ಸಂಪ್ರಬಂಧವನ್ನು ರಚಿಸಲಾಗುತ್ತಿದೆ.

### ೧:೨ ಅಧ್ಯಯನದ ಉದ್ದೇಶ

ಯಾವುದೇ ಒಂದು ಅಧ್ಯಯನಕ್ಕೆ ನಿರ್ದಿಷ್ಟ ಉದ್ದೇಶಗಳು ಇರುತ್ತವೆ. ಅದರಂತೆ "ಸಂತೆ ಮತ್ತು ಬುಡಕಟ್ಟು ಸಮುದಾಯ" ಎಂಬ ಅಧ್ಯಯನ ಈ ಕೆಳಗಿನ ಉದ್ದೇಶಗಳನ್ನು ಮುಖ್ಯವಾಗಿಟ್ಟುಕೊಂಡಿದೆ.

೧. ಸಂತೆಯ ಪ್ರಾಚೀನತೆ, ಸ್ವರೂಪ ಹಾಗೂ ಅದರ ಚಾರಿತ್ರಿಕ ಬೆಳವಣಿಗೆಯನ್ನು ಅಧ್ಯಯನ ಮಾಡುವುದು.

೨. ಸಂತೆಯಲ್ಲಿನ ಬುಡಕಟ್ಟು ಸಮುದಾಯಗಳ ಪಾತ್ರವನ್ನು ಅಧ್ಯಯನ ಮಾಡುವುದು.

೩. ಸಂತೆಯಲ್ಲಿ ಬುಡಕಟ್ಟುಗಳು ನಿರ್ವಹಿಸುವ ಒಟ್ಟು ಆರ್ಥಿಕ ಚಟುವಟಿಕೆಗಳ ಸ್ವರೂಪವನ್ನು ವಿವರಿಸುವುದು.

### ಅಧ್ಯಯನದ ಊಹೆಗಳು

೧. ಬುಡಕಟ್ಟು ಸಮುದಾಯದ ಕೆಲವು ಜನರು ಸಂತೆಯನ್ನು ಅವಲಂಬಿಸಿ ಜೀವನವನ್ನು ಸಾಗಿಸುತ್ತಿದ್ದಾರೆ.

೨. ಸಂತೆಗಳಿಂದ ಬುಡಕಟ್ಟು ಸಮುದಾಯ ಮುಖ್ಯವಾಹಿನಿಯೊಂದಿಗೆ ಬೆರೆಯುವಂತಾಗಿದೆ.

### ೧:೩ ಅಧ್ಯಯನ ವ್ಯಾಪ್ತಿ

ಸಂಶೋಧಕರು ಒಂದು ಅಧ್ಯಯನವನ್ನು ಪರಿಪೂರ್ಣವಾಗಿ ಅಥವಾ ಸ್ಪಷ್ಟವಾಗಿ ಮತ್ತು ವಸ್ತುನಿಷ್ಠವಾಗಿ ಎಲ್ಲಾ ಅಂಶಗಳನ್ನೊಳಗೊಂಡಂತೆ ಸಂಶೋಧನಾ ಕಾರ್ಯ ನಿರ್ವಹಿಸಬೇಕಾದರೆ, ಅಧ್ಯಯನಕ್ಕೊಂದು ನಿರ್ದಿಷ್ಟವಾದ ವ್ಯಾಪ್ತಿ ಅತ್ಯವಶ್ಯಕ. ಅದಕ್ಕಾಗಿ ಅಧ್ಯಯನದ ಅನುಕೂಲಕ್ಕಾಗಿ ನಿರ್ದಿಷ್ಟ ವ್ಯಾಪ್ತಿಯನ್ನು ಹಾಕಿಕೊಳ್ಳಲಾಗಿದ್ದು, 'ಸಂತೆಗಳು ಮತ್ತು ಬುಡಕಟ್ಟು ಸಮುದಾಯ' ಎಂಬ ಶೀರ್ಷಿಕೆಯಡಿಯಲ್ಲಿ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಕೂಡ್ಲಿಗಿ, ಬಳ್ಳಾರಿ, ಹೊಸಪೇಟೆ, ಸಂಡೂರು, ಹೂವಿನ ಹಡಗಲಿ, ಹಗರಿಬೊಮ್ಮನಹಳ್ಳಿ ಮತ್ತು ಸಿರುಗುಪ್ಪ ತಾಲೂಕುಗಳಿಗೆ ಅಧ್ಯಯನವನ್ನು ಸೀಮಿತಗೊಳಿಸಿಕೊಳ್ಳಲಾಗಿದೆ.

ಈ ಮೇಲೆ ತಿಳಿಸಿರುವಂತಹ ಬಳ್ಳಾರಿ ಜಿಲ್ಲೆಯ ತಾಲೂಕುಗಳಲ್ಲಿ ಮತ್ತು ಗ್ರಾಮೀಣ ಮಟ್ಟದ ಇನ್ನಿತರ ಹಲವಾರು ಗ್ರಾಮಗಳಲ್ಲಿ ನಡೆಯುವ ಅನೇಕ ಸಂತೆಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಸಂತೆಗಳಲ್ಲಿ ಕಂಡುಬರುವ ಅದರಲ್ಲೂ ಬಳ್ಳಾರಿ ಜಿಲ್ಲೆಯ ತಾಲೂಕು ಪ್ರದೇಶಗಳಲ್ಲಿ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಭಾಗವಹಿಸುವ ಬುಡಕಟ್ಟು ಸಮುದಾಯಗಳಾದ ಬೇಡರು (ನಾಯಕ, ವಾಲ್ಮೀಕಿ), ಮೇದರು, ಹಕ್ಕಿಪಕ್ಕಿ (ಪಾರ್ದಿ), ಹಗಲುವೇಷಗಾರರು, ಸಿಂಧೋಳ್ಳಿ (ದುರುಗ-ಮುರುಗಿ), ಗೋಸಾಯಿಗಳು (ಗೋಸಂಗಿ), ಸುಡುಗಾಡು ಸಿದ್ಧರು, ಕೊರಚರು (ಕೊರವ), ರಾಜಗೊಂಡ, ಲಂಬಾಣಿ, ಹಂಡಿಜೋಗಿ, ಬುಡಬುಡಕಿ ಹೀಗೆ ಇನ್ನಿತರ ಅನೇಕ ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸಂತೆ ಮತ್ತು ಬುಡಕಟ್ಟು ಸಮುದಾಯ ಈ ಎರಡರ ಸಂಬಂಧದ ಬಗ್ಗೆ ಈವರೆಗೆ ಯಾವುದೇ ಅಧ್ಯಯನ ನಡೆದಿರುವುದಿಲ್ಲ. ಆದ್ದರಿಂದ ನನ್ನ ಅಧ್ಯಯನವು ಮೇಲೆ ಹೇಳಿದ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಸಂತೆಗಳು ಮತ್ತು ಬುಡಕಟ್ಟು ಸಮುದಾಯಗಳನ್ನು ಒಳಗೊಂಡಿರುತ್ತದೆ.

### ೧:೪ ಅಧ್ಯಯನದ ಮಹತ್ವ

'ಸಂತೆಯಲ್ಲೊಂದು ಮನೆಯ ಮಾಡಿ ಶಬ್ದಕ್ಕೆ ಅಂಜಿದೊಡೆಂತಯ್ಯ', 'ಇದೇನು ಸ್ಕೂಲೋ ಸಂತೆಯೋ' ಎಂಬ ಇತ್ಯಾದಿ ಮಾತುಗಳನ್ನು ಕೇಳಿಸಿಕೊಂಡಾಗ 'ಸಂತೆ' ಎಂದರೆ ಗದ್ದಲದಿಂದ ಕೂಡಿದ ಜನಸಮೂಹ ಎಂಬುದು ಗೊತ್ತಾಗುತ್ತದೆ. ಅಂದರೆ ಸಂತೆಯು ವಿಶಿಷ್ಟವಾದ ಮಹತ್ವವನ್ನು ಹೊಂದಿರುವುದು ಎಲ್ಲರಿಗೂ ತಿಳಿದಿರುವ ವಿಷಯವಾಗಿದೆ. ಸಂತೆ ಎಂದರೆ ವ್ಯಾಪಾರಸ್ಥರು ಹಾಗೂ ಗ್ರಾಹಕರು ಒಂದು ನಿರ್ದಿಷ್ಟವಾದ ಸ್ಥಳದಲ್ಲಿ ಒಂದು ನಿಗದಿಪಡಿಸಿದ ದಿನದಂದು ಒಂದೆಡೆ ಸೇರಿ ವ್ಯಾಪಾರ ವಹಿವಾಟು ಮಾಡುವುದನ್ನೇ 'ಸಂತೆ' ಎಂದು ಹೇಳುತ್ತೇವೆ. 'ಉದರ ನಿಮಿತ್ತಂ ಬಹುಕೃತವೇಷಂ' ಎಂಬ ನಾಣ್ಣುಡಿಯಂತೆ ಮನುಷ್ಯರು ತಮ್ಮ ಹೊಟ್ಟೆಪಾಡಿಗಾಗಿ ಏನೆಲ್ಲಾ ವೇಷಗಳನ್ನು ಹಾಕುತ್ತಾರೆ. ಅದು ಅವರಿಗೆ ಅನಿವಾರ್ಯ. ಅಂತಹವುಗಳಲ್ಲಿ ವ್ಯಾಪಾರವೂ ಒಂದು. ಅದರಲ್ಲಿ ಸಂತೆಯ ವ್ಯಾಪಾರವೂ ಸೇರಿರುತ್ತದೆ. ಸಂತೆಯಲ್ಲಿ ಹಲವಾರು ರೀತಿಯ ವ್ಯಾಪಾರಿಗಳು ಕಂಡುಬರುತ್ತಾರೆ. ಅವರಲ್ಲಿ ಖಾಯಂ ವ್ಯಾಪಾರಿಗಳು, ಅಲೆಮಾರಿ ವ್ಯಾಪಾರಿಗಳು, ಚಿಲ್ಲರೆ ವ್ಯಾಪಾರಿಗಳು, ಮುಂತಾದವರು. ಅದರಂತೆಯೇ ಸಂತೆಯಲ್ಲಿ ನಾನಾ ಬಗೆಯ

ಸಂತೆಗಳನ್ನು ಕಾಣುತ್ತೇವೆ. ಅನೇಕ ರೀತಿಯ ಸಂತೆಗಳು ವಿಶಿಷ್ಟವಾಗಿ, ವಿಶೇಷ ದಿನಮಾನಗಳಲ್ಲಿ ನಡೆಯುವುದರಿಂದ ಜನ ಸಾಮಾನ್ಯರಿಗಾಗುವ ಅನುಕೂಲಗಳ ಮಹತ್ವವನ್ನು ಮರೆಯುವಂತಿಲ್ಲ. ಸಂತೆ ಎಂಬುದು ಗ್ರಾಮೀಣ ಜನರ ಬದುಕಿನ ಒಂದು ಸಂಗಾತಿ. ಸಂತೆ ಇಲ್ಲದೇ ಅವರ ಬದುಕೇ ಇಲ್ಲ. ಏಕೆಂದರೆ, ಗ್ರಾಮೀಣ ಪ್ರದೇಶದಲ್ಲಿ ಇರುವವರು ಹೆಚ್ಚಾಗಿ ಹಿಂದುಳಿದವರು, ಮೇಲಾಗಿ ಬಡವರು. ಅವರು ಸಂತೆಯನ್ನು ಮಾಡುವುದು ಕೇವಲ ವಾರಕ್ಕೊಮ್ಮೆ ಮಾತ್ರ. ಅವರಿಗೆ ಹಣದ ಅಭಾವ ಬಹಳ. ಅವರು ಹೊಟ್ಟೆಪಾಡಿಗಾಗಿ ಇನ್ನೊಬ್ಬರ ಹೊಲದಲ್ಲಿ ಕೂಲಿ ಮಾಡಿ, ಇಲ್ಲವೇ ಸಮೀಪದ ಹಳ್ಳಿ ಅಥವಾ ನಗರ ಪ್ರದೇಶಕ್ಕೆ ವಲಸೆ ಹೋಗಿ ದುಡಿದು ಗಳಿಕೆಯ ಹಣದಿಂದ ಜೀವನ ಸಾಗಿಸುತ್ತಾರೆ. ಇವರಿಗೆ ಕೆಲಸಕೊಟ್ಟ ಮಾಲೀಕರು ವಾರದಲ್ಲಿ ಒಮ್ಮೆ ಮಾತ್ರ ಇವರ ದುಡಿತಕ್ಕೆ ಪ್ರತಿಫಲವಾಗಿ ಹಣವನ್ನು ಕೊಡುತ್ತಾರೆ. ಈ ಪ್ರಕ್ರಿಯೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ.

ಸಂತೆಗಳು ಹೆಚ್ಚಾಗಿ ವಾರಕ್ಕೊಮ್ಮೆ ಮಾತ್ರ ನಡೆಯುತ್ತವೆ. ಹೀಗೆ ನಡೆಯುವ ಈ ಸಂತೆಗಳು ವಾರದ ಕಾಲಾವಕಾಶ ತೆಗೆದುಕೊಳ್ಳುವುದೇ ಒಂದು ವಿಶೇಷತೆ. ಗ್ರಾಮೀಣ ಪ್ರದೇಶಗಳಲ್ಲಿ ಜನಸಾಮಾನ್ಯರು ಒಂದು ವಾರ ಸಂತೆಗೆ ಹೋಗುವುದನ್ನು ತಪ್ಪಿಸುವುದಿಲ್ಲ. ಅದಕ್ಕಾಗಿ ಸಂತೆಗಳ ಅಧ್ಯಯನ ಅತ್ಯಂತ ಮಹತ್ವದ್ದಾಗಿದೆ. ಒಮ್ಮೆ ಸಂತೆಯನ್ನು ತಪ್ಪಿಸಿಕೊಂಡರೇ ಮತ್ತೊಂದು ಸಂತೆಗೆ ಕಾಯಲೇಬೇಕು. ಹಳ್ಳಿಗರ ನಾಡಿನ ಸಂತೆಗಳೇ ಬೇರೆ, ಪಟ್ಟಣದಲ್ಲಿನ ಸಂತೆಗಳ ಕಾರ್ಯ ವೈಖರಿಯೇ ಬೇರೆ. ಪಟ್ಟಣದಲ್ಲಿ ಸಂತೆಗಳನ್ನು ಮಾಡದಿದ್ದರೂ ಚಿಂತೆಯಿಲ್ಲ. ಏಕೆಂದರೆ ಪಟ್ಟಣ ಪ್ರದೇಶವು ಅನೇಕ ಸೌಕರ್ಯಗಳ ತಾಣ. ಬೇಕೆನಿಸಿದಾಗ ತಮಗೆ ಅಗತ್ಯವಾದ ಸಾಮಾನುಗಳನ್ನು ತೆಗೆದುಕೊಳ್ಳುವ ಸಾಧ್ಯತೆ ಇದೆ. ಆದರೆ ಹಳ್ಳಿಗಳಲ್ಲಿ ತಮಗೆ ಬೇಕಾಗುವ ಜೀವನಾವಶ್ಯಕ ಸಾಮಗ್ರಿಗಳನ್ನು ವಾರದ ಸಂತೆಯಂದು ಖರೀದಿಸಲೇಬೇಕು. ಏಕೆಂದರೆ ಗ್ರಾಮಗಳಲ್ಲಿ ಅಂಗಡಿಗಳು ಕಡಿಮೆ. ಸಂತೆಯಲ್ಲಿ ದೊರಕುವ ಸಾಮಗ್ರಿಗಳ ಬೆಲೆಯೇ ಬೇರೆ. ಸಂತೆಗಳು ಜನಸಾಮಾನ್ಯರಿಗೆ ಕಡಿಮೆ ದರದಲ್ಲಿ ಸಾಮಗ್ರಿಗಳನ್ನು ಒದಗಿಸುತ್ತವೆ. ಅದಕ್ಕಾಗಿ ಸಂತೆಗಳ ಪಾತ್ರದ ಮಹತ್ವವನ್ನು ಯಾರೂ ಕಡೆಗಣಿಸುವಂತಿಲ್ಲ.

ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಸಂತೆಯು ಮಾರುಕಟ್ಟೆಯ ಒಂದು ರೂಪದಂತೆ ಕಾರ್ಯ ನಿರ್ವಹಿಸುತ್ತಿದ್ದು, ಇಲ್ಲಿ ಅಸಂಘಟಿತ ವಲಯದ ಅಸ್ತಿತ್ವವಿದೆ. ಮಾತ್ರವಲ್ಲದೇ ಮುಕ್ತ ಮಾರುಕಟ್ಟೆಯ ಲಕ್ಷಣಗಳನ್ನು ಇದು ಹೊಂದಿದೆ. ಸಂತೆಯಲ್ಲಿ ಯಾವ ವ್ಯಾಪಾರವನ್ನಾಗಲಿ, ಯಾವ ಜನಾಂಗದವರೇ ಆಗಲಿ ಮುಕ್ತವಾದ ವ್ಯಾಪಾರವನ್ನು ಮಾಡಲು ಅವಕಾಶವಿದೆ. ಇಲ್ಲಿ ಲಾಭ ನಷ್ಟಗಳಿಗೆ ಹೆಚ್ಚಿನ ಆದ್ಯತೆ ಇದೆ. ಇನ್ನೂ ಅನೇಕರಿಗೆ ಸಂತೆ ಲಾಭದಾಯಕವಾಗಿದೆ. ಏಕೆಂದರೆ ತರಕಾರಿ ವ್ಯಾಪಾರಸ್ಥರಿಗೆ, ಬಟ್ಟೆ ವ್ಯಾಪಾರಸ್ಥರಿಗೆ ಮತ್ತು ಹಣ್ಣಿನ ವ್ಯಾಪಾರಿಗಳಿಗೆ ಇನ್ನಿತರ ಅನೇಕ ರಂಗದಲ್ಲಿ ದುಡಿಯುತ್ತಿರುವವರಿಗೆ ಜನಸಂದಣಿಯ ಕೇಂದ್ರ ಸ್ಥಳವಾದ ಈ ಸಂತೆಗಳು ಲಾಭದಾಯಕವಾಗಿವೆ. ಸಂತೆಗಳು ಜನಸಾಮಾನ್ಯರಿಗೆ ಮಾತ್ರವಲ್ಲ, ರಾಜಕೀಯ ಧುರೀಣರಿಗೆ ತಮ್ಮ ಪಕ್ಷದ ಪ್ರಚಾರಕ್ಕೆ ಅನುಕೂಲಕರವಾದ ಕೇಂದ್ರಬಿಂದುಗಳಾಗಿವೆ. ಜಾಹಿರಾತುದಾರರಿಗೆ ಈ ಸಂತೆಗಳೇ ಉಪಯುಕ್ತವಾಗಿವೆ. ಸಂತೆಗಳು ವ್ಯವಹಾರ ಚಟುವಟಿಕೆಯಿಂದ ಕೂಡಿರುವ ಅನೇಕ ಜನ

ಸಮುದಾಯಗಳ ಆಯಕಟ್ಟಿನ ಸ್ಥಳವಾಗಿದ್ದು ನಿರ್ದಿಷ್ಟವಾಗಿ ಗೊತ್ತುಪಡಿಸಿದ ಸ್ಥಳದಲ್ಲಿ, ಗೊತ್ತುಪಡಿಸಿದ ದಿನದಂದು ನಡೆಯುವ ಆರ್ಥಿಕ ಚಟುವಟಿಕೆಯ ಬೀಡಾಗಿವೆ. ಅದಕ್ಕಾಗಿಯೇ ಈ ಸಂತೆಗಳು ಅನೇಕರಿಗೆ, ಅನೇಕ ಜನ ಸಮುದಾಯಗಳಿಗೆ, ವ್ಯಾಪಾರಿಗಳಿಗೆ, ಮಧ್ಯವರ್ತಿಗಳಿಗೆ, ಗ್ರಾಹಕರಿಗೆ, ಭಿಕ್ಷುಕರಿಗೆ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿನ ಜನರಿಗೆ ಅನುಕೂಲಕರವಾಗಿರುವುದರಿಂದ ಈ ಸಂತೆಗಳ ಅಧ್ಯಯನವು ಮಹತ್ವದ್ದಾಗಿದೆ.

ಸಂತೆಗಳಲ್ಲಿ ಕೇವಲ ವ್ಯಾಪಾರಿವರ್ಗ ಮತ್ತು ಗ್ರಾಹಕವರ್ಗ ಮಾತ್ರ ಕಂಡುಬರುವುದಿಲ್ಲ. ಅದರ ಜೊತೆಯಲ್ಲಿಯೆ ಅನೇಕ ಬುಡಕಟ್ಟು ಜನಸಮುದಾಯಗಳ ಜೀವನ ನಿರ್ವಹಣೆಯ ಕೌಶಲ್ಯಗಳು ಕಂಡುಬರುತ್ತವೆ. ಬುಡಕಟ್ಟು ಸಮುದಾಯವು ತಮ್ಮ ಆರ್ಥಿಕ ತೊಂದರೆಯಿಂದ ಮಾತ್ರ ಬದುಕಿನ ಬವಣೆಯನ್ನು ಸಾಗಿಸದೆ ಧಾರ್ಮಿಕ ಆಚರಣೆಯ ಪಾಲನೆಯು ಸಹ ಕಂಡುಬರುತ್ತದೆ. ಉದಾಹರಣೆಗೆ ಜೋಗಮ್ಮ ಅಥವಾ ಜೋಗಪ್ಪನವರು ಮನೆಯ ಮಕ್ಕಳನ್ನು ಮತ್ತು ತಮ್ಮ ಜೀವನ ನಿರ್ವಹಣೆಗಾಗಿ ಸಾಕಷ್ಟು ಆದಾಯವಿದ್ದರೂ ಸಹ ಮನೆಯಲ್ಲಿ ಹಡಲಿಗೆ (ಧಾರ್ಮಿಕ ಆಚರಣೆಯಲ್ಲಿ ಉಪಯೋಗಿಸುವ ಒಂದು ಸಾಂಪ್ರದಾಯಿಕ ಬಿದಿರು ತಟ್ಟೆ)ಯನ್ನು ತಲ-ತಲಾಂತರಗಳಿಂದ ಇಟ್ಟುಕೊಂಡು ಉಳಿಸಿಕೊಂಡು ಬಂದಿದ್ದರಿಂದ ಅದನ್ನು ನಾಲ್ಕು ಮನೆಯನ್ನಾದರೂ ಅಥವಾ ನಾಲ್ಕು ಜನರನ್ನಾದರೂ ಬೇಡಿ ಹಡಲಿಗೆ ತುಂಬಿಸುವುದಕ್ಕಾಗಿ ಈ ಸಾಂಪ್ರದಾಯಕ ಪದ್ಧತಿಯನ್ನು ಪಾಲಿಸುವ ಬುಡಕಟ್ಟು ಸಮುದಾಯಗಳನ್ನು ಸಂತೆಯಲ್ಲಿ ಕಾಣುತ್ತೇವೆ. ಅಲ್ಲದೇ ಧರ್ಮದ ಹೆಸರಲ್ಲಿ ಬದುಕುವ ಮತ್ತು ಬದುಕನ್ನು ಸಾಗಿಸುತ್ತಿರುವ ಅನೇಕ ಬುಡಕಟ್ಟು ಸಮುದಾಯಗಳು ಸಂತೆಗಳಲ್ಲಿ ಕಾಣಿಸುತ್ತಾರೆ. ಅದಕ್ಕಾಗಿ ಬುಡುಕಟ್ಟು ಸಮುದಾಯಗಳಿಗೆ ಈ ಸಂತೆಗಳು ಆಶ್ರಯ ತಾಣಗಳಾಗಿದ್ದು, ಇವು ಅಧ್ಯಯನಕ್ಕೆ ಮಹತ್ವದ ಸಂಗತಿಗಳಾಗಿವೆ.

ಬಡತನದಿಂದ ಬಳಲುತ್ತಿರುವ ಅನೇಕ ಬುಡಕಟ್ಟು ಸಮುದಾಯಗಳು ಕಡಿಮೆ ಬಂಡವಾಳದಲ್ಲಿ ತಮ್ಮ ಪಾರಂಪರಿಕ ಜ್ಞಾನದಿಂದ ಗೃಹ ಕೈಗಾರಿಕೆಗಳನ್ನು ನಿರ್ವಹಿಸುತ್ತಾ ಸಂತೆಗಳಲ್ಲಿ ಮಾರಾಟ ಮಾಡಿ ಬಂದ ಲಾಭದ ಹಣದಿಂದ ಜೀವನ ಸಾಗಿಸುತ್ತಿರುವುದನ್ನು ಕಾಣುತ್ತೇವೆ. ಆದರೆ ಅವರು ತೊಡಗಿಸುವ ಬಂಡವಾಳದ ಮೊತ್ತವು ಕಡಿಮೆ, ಆದ್ದರಿಂದ ದೊರಕುವ ಲಾಭಾಂಶವು ಕಡಿಮೆ. ಏಕೆಂದರೆ ಆಧುನಿಕ ಬದುಕಿಗೆ ಮಾರುಹೋಗಿರುವ ಜನಸಮುದಾಯಗಳಿಗೆ ಬುಡಕಟ್ಟು ಸಮುದಾಯಗಳು ತಯಾರಿಸಿದ ವಸ್ತುಗಳು ಇಷ್ಟವಾಗಲಾರವು ಅಥವಾ ಆಧುನಿಕ ವಸ್ತುಗಳಿಗೆ (ಕಾರ್ಖಾನೆಗಳಿಂದ ಉತ್ಪಾದಿಸಲ್ಪಟ್ಟ ವಸ್ತುಗಳಿಗೆ) ಈ ಬುಡಕಟ್ಟು ಜನಸಮುದಾಯಗಳು ಉತ್ಪಾದಿಸಿದ ವಸ್ತುಗಳು ಪೈಪೋಟಿ ಮಾಡಲಾರವು. ಅದಕ್ಕಾಗಿ ಪಟ್ಟಣದಲ್ಲಿ ಮಾರಲ್ಪಡುವ ಈ ಬುಡಕಟ್ಟು ವಸ್ತುಗಳು ಗ್ರಾಮೀಣ ಸಂತೆಗಳಿಗೆ ಮಾತ್ರ ಸೀಮಿತ. ಉದಾಹರಣೆಗೆ, ಮೇದರು ತಮ್ಮ ಕರಕುಶಲತೆಯಿಂದ ಎಣೆಯುವ ಬುಟ್ಟಿಗಳು ಆಧುನಿಕ ಪ್ಲಾಸ್ಟಿಕ್ ಬುಟ್ಟಿಗಳೊಡನೆ ಸ್ಪರ್ಧಿಸಲಾರವು ಮತ್ತು ದೀರ್ಘಕಾಲ ಬಾಳಿಕೆ ಬರಲಾರವು. ಹಳೆಯ ವಿಧಾನದಲ್ಲಿ ತಯಾರಿಸಿದ ಕಸಬರಿಗೆಗಳು ಸಹ ಆಧುನಿಕ ಕಸಬರಿಗೆಗಳೊಂದಿಗೆ ಸೆಣಸಲಾರವು. ಅದಕ್ಕಾಗಿ ಸಂತೆಗಳನ್ನು ಅದರಲ್ಲೂ ಗ್ರಾಮೀಣ ಸಂತೆಗಳ ಬಳಿಗೆ ಹೋಗುವ ಈ ಬುಡಕಟ್ಟು ಸಮುದಾಯಗಳಿಗೆ ಸಂತೆಗಳು ಅತ್ಯವಶ್ಯಕ. ಇಂತಹ ಅನೇಕ ಬುಡಕಟ್ಟು ಸಮುದಾಯಗಳಿಗೆ ಆಶ್ರಯ ನೀಡುವ ಸಂತೆಗಳ ಅಧ್ಯಯನ ಮಹತ್ವದ್ದಾಗಿದೆ.

ಸಂತೆಗಳು ಆಧುನಿಕತೆಯ ಮೆರುಗನ್ನು ಪಡೆಯುತ್ತಲಿವೆ. ಅವು ಆಧುನಿಕತೆಯತ್ತ ವಾಲಿದರೇ ಬುಡಕಟ್ಟುಗಳು, ಕೃಷಿಕೂಲಿಗರು, ರೈತರು, ಹಿಂದುಳಿದ ವರ್ಗಗಳ ಜನರ ಸ್ಥಿತಿ ದುಸ್ತರವಾಗುತ್ತದೆ. ಏಕೆಂದರೆ ಗ್ರಾಮೀಣ ಸಂತೆಗಳಲ್ಲಿ ಮಾರಾಟವಾಗುವ ಸಾಮಗ್ರಿಗಳು ಕಡಿಮೆದರದಲ್ಲಿ ಲಭ್ಯವಾಗುವವು. ಒಂದೇ ಕಡೆ ಗ್ರಾಹಕರಿಗೆ ಬೇಕಾದ ಎಲ್ಲಾ ಸಾಮಾನು ಸರಂಜಾಮು ದೊರೆಯುವುವು. ಇದರಿಂದ ಹೆಚ್ಚು ಅನುಕೂಲವಾಗುವುದು. ನಗರದ ಮಾರುಕಟ್ಟೆಗಳಲ್ಲಿ ಹೆಚ್ಚು ಬೆಲೆ ಕೊಟ್ಟು ಖರೀದಿಸಬೇಕಲ್ಲದೆ ಅನಗತ್ಯ ಶ್ರಮವೂ ಹೌದು. ಗ್ರಾಮೀಣ ಭಾಗದ ಸಂತೆಗಳು ಸಾರ್ವಜನಿಕರಿಗೆ ಹೆಚ್ಚು ಅನುಕೂಲಕರವಾಗಿದೆ. ಆ ನಿಟ್ಟಿನಲ್ಲಿ ಸಂತೆಯನ್ನು ಬುಡಕಟ್ಟುಗಳು, ಹಿಂದುಳಿದವರು, ಕೃಷಿಕರು ಯಾವ ರೀತಿಯಲ್ಲಿ ಅವಲಂಬಿಸಿದ್ದಾರೆ ಎಂಬುದನ್ನು ತಿಳಿಯುವುದು ಅಗತ್ಯ. ಸಂತೆಗಳು ಕೇವಲ ಗ್ರಾಮೀಣ ನಾಡಿನಲ್ಲಿ ಮಾತ್ರವಲ್ಲ, ತಾಲೂಕು, ಜಿಲ್ಲಾ ಕೇಂದ್ರಗಳಲ್ಲೂ ಸಹ ಇವೆ. ಈ ಸಂತೆಗಳ ಇತಿಹಾಸ ಇಂದು ನಿನ್ನೆಯದಷ್ಟೇ ಅಲ್ಲ, ಪ್ರಾಚೀನ ಕಾಲದಿಂದ ಇಂದಿನ ಕಾಲದವರೆಗೂ ಸಾಗಿಬಂದಿದೆ. ಸಂತೆಯಿಂದ ಸಮಾಜದಲ್ಲಿರುವ ಜನತೆಗೆ ಅನೇಕ ಅನುಕೂಲ ಇರುವುದರಿಂದ ಇದರ ಅಧ್ಯಯನ ಅತ್ಯಗತ್ಯ. ಸಂತೆಗಳು ದೇಶದಾದ್ಯಂತ ಕಂಡುಬರುತ್ತಿವೆ. ಗ್ರಾಮೀಣ ಆರ್ಥಿಕತೆಯ ದೃಷ್ಟಿಯಿಂದ ಲಾಭದಾಯಕವಾಗಿವೆ. ಸಂತೆಗಳನ್ನು ಗಮನಿಸಿದಾಗ ಅವು ಎಲ್ಲಾ ರಂಗಕ್ಕೂ ಎಲ್ಲಾ ಜನ ಸಮುದಾಯಗಳಿಗೂ ತುಂಬಾ ಅನುಕೂಲಕರವಾಗಿ ಕಂಡುಬರುತ್ತಿವೆ. ಸಂತೆಯಲ್ಲಿ ಪ್ರಾದೇಶಿಕ ನಿರ್ದಿಷ್ಟತೆ ಇರುವುದಾದರೂ ಅವು ವಿಶಾಲ ವ್ಯಾಪ್ತಿಯನ್ನು ಹೊಂದಿರುವುದಿಲ್ಲ. ಕೇವಲ ಜನಸಂದಣಿಯ ಮಧ್ಯಭಾಗದಲ್ಲಿ ಸಂತೆಗಳು ನಡೆದು, ಅಷ್ಟರಲ್ಲಿಯೇ ಕಾರ್ಯಕ್ಷೇತ್ರವನ್ನು ಹೊಂದಿರುತ್ತವೆ. ವಿಶಾಲವಾದ ಮಾರುಕಟ್ಟೆಯನ್ನು ಮಾಡಿಸಿಕೊಟ್ಟರೂ ಸಂತೆಗಳು ಆ ಮಾರುಕಟ್ಟೆಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳದೇ ಹೆಸರಿಗೆ ಮಾತ್ರ ಬಳಸುತ್ತಿದ್ದು, ಸಂತೆಗಳು ಮೂಲ ರೂಪದಲ್ಲಿಯೇ ನಡೆಯುತ್ತಿವೆ. ಸಂತೆಗಳ ಸ್ವರೂಪದಲ್ಲಿ ಯಾವುದೇ ಬಗೆಯ ತೀವ್ರ ಬದಲಾವಣೆಗಳಾಗುತ್ತಿಲ್ಲ. ಇದಕ್ಕೆ ಅಧ್ಯಯನ ಮೂಲಕವೇ ಕಾರಣಗಳನ್ನು ಕಂಡುಕೊಳ್ಳಬೇಕಿದೆ.

ಸಂತೆಗಳು ಸಾಮಾನ್ಯವಾಗಿ ವೈವಿಧ್ಯಮಯ ವ್ಯಾಪಾರದ ಕೇಂದ್ರಗಳಾಗಿವೆ. ಸಂತೆಗಳನ್ನು ನೋಡಿದಾಕ್ಷಣ ಅವು ಒಂದು ಸ್ವಯಂ ಶಿಸ್ತಿಗೆ ಒಳಪಟ್ಟಂತೆ ಭಾಸವಾಗುತ್ತದೆ. ಏಕೆಂದರೆ ಒಂದೇ ಮಾದರಿಯ ವಸ್ತುಗಳನ್ನು ಒಂದು ಭಾಗದಲ್ಲಿ ಮಾತ್ರ ಮಾರಾಟ ಮಾಡಿದರೆ, ಮತ್ತೊಂದು ಬಗೆಯ ವಸ್ತುಗಳ ಮಾರಾಟ ಬೇರೆಯೇ ಇರುತ್ತವೆ. ಉದಾಹರಣೆಗೆ ಮೆಣಸಿನಕಾಯಿ ವ್ಯಾಪಾರ ಒಂದೇ ಕಡೆಯಲ್ಲಿ ಮಾರಾಟ ಮಾಡುವರು, ಹಾಗೆಯೇ ತೆಂಗಿನಕಾಯಿ ವ್ಯಾಪಾರವು ಒಂದೇ ಕಡೆ ನಡೆಯುವುದು. ಮುಂದುವರೆದು ಹೇಳುವುದಾದರೆ ಕಾಳು-ಕಡ್ಡಿಗಳು, ಚಪ್ಪಲಿಗಳು, ಮಿಠಾಯಿ, ಕುಂಕುಮ, ಕಿರಾಣಿ ಪದಾರ್ಥಗಳು, ಮಸಾಲೆ ಸಾಮಾನುಗಳು, ಒಣಮೀನು, ಸಿದ್ಧ ಉಡುಪುಗಳು, ಅಡಿಕೆ ಸಾಮಾನುಗಳು, ಹೂ ಮತ್ತು ಹಣ್ಣು, ಮಡಕೆ, ಸುಣ್ಣ, ಬಳೆ, ಮಹಿಳೆಯರ ಅಲಂಕಾರಿಕ ವಸ್ತುಗಳು ಹೀಗೆ ಅನೇಕ ರೀತಿಯ ವ್ಯಾಪಾರಿಗಳನ್ನು ಸಂತೆಯಲ್ಲಿ ಕಾಣುತ್ತೇವೆ. ಆದರೆ ಈ ವ್ಯಾಪಾರಿಗಳು ತಮ್ಮ ವ್ಯವಹಾರದಲ್ಲಿ ಲಾಭಾಂಶದ ಬಗೆಗೆ ಮತ್ತು ಅವರ ಹಿನ್ನೆಲೆಯ ಬಗೆಗೆ ಅಲ್ಲದೇ ಅವರು ಸಂತೆಯಲ್ಲಿ ತೊಡಗಿಸುವ ಬಂಡವಾಳದ ಬಗೆಗೂ ತಿಳಿದುಕೊಳ್ಳುವುದು ಅತ್ಯವಶ್ಯಕ. ಅವರ

ಆರ್ಥಿಕತೆಯು ಅವರ ವ್ಯವಹಾರದ ಮಟ್ಟವನ್ನು ನಿರ್ಧರಿಸುತ್ತದೆ. ಅಲ್ಪ ಬಂಡವಾಳದಲ್ಲೇ ವ್ಯವಹಾರವನ್ನು ಮಾಡುವವರು ಒಂದೆಡೆಯಾದರೆ, ಹೆಚ್ಚು ಬಂಡವಾಳ ಹಾಕಿ ವ್ಯವಹಾರ ಮಾಡುವವರನ್ನು ಸಹ ಕಾಣುತ್ತೇವೆ. ಇದಷ್ಟೇ ಅಲ್ಲದೇ ಸಂತೆಯಲ್ಲಿ ವಾರಕ್ಕೊಮ್ಮೆ ಅಲೆಮಾರಿ ವ್ಯಾಪಾರಿಗಳಾಗಿ, ಖಾಯಂ ವ್ಯಾಪಾರಿಗಳಾಗಿ ಅನೇಕರು ಕಂಡುಬರುತ್ತಾರೆ. ಕೃಷಿಕರು ತಾವುಗಳು ತಮ್ಮ ಹೊಲ ಗದ್ದೆಗಳಲ್ಲಿ ಬೆಳೆದ ದವಸ ಧಾನ್ಯಗಳನ್ನು ತಂದು ನೇರವಾಗಿ ಸಂತೆಯಲ್ಲಿ ಮಾರುವುದುಂಟು. ಇವರು ಮಧ್ಯವರ್ತಿಗಳನ್ನು ಅವಲಂಬಿಸುವುದಿಲ್ಲ. ಮಧ್ಯವರ್ತಿಗಳು ಕಡಿಮೆ ದರದಲ್ಲಿ ರೈತರ ವಸ್ತುಗಳನ್ನು ಪಡೆದು ತಾವೇ ವ್ಯವಹಾರದಲ್ಲಿ ತೊಡಗುತ್ತಾರೆ. ಈ ವ್ಯವಸ್ಥೆಯಲ್ಲದೇ ಮಧ್ಯವರ್ತಿಗಳು ಖರೀದಿ ಮಾಡಿ ಇನ್ನಿತರ ವ್ಯಾಪಾರಿಗಳಿಗೆ ಮಾರುತ್ತಾರೆ. ಈ ವ್ಯವಸ್ಥೆಗೆ 'ಸವಾಲು' ಮಾಡುವುದು ಎನ್ನುತ್ತಾರೆ. ಈ ವ್ಯವಸ್ಥೆ ಅನೇಕ ಸಂತೆಗಳಲ್ಲಿ ಕಾಣುತ್ತೇವೆ. ಇದರ ಹಿಂದೆ ರೈತರು ಶೋಷಣೆ ಅನುಭವಿಸುತ್ತಾರಾದರೂ ಅನೇಕ ಜನರ ಜೀವನಕ್ಕೆ ಆಧಾರವಾಗಿರುವುದರಿಂದ ಅದನ್ನು ಕೈ ಬಿಡುವಂತಿಲ್ಲ. ಸವಾಲಿನ ವ್ಯವಸ್ಥೆಯು ಅನೇಕರಿಗೆ ಅನುಕೂಲಕರವಾಗಿದೆ. ಆದ್ದರಿಂದ ಸಂತೆಯಲ್ಲಿ ದಲ್ಲಾಳಿ ಅಥವಾ ಮಧ್ಯವರ್ತಿಗಳ ಪಾತ್ರದ ಬಗೆಗೆ ಪ್ರಸ್ತಾಪಿಸುವುದು ಸೂಕ್ತವೆನಿಸುತ್ತದೆ.

ಹಾಗೆಯೇ ಸಂತೆಗಳು ಮತ್ತು ಬುಡಕಟ್ಟು ಸಮುದಾಯ ಇವೆರಡರ ನಡುವಣ ಮಹತ್ವವನ್ನು ತಿಳಿಯುವುದು ಅತ್ಯವಶ್ಯಕ. ಏಕೆಂದರೆ ಸಂತೆಯಲ್ಲಿ ಅನೇಕ ಬುಡಕಟ್ಟುಗಳು ಕಾಣಸಿಗುತ್ತವೆ. ಅವುಗಳಲ್ಲಿ ಬೇಡರು, ಮೇದರು, ಹಕ್ಕಿಪಿಕ್ಕಿಗಳು, ಸಿಂಧೋಳ್ಳಿಯರು. ಹೀಗೆ ನಾನಾ ರೀತಿಯ ಬುಡಕಟ್ಟು ಸಮುದಾಯಗಳು ಸಂತೆಯಲ್ಲಿ ಪಾಲ್ಗೊಂಡು ತಮ್ಮ ಜೀವನಾವಶ್ಯಕತೆಗೆ ತಕ್ಕಂತೆ ವ್ಯವಹಾರವನ್ನು ಮಾಡುತ್ತವೆ. ಅಲ್ಲದೆ ಈ ಸಮುದಾಯಗಳು ತಮ್ಮದೇ ಆದ ವೃತ್ತಿಗಳನ್ನು ಹೊಂದಿದ್ದು ಸಂತೆಯಲ್ಲಿ ವೃತ್ತಿಗೆ ಪೂರಕವಾದ ವ್ಯಾಪಾರದಲ್ಲಿ ತೊಡಗಿರುವರು.

ಸಂತೆಗಳು ಆರ್ಥಿಕ, ಸಾಮಾಜಿಕ, ರಾಜಕೀಯ, ಮನರಂಜನಾತ್ಮಕ, ಧಾರ್ಮಿಕ ಅಂಶಗಳನ್ನು ಒಳಗೊಂಡಿದ್ದು, ಈ ಎಲ್ಲಾ ಕ್ಷೇತ್ರಗಳಲ್ಲಿ ಸಂತೆಗಳು ಮಹತ್ವವನ್ನು ಪಡೆದುಕೊಂಡಿವೆ. ಉದಾಹರಣೆಗೆ ಆರ್ಥಿಕ ಅಂಶಗಳು ಹೆಚ್ಚಿನ ಪ್ರಾಮುಖ್ಯತೆ ಪಡೆದಿರುವುದು ಗೊತ್ತಿರುವ ವಿಷಯವೇ ಆಗಿದೆ. ಇನ್ನು ಸಾಮಾಜಿಕ ಅಂಶಗಳು ಎಂದಾಗ ಅನೇಕ ಜಾತಿ ವರ್ಗಗಳ ಜನರು ಬಂದು ಒಂದೆಡೆ ಸೇರುತ್ತಾರೆ. ಅವರಲ್ಲಿ ಸಾಮಾಜಿಕ ಅಸಮಾನತೆ ಕಂಡು ಬರುತ್ತದೆಯಾದರೂ, ವಿವಿಧ ವರ್ಗಗಳ ಜನರು ಅಲ್ಲಿ ಭಾಗವಹಿಸುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಇನ್ನು ಧಾರ್ಮಿಕ ಅಂಶಗಳಿಗೆ ಸಂಬಂಧಿಸಿದಂತೆ ಧಾರ್ಮಿಕ ವಿಚಾರಗಳಿಗೆ ಒಡ್ಡುವಾದ ಅನೇಕ ಸಮುದಾಯಗಳು ತಮ್ಮ ಧಾರ್ಮಿಕ ನಿಷ್ಠೆಗಾಗಿ ತಲೆಮಾರುಗಳಿಂದ ತಮ್ಮ ಕಾರ್ಯವನ್ನು ನಿರ್ವಹಿಸುವುದು ಸಹ ಕಂಡುಬರುತ್ತದೆ. ಸಂತೆ ಎಂದ ತಕ್ಷಣ ಹಲವಾರು ಜಾತಿ, ಧರ್ಮಗಳ ಜನರು ಸೇರುವ ಒಂದು ವ್ಯಾವಹಾರಿಕ ಕೇಂದ್ರವಾಗಿರುತ್ತದೆ. ಆದ್ದರಿಂದ ಇಂತಹ ಪ್ರದೇಶಗಳಲ್ಲಿ ಧರ್ಮ ಪ್ರಚಾರ ಕಾರ್ಯಗಳು ಸುಧಾರಣೆಗಳನ್ನು ನಡೆಸುವುದು ಬಹಳ ಲಾಭದಾಯಕ. ತಮ್ಮದೆಯಾವ ಸುಲಭ ಮಾರ್ಗವನ್ನು

ಅನುಸರಿಸುವುದರ ಮೂಲಕ ಒಂದು ಧರ್ಮದ ಜನರ ಮನಸ್ಸನ್ನು ಆಕರ್ಷಿಸಿ ತಮ್ಮ ಕೆಲಸವನ್ನು ಸಾಧಿಸುವ ಸಾಧ್ಯತೆಗಳಿವೆ. ರಾಜಕೀಯ ವಿಚಾರಗಳಿಗೆ ಸಂಬಂಧಪಟ್ಟಂತೆ ಹೇಳುವುದಾದರೆ ಇತ್ತೀಚಿನ ದಿನಮಾನಗಳಲ್ಲಿ ಸಂತೆಗಳು ರಾಜಕೀಯ ಕ್ಷೇತ್ರಕ್ಕೆ ಹತ್ತಿರವಾಗುತ್ತಿವೆ. ಏಕೆಂದರೆ ಗ್ರಾಮಪಂಚಾಯಿತಿ, ಮಂಡಲಪಂಚಾಯಿತಿ, ಜಿಲ್ಲಾ ಪಂಚಾಯಿತಿ, ರಾಜ್ಯಸಭೆ, ಲೋಕಸಭೆ, ಸಹಕಾರ ಸಂಘ ಇತ್ಯಾದಿ ಹತ್ತು ಹಲವಾರು ಸಂಘ-ಸಂಸ್ಥೆಗಳ ಚುನಾವಣೆ ಪ್ರಚಾರ ಕಾರ್ಯವನ್ನು ಊರಿಂದ ಊರಿಗೆ, ಮನೆಯಿಂದ ಮನೆಗೆ ನೇರವಾಗಿ ಮಾಡುವುದು ದುಸ್ತರವಾದುದು. ಆದ್ದರಿಂದ ಸಂತೆಗಳು ನಡೆಯುವ ದಿನಗಳನ್ನು ಗಮನಿಸಿ ಅಂದು ವಿವಿಧ ಪಕ್ಷಗಳ ಅಭ್ಯರ್ಥಿ ಅಥವಾ ಅವರ ಅನುಯಾಯಿಗಳು ಪ್ರಚಾರಕಾರ್ಯ ಮಾಡುವುದುಂಟು. ಆದ್ದರಿಂದ ಇಂದು ಸಂತೆಗಳು ಸಹ ವಿವಿಧೋದ್ದೇಶ ಕೇಂದ್ರಗಳಾಗಿವೆ. ರಾಜಕೀಯ ಲಾಭಗಳಿಗಾಗಿ ಅನೇಕ ಪಕ್ಷದವರು ತಮ್ಮ ಪ್ರಚಾರ ಕಾರ್ಯಗಳನ್ನು ಕೈಗೊಳ್ಳುವುದು ಸಂತೆಯಲ್ಲಿಯೇ ಹೆಚ್ಚು. ಅದಕ್ಕಾಗಿ ಈ ಕ್ಷೇತ್ರಗಳಿಗೆ ಅನುಕೂಲಕರವಾಗಿರುವ ಸಂತೆಗಳನ್ನು ವಿಶಿಷ್ಟ ರೀತಿಯಲ್ಲಿ ಅಧ್ಯಯನ ಮಾಡುವುದು ಮಹತ್ವದ್ದಾಗಿದೆ.

ನಗರಗಳಲ್ಲಿ ಪ್ರತಿನಿತ್ಯ ಮಾರುಕಟ್ಟೆಗಳು ಸಂತೆಗಳಂತೆ ಕಂಡುಬಂದರೆ ಗ್ರಾಮೀಣ ಜನ ಜೀವನದ ಬದುಕಿಗೆ ವಾರಕ್ಕೊಮ್ಮೆ ಒಂದೆಡೆ ಸೇರುವ ಮಾರುಕಟ್ಟೆಗಳೇ ಸಂತೆಗಳಾಗಿವೆ. ಒಟ್ಟಾರೆ ನಗರದಲ್ಲಾಗಲೀ ಗ್ರಾಮೀಣ ಪ್ರದೇಶದಲ್ಲಾಗಲೀ ಸಂತೆಗಳು ಬದುಕಿಗೆ ಅತ್ಯವಶ್ಯಕ. ದಿನನಿತ್ಯದ ಅವಶ್ಯಕ ವಸ್ತುಗಳು, ಮೂಲಭೂತ ಸೌಕರ್ಯಕ್ಕಾಗಿ ಬೇಕಾದ ಸರಕು ಸಾಮಗ್ರಿಗಳ ಮಾರಾಟ, ಮನರಂಜನೆಯನ್ನು ನೀಡುವ ವೃತ್ತಿಗಾರರ ಆಶ್ರಯ ತಾಣ, ಹೀಗೆ ನಾನಾ ರೀತಿಯಲ್ಲಿ ಜನ ಸಮುದಾಯದಕ್ಕೆ ಬೇಕಾದ ಸಂತೆಗಳು ದೇಶದ ಆರ್ಥಿಕ ಸ್ಥಿತಿಯ ಬೆನ್ನಲುಬಾಗಿವೆ. ದೇಶದ ಅಭಿವೃದ್ಧಿ ಕೃಷಿ ಚಟುವಟಿಕೆಯಿಂದಾದರೆ ಸಂತೆಗಳು ಆರ್ಥಿಕ ವಹಿವಾಟಿನ ಕೇಂದ್ರ ಬಿಂದುಗಳಾಗಿವೆ. ಪ್ರತಿಯೊಂದು ಉತ್ಪಾದನ ಸರಕುಗಳು ಮಾರಾಟವಾಗಬೇಕಾದದ್ದು ಮಾರುಕಟ್ಟೆ ಅಥವಾ ಸಂತೆಗಳಲ್ಲಿಯೇ. ಅದಕ್ಕಾಗಿ ಇಂದು ಸಂತೆಗಳ ಅಗತ್ಯತೆ ಇದೆ. ಈ ಅಧ್ಯಯನದಿಂದ ಸಂತೆಗಳ ಅವಶ್ಯಕತೆ ರಾಷ್ಟ್ರಕ್ಕೆ ಅತ್ಯವಶ್ಯಕ ಎಂಬುದನ್ನು ತಿಳಿಯುವುದೇ ಆಗಿದೆ. "ಸಂತೆ ಮತ್ತು ಬುಡಕಟ್ಟು ಸಮುದಾಯ"ದ ಶೀರ್ಷಿಕೆಯಡಿಯಲ್ಲಿ ಕೈಗೊಂಡಿರುವ ಈ ಅಧ್ಯಯನ ಸಂತೆಯಲ್ಲಿ ಬುಡಕಟ್ಟು ಸಮುದಾಯಗಳು ಯಾವ ಯಾವ ವೃತ್ತಿಗಳನ್ನು ಮಾಡುತ್ತಿದ್ದಾರೆ, ಈ ವೃತ್ತಿಗಳಿಂದ ಲಾಭ-ನಷ್ಟಗಳೇನು ಎಂಬುದನ್ನು ಮುಖ್ಯವಾಗಿ ತಿಳಿದುಕೊಳ್ಳುವುದೇ ಆಗಿರುವುದರಿಂದ ಈ ಅಧ್ಯಯನ ಬಹಳ ಮಹತ್ವದ್ದಾಗಿದೆ.

## ೧:೫ ಅಧ್ಯಯನದ ವಿಧಾನ

ಸಂಪ್ರಬಂಧದ ಉದ್ದೇಶಕ್ಕೆ ಅನುಗುಣವಾಗಿ ಸಮುದಾಯಗಳ ಮತ್ತು ಸಂತೆಗಳ ಮಾದರಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯ ಆಯ್ದ ಕೆಲವು ಸಂತೆಗಳು ಈ ಕೆಳಗಿನಂತಿವೆ.

## ಕೋಷ್ಟಕ - ೧.೧

## ಬಳ್ಳಾರಿ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಸಂತೆಗಳು

ಬಳ್ಳಾರಿ ಜಿಲ್ಲೆ

| ಬಳ್ಳಾರಿ (ತಾಲೂಕು) | ಹೆಚ್.ಬಿ.ಹಳ್ಳಿ (ತಾಲೂಕು) | ಹೊಸಪೇಟೆ (ತಾಲೂಕು) | ಹೂ.ಹಡಗಲಿ (ತಾಲೂಕು) | ಕೂಡ್ಲಿಗಿ (ತಾಲೂಕು) | ಸಂಡೂರು (ತಾಲೂಕು) | ಸಿರುಗುಪ್ಪ (ತಾಲೂಕು) |
|---|---|---|---|---|---|---|
| ಬಳ್ಳಾರಿ (ನ) | ಹೆಚ್.ಬಿ.ಹಳ್ಳಿ (ನ) | ಹೊಸಪೇಟೆ (ನ) | ಹೂ.ಹಡಗಲಿ (ನ) | ಕೂಡ್ಲಿಗಿ (ನ) | ಸಂಡೂರು (ನ) | ಸಿರುಗುಪ್ಪ (ನ) |
| ಕುಡುತಿನಿ (ಪ) | ಹಂಪಸಾಗರ (ಪ) | ಕಂಪ್ಲಿ (ಪ) | ಹೊಳಗುಂದಿ (ಪ) | ಕೊಟ್ಟೂರು (ಪ) | ತೋರಣಗಲ್ಲು (ಪ) | ತೆಕ್ಕಲಕೋಟೆ (ಪ) |
| ಕುರುಗೋಡು (ಗ್ರಾ) | ಹನಸಿ (ಗ್ರಾ) | ಕಮಲಾಪುರ (ಗ್ರಾ) | ಇಟಗಿ (ಗ್ರಾ) | ಇಟಗಿ (ಗ್ರಾ) | ಬಂಡ್ರಿ (ಗ್ರಾ) | ಸಿರಿಗೇರಿ (ಗ್ರಾ) |


ನ - ನಗರ, ಪ = ಪಟ್ಟಣ, ಗ್ರಾ = ಗ್ರಾಮೀಣ

ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ಐವತ್ತಾರು (೫೬) ಸಂತೆಗಳು ನಡೆಯುತ್ತಿದ್ದು, ಪ್ರತಿ ತಾಲೂಕಿಗೆ ಮೂರು (೩) ಸಂತೆಗಳಂತೆ ಇಪ್ಪತ್ತೊಂದು ಸಂತೆಗಳನ್ನು ಆಯ್ದುಕೊಂಡು ಕ್ಷೇತ್ರಕಾರ್ಯವನ್ನು ಮಾಡಲಾಗಿದೆ. ಆ ಸಂತೆಗಳೆಂದರೆ ಬಳ್ಳಾರಿ, ಕುಡುತಿನಿ, ಕುರುಗೋಡು, ಹಗರಿಬೊಮ್ಮನಹಳ್ಳಿ, ಹನಸಿ, ಹಂಪಸಾಗರ, ಹೊಸಪೇಟೆ, ಕಂಪ್ಲಿ, ಕಮಲಾಪುರ, ಇಟಗಿ, ಹೊಳಗುಂದಿ, ಹೂವಿನಹಡಗಲಿ, ಚಿಕ್ಕಜೋಗಿಹಳ್ಳಿ, ಕೊಟ್ಟೂರು, ಕೂಡ್ಲಿಗಿ, ಬಂಡ್ರಿ, ಸಂಡೂರು, ತೋರಣಗಲ್ಲು, ಸಿರುಗುಪ್ಪ, ಶಿರಗೇರಿ, ತೆಕ್ಕಲಕೋಟೆಗಳಲ್ಲಿ ನಡೆಯುವಂತ ಸಂತೆಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಪ್ರತಿ ತಾಲೂಕಿನಲ್ಲಿ ಆಯ್ದುಕೊಂಡ ಮೂರು ಸಂತೆಗಳು ಜನಸಂಖ್ಯೆಯಲ್ಲಿ ಒಂದು ಸಂತೆಯನ್ನು ದೊಡ್ಡದು, ಮತ್ತೊಂದು ಚಿಕ್ಕದು, ಇನ್ನೊಂದು ಮಧ್ಯಮ ವರ್ಗದ ಜನಸಂಖ್ಯೆ ಹೊಂದಿದ ಅಂದರೆ ಒಂದು ತಾಲೂಕು, ಪಟ್ಟಣ, ಗ್ರಾಮದ ರೀತಿಯಲ್ಲಿ ನಡೆಯುವಂತ ಸಂತೆಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಉದಾಹರಣೆಗೆ ತಾಲೂಕು ಪ್ರದೇಶವಾದ ಹಗರಿಬೊಮ್ಮನಹಳ್ಳಿಯಲ್ಲಿ ನಡೆಯುವ ಸಂತೆಯಾದರೆ, ಹಂಪಸಾಗರ ಮಧ್ಯಮ ಮತ್ತು ಹನಸಿಯಲ್ಲಿ ನಡೆಯುವ ಸಂತೆಯು ಗ್ರಾಮೀಣ ಪ್ರದೇಶದಲ್ಲಾಗಿದೆ. ಈ ರೀತಿಯಲ್ಲಿ ಸಂತೆಗಳನ್ನು ಆಯ್ದುಕೊಂಡು, ತಾಲೂಕು, ಪಟ್ಟಣ ಮತ್ತು ಗ್ರಾಮೀಣ ಪ್ರದೇಶದಲ್ಲಿ ಬುಡಕಟ್ಟು ಸಮುದಾಯಗಳು ಯಾವ ರೀತಿಯಲ್ಲಿ ತಮ್ಮ ವೃತ್ತಿಗಳನ್ನು ಮಾಡುತ್ತಾರೆ ಎಂಬುದನ್ನೂ ತಿಳಿಸಲಾಗಿದೆ.

ಅಧ್ಯಯನದ ವ್ಯಾಪ್ತಿಗೆ ಅನುಗುಣವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಆಯ್ದುಕೊಂಡ ಇಪ್ಪತ್ತೊಂದು (೨೧) ಸಂತೆಗಳಲ್ಲಿ ವ್ಯಾಪಾರ ವಹಿವಾಟುಗಳನ್ನು ಮಾಡುವ ಹದಿಮೂರು (೧೩) ಸಮುದಾಯಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಅದರಲ್ಲಿ, ಬೇಡ, ಹಕ್ಕಿಪಿಕ್ಕಿ, ಮೇದ, ರಾಜಗೊಂಡ ಬುಡಕಟ್ಟುಗಳು ಕರ್ನಾಟಕ ರಾಜ್ಯದಿಂದ ಅನುಮೋದನೆ ಪಡೆದ ಬುಡಕಟ್ಟುಗಳಾದರೆ ಇನ್ನುಳಿದ ಒಂಬತ್ತು (೯) ಸಮುದಾಯಗಳು ಬುಡಕಟ್ಟು ಲಕ್ಷಣಗಳನ್ನೊಳಗೊಂಡ ಅಲೆಮಾರಿ ಮತ್ತು ಹಿಂದುಳಿದ ಸಮುದಾಯಗಳಾಗಿವೆ. ಈ ಒಂಬತ್ತು (೯) ಸಮುದಾಯಗಳು ಬುಡ್ಗಜಂಗಮ್, ದೊಂಬರು, ಗೋಸಂಗಿ, ಹಂಡಿಜೋಗಿಸ್, ಕೊರವ, ಲಂಬಾಣಿ, ಸಿಂದೋಳ್ಳು, ಸುಡುಗಾಡು ಸಿದ್ಧರು, ಬುಡಬುಡಕಿಯವರು ಸಂತೆಯಲ್ಲಿ ವಿಶಿಷ್ಟವಾದ ರೀತಿಯಲ್ಲಿ ವ್ಯಾಪಾರ ವಹಿವಾಟು, ಭಿಕ್ಷಾಟನೆ ಮುಂತಾದ ವೃತ್ತಿಗಳಲ್ಲಿ ತೊಡಗಿರುವುದರಿಂದ ಇವರನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಪ್ರತಿ ಸಮುದಾಯಗಳಿಂದ ಈ ಕೆಳಕಂಡಂತೆ ಕುಟುಂಬಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

ಕೋಷ್ಟಕ - ೧.೨

**ಅಧ್ಯಯನಕ್ಕೆ ಆಯ್ದುಕೊಂಡ ಕುಟುಂಬಗಳ ವಿವರ**

| | ಕ್ರ.ಸ. | ಜಾತಿಗಳು | ಕುಟುಂಬಗಳು | ಗಂಡು | ಹೆಣ್ಣು | ಒಟ್ಟು |
|---|---|---|---|---|---|---|
| ಪರಿಶಿಷ್ಟ | ೧. | ಬುಡ್ಗ ಜಂಗಮ್ | ೦೩ | ೦೬ | ೦೫ | ೧೧ |
| ಜಾತಿ | ೨. | ದೊಂಬರು | ೦೨ | ೦೩ | ೦೧ | ೦೪ |
| | ೩. | ಗೋಸಂಗಿ | ೧೫ | ೪೮ | ೩೯ | ೮೭ |
| | ೪. | ಹಂಡಿ ಜೋಗಿಸ್ | ೦೩ | ೦೬ | ೦೩ | ೦೯ |
| | ೫. | ಕೋರವ | ೦೮ | ೦೮ | ೧೪ | ೨೨ |
| | ೬. | ಲಂಬಾಣಿ | ೧೧ | ೨೪ | ೨೮ | ೫೨ |
| | ೭. | ಸಿಂಧೋಳ್ಳು | ೦೫ | ೦೭ | ೧೦ | ೧೭ |
| | ೮. | ಸುಡುಗಾಡು ಸಿದ್ಧರು | ೧೩ | ೩೩ | ೨೬ | ೫೯ |
| | | ಒಟ್ಟು | ೬೦ | ೧೩೫ | ೧೨೬ | ೨೬೧ |
| ಪರಿಶಿಷ್ಟ | ೯. | ಬೇಡ | ೧೧ | ೧೩ | ೧೫ | ೨೮ |
| ಪಂಗಡ | ೧೦. | ಹಕ್ಕಿಪಿಕ್ಕಿ | ೧೦ | ೨೬ | ೩೪ | ೬೦ |
| | ೧೧. | ಮೇದ | ೦೮ | ೧೮ | ೧೩ | ೩೧ |
| | ೧೨. | ರಾಜಗೊಂಡ | ೦೮ | ೧೫ | ೧೭ | ೩೨ |
| | | ಒಟ್ಟು | ೩೭ | ೭೨ | ೭೯ | ೧೫೧ |
| ಹಿಂದುಳಿದ ವರ್ಗ | ೧೩. | ಬುಡಬುಡಕಿ | ೦೨ | ೦೩ | ೦೧ | ೦೪ |
| | | ಒಟ್ಟು | ೯೯ | ೨೧೦ | ೨೦೬ | ೪೧೬ |

ಈ ಮೇಲ್ಕಂಡ ಸಮುದಾಯಗಳ ಆಯ್ದುಕೊಂಡ ಕುಟುಂಬಗಳು ನಿರಂತರವಾಗಿ ಸಂತೆಗೆ ಬರುವಂತಹ ಕುಟುಂಬಗಳಾಗಿದ್ದು, ಇವು ಜನಸಂಖ್ಯೆ ದೃಷ್ಟಿಯಿಂದ ವಿಭಿನ್ನವಾಗಿದ್ದರೂ ವ್ಯಾಪಾರ ವಹಿವಾಟು, ಮನರಂಜನೆಯನ್ನು ಸಂತೆಯಲ್ಲಿ ಮಾಡುವಂತಹ ಕುಟುಂಬಗಳಾಗಿವೆ. ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಈ ಸಮುದಾಯಗಳು ಸಂತೆಯಲ್ಲಿ ವ್ಯಾಪಾರ ವಹಿವಾಟಿನಲ್ಲಿ ಭಾಗವಹಿಸುವುದರ ಜೊತೆಗೆ ತಮಗೆ ಬೇಕಾದ ವಸ್ತುಗಳನ್ನು ಕೊಂಡುಕೊಳ್ಳುವುದು, ವಿನಿಮಯ ಮಾಡಿಕೊಳ್ಳುವುದು ಮತ್ತು ಜನರನ್ನು ಮನರಂಜಿಸುವುದು ಈ ಎಲ್ಲ ಪರಿಕ್ರಮಗಳಿಗೆ ಅನುಗುಣವಾಗಿ ಸಮುದಾಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಬೇಡ, ಹಕ್ಕಿಪಿಕ್ಕಿ, ಮೇದ ಬುಡಕಟ್ಟುಗಳು ಜಿಲ್ಲೆಯ ಎಲ್ಲಾ ಭಾಗಗಳಲ್ಲಿ ಕಂಡುಬರುತ್ತಿದ್ದು, ರಾಜಗೊಂಡ ಬುಡಕಟ್ಟು, ಹರಿಹರ, ಬೀದರ್ ಜಿಲ್ಲೆಗಳಿಂದ ವ್ಯಾಪಾರಕ್ಕಾಗಿ ಬಂದ ಅಲೆಮಾರಿ

ಬುಡಕಟ್ಟಾಗಿದೆ. ಇನ್ನುಳಿದಂತೆ ಬುಡ್ಗಜಂಗಮ್, ಗೋಸಂಗಿ, ಹಂಡಿಜೋಗಿಸ್, ಕೊರವ, ಲಂಬಾಣಿ, ಸಿಂಧೋಳ್ಳು, ಸುಡುಗಾಡು ಸಿದ್ಧರು, ಬುಡಬುಡಕಿಯವರು, ದೊಂಬ ಸಮದಾಯಗಳು ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಕಂಡುಬರುತ್ತಾರೆ. ಈ ಮೇಲೆ ತಿಳಿಸಿದ ಹದಿಮೂರು (೧೩) ಬುಡಕಟ್ಟು, ಅಲೆಮಾರಿ ಸಮುದಾಯಗಳು, ಆಯ್ದುಕೊಂಡ ಇಪ್ಪತ್ತೊಂದು (೨೧) ಸಂತೆಗಳಲ್ಲಿ ಮಾಡುವಂತ ವೃತ್ತಿಗಳನ್ನು ಈ ಕೆಳಕಂಡ ವಿಧಾನಗಳ ಮೂಲಕ ಅಧ್ಯಯನವನ್ನು ಮಾಡಲಾಗಿದೆ.

**೧. ಪ್ರಶ್ನಾವಳಿ**

ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಸಂಗ್ರಹಿಸಲು ಪ್ರಶ್ನಾವಳಿಯನ್ನು ಸಿದ್ಧಪಡಿಸಲಾಗುವುದು. ನೇರವಾಗಿ ಗ್ರಾಹಕ ಮತ್ತು ವ್ಯಾಪಾರಗಾರರನ್ನು ಪ್ರಶ್ನಿಸುವ ಮೂಲಕ ಉತ್ತರಗಳನ್ನು ಪಡೆದುಕೊಂಡು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

**೨. ಅವಲೋಕನ**

ಸಂತೆಗಳು ಸೂಕ್ತವಾದ ಪ್ರದೇಶವೊಂದರಲ್ಲಿ ಹತ್ತು ಹಲವಾರು ಸಮುದಾಯಗಳು ಕೂಡಿ ನಡೆಸುವಂತ ವ್ಯವಹಾರವಾಗಿದೆ. ಸಮಗ್ರ ಅಧ್ಯಯನದ ದೃಷ್ಟಿಯಿಂದ ನೇರವಾಗಿ ಸಂತೆಗಳಲ್ಲಿ ಪಾಲ್ಗೊಂಡು ಅವಲೋಕಿಸಿ ಮಾಹಿತಿ ಸಂಗ್ರಹಿಸಿ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

**೩. ಸಂಖ್ಯಾಶಾಸ್ತ್ರೀಯ ವಿಧಾನ**

ಪ್ರಶ್ನಾವಳಿಯನ್ನು ತಯಾರಿಸಿ, ಅದರಲ್ಲಿ ಬುಡಕಟ್ಟುಗಳು ಯಾವ ವಸ್ತುಗಳನ್ನು ಮಾರುತ್ತಾರೆ, ಲಾಭ ನಷ್ಟಗಳೇನು ಎಂಬುದನ್ನು ಸ್ಪಷ್ಟಪಡಿಸಿಕೊಂಡು ಅಗತ್ಯವಾದ ದತ್ತಾಂಶಗಳನ್ನು ಸಂಪ್ರಬಂಧದಲ್ಲಿ ಬಳಸಿಕೊಳ್ಳಲಾಗಿದೆ.

**೪. ಸಂದರ್ಶನ ವಿಧಾನ**

ನೇರವಾಗಿ ಸಂತೆಯಲ್ಲಿ ಪಾಲ್ಗೊಳ್ಳುವ ವಿವಿಧ ವರ್ಗದ ಜನ ಸಮುದಾಯಗಳನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸಲಾಗುವುದು. ಹಾಗೂ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಸಮುದಾಯವನ್ನು ವಿಶೇಷವಾಗಿ ಸಂಪರ್ಕಿಸಿ ಮಾಹಿತಿ ಪಡೆದುಕೊಳ್ಳಲಾಗಿದೆ.

### ೧:೫:೫ ಅಧ್ಯಯನಕ್ಕೆ ಬಳಸಿದ ಸಾಧನ ಸಾಮಗ್ರಿಗಳು

'ಸಂತೆ ಮತ್ತು ಬುಡಕಟ್ಟು ಸಮುದಾಯ' ಎಂಬ ಸಂಶೋಧನ ಕಾರ್ಯಕ್ಕಾಗಿ ಸಾಧನ ಸಾಮಗ್ರಿಗಳಾದ ಟೇಪ್‌ರೆಕಾರ್ಡರ್, ಸ್ಥಿರ ಕ್ಯಾಮರ, ವಿಡಿಯೋ ಕ್ಯಾಮರ, ಕ್ಯಾಸೆಟ್‌ಗಳನ್ನು ಹಾಗೂ ಶೆಲ್ (ಬ್ಯಾಟರಿ)ಗಳನ್ನು ಬಳಸಿಕೊಳ್ಳಲಾಗಿದೆ.

### ೧:೬ ಸಾಹಿತ್ಯ ಸಮೀಕ್ಷೆ

ನಮ್ಮ ಜ್ಞಾನ ವೈಶಾಲ್ಯತೆಗೆ ಮುಖ್ಯವಾಗಿ ಪುಸ್ತಕಗಳೇ ಕಾರಣೀಭೂತವಾಗಿರುತ್ತವೆ. ಯಾವುದೇ ಒಂದು ಸಂಶೋಧನೆ ಯಶಸ್ವಿಯಾಗಿ ಹೊರಹೊಮ್ಮಬೇಕಾದರೆ ಮೂಲಾಧಾರಗಳು ಅತ್ಯವಶ್ಯಕ. ಸಂತೆ ಮಾರುಕಟ್ಟೆಯ

ಒಂದು ರೂಪ. ಸಂತೆ ಎಂಬುದು ವಾರಕ್ಕೊಮ್ಮೆ ನಡೆಯುವ ಮಾರಾಟದ ಸ್ಥಳವಾಗಿದೆ. ಕರ್ನಾಟಕದಲ್ಲಿರುವ ಎಲ್ಲ ವಿಶ್ವವಿದ್ಯಾನಿಲಯಗಳಲ್ಲಿ ನೇರವಾಗಿ ಅಥವಾ ಪರೋಕ್ಷವಾಗಿ ಮಾರುಕಟ್ಟೆಯ ಬಗ್ಗೆ ಪ್ರಬಂಧಗಳು ಬಂದಿವೆ. ಅಲ್ಲದೇ ಅಲ್ಲಲ್ಲಿ ಕೃತಿಗಳು ಮತ್ತು ಲೇಖನಗಳು ಕಂಡುಬರುತ್ತವೆ. ಆದರೆ ಸಂತೆಯಲ್ಲಿ ಬುಡಕಟ್ಟು ಸಮುದಾಯಗಳ ಪಾತ್ರದ ಬಗ್ಗೆ ಇಲ್ಲಿಯವರೆಗೆ ಯಾವುದೇ ಅಧ್ಯಯನಗಳು ನಡೆದಿದ್ದು ಬಹಳ ಕಡಿಮೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ೧೯೭೫ರಲ್ಲಿ ಕೆಂಪೇಗೌಡ ಎಂಬ ಸಂಶೋಧಕರು "ಚನ್ನರಾಯ ಪಟ್ಟಣ ತಾಲೂಕಿನ ಶನಿವಾರದ ಸಂತೆ ಗ್ರಾಮೀಣ ಪ್ರದೇಶಗಳ ಆರ್ಥಿಕಾಭಿವೃದ್ಧಿಯ ಮೇಲೆ ಇದರ ಪ್ರಭಾವ" ಎನ್ನುವ ಪಿಎಚ್.ಡಿ ಪ್ರಬಂಧದಲ್ಲಿ ಮಾರುಕಟ್ಟೆಯ ಹಮಾಲಿಗಳ ಮೇಲೆ ಹೆಚ್ಚಿನ ಒತ್ತುಕೊಟ್ಟು ಅಧ್ಯಯನ ಮಾಡಿದ್ದಾರೆ.

ಗ್ರಾಮಗಳ ಅಧ್ಯಯನದ ಸಂದರ್ಭದಲ್ಲಿ ಸಂತೆಯ ಬಗೆಗೆ ಪ್ರಸ್ತಾಪ ಮಾಡಿರುವುದನ್ನು ಕಾಣುತ್ತೇವೆ. ಈ ಕುರಿತಾದ ಅಧ್ಯಯನದ ಪ್ರಮುಖವಾದ ಕೃತಿಗಳೆಂದರೆ ಡಾ.ಎಸ್.ಚಿನ್ನಸ್ವಾಮಿ ಸೋಸಲೆ ಅವರು ಬರೆದಿರುವ "ನಮ್ಮ ಗ್ರಾಮಗಳು: ಅಂದು-ಇಂದು" ಎಂಬ ಕೃತಿಯಲ್ಲಿ ಗ್ರಾಮಗಳ ಹಿಂದಿನ ಮತ್ತು ಇಂದಿನ ಸ್ಥಿತಿಗತಿ, ಗ್ರಾಮೀಣ ಬದುಕು ಮತ್ತು ಗ್ರಾಮೀಣ ಸಂತೆಗಳು, ಸಂತೆಯ ಸರಕುಗಳ ಲಕ್ಷಣಗಳು, ಸಂತೆಯಲ್ಲಿನ ಸಮಸ್ಯೆ, ಸಂತೆಯಲ್ಲಿ ಬೆಲೆಗಳನ್ನು ನಿರ್ಧರಿಸುವ ತತ್ವಗಳು, ಅದಕ್ಕೆ ಪರಿಹಾರ ಹೀಗೆ ಅನೇಕ ವಿಷಯಗಳನ್ನು ಕುರಿತು ವಿವರಿಸಿದ್ದಾರೆ.

ಎಸ್.ವೈ. ಸೋಮಶೇಖರ್ ಅವರ ಪ್ರಕಟಿತ ಎಂ.ಫಿಲ್ ಪ್ರಬಂಧವಾದ "ಹಂಪಿಯ ಬಜಾರುಗಳು" ಎಂಬ ಪುಸ್ತಕದಲ್ಲಿ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾದ ಹಂಪೆಯಲ್ಲಿನ ಏಳು ಬಜಾರಗಳಲ್ಲಿ ಒಂದೊಂದು ದಿನ ಒಂದು ಕಡೆ ಸಂತೆ ನಡೆಯುತ್ತಿದ್ದವು ಎಂಬುದನ್ನು ಮತ್ತು ಅಲ್ಲಿ ಯಾವ ರೀತಿಯ ವ್ಯಾಪಾರ ವಹಿವಾಟು ನಡೆಯುತ್ತಿತ್ತು ಹಾಗೂ ತೆರಿಗೆಗಳನ್ನು ಯಾವ ರೀತಿ ವಿಧಿಸುತ್ತಿದ್ದರು ಎಂಬುದನ್ನು ಹೇಳಿದ್ದಾರೆ. ಅಲ್ಲದೇ ಆಗಿನ ಕಾಲದಲ್ಲಿ ವಿಜಯನಗರಕ್ಕೆ ಬಂದಿದ್ದ ವಿದೇಶಿ ಪ್ರವಾಸಿಗರ ಹೇಳಿಕೆಗಳನ್ನು ಹೇಳಿದ್ದಾರೆ. ಇದರಲ್ಲಿ ಕೃಷ್ಣ ಬಜಾರದಲ್ಲಿ ಸೋಮವಾರ, ಅಚ್ಯುತ ಬಜಾರಿನಲ್ಲಿ ಮಂಗಳವಾರ ಹಾಗೂ ಪಾನ್‌ಸುಪಾರಿ ಬಜಾರಿನಲ್ಲಿ ಶುಕ್ರವಾರ ಹೀಗೆ ದಿನಾಲೂ ಒಂದಿಲ್ಲಾ ಒಂದು ಬಜಾರಿನಲ್ಲಿ ಸಂತೆ ನಡೆಯುತ್ತಿತ್ತು ಎಂಬುದನ್ನು ವಿವರಿಸಿದ್ದಾರೆ.

ರೊಟ್ಟಿ.ಎ.ಆರ್. ಅವರು ಬರೆದಿರುವ "ಗ್ರಾಮಾಂತರ ಪ್ರದೇಶದ ಮಾರುಕಟ್ಟೆಯ ಮಹತ್ವ" (೧೯೮೭) ಎಂಬ ಕೃತಿಯಲ್ಲಿ ಗ್ರಾಮಗಳಲ್ಲಿ ಇರುವಂತಹ ಮಾರುಕಟ್ಟೆಗಳ, ಮಾರುಕಟ್ಟೆಗೆ ಬರುವ ವಸ್ತುಗಳ, ಅವುಗಳ ಬೆಲೆಗಳ, ಮಾರುಕಟ್ಟೆಯ ಮಹತ್ವವನ್ನು ಕುರಿತು ಹೇಳಲಾಗಿದೆ.

"ಇತಿಹಾಸ ದರ್ಶನ" ಎಂಬ ಪುಸ್ತಕದಲ್ಲಿ ಎಂ.ಬಿ.ಪಾಟೀಲ ಅವರು ಬರೆದಿರುವ ಲೇಖನವಾದ "ವಿಜಯನಗರ ಕಾಲದ ಸಂತೆಗಳು ಒಂದು (ವಾಣಿಜ್ಯಕ) ಅಧ್ಯಯನ" ಎಂಬುದರಲ್ಲಿ ವಿಜಯನಗರ ಕಾಲದ ವರ್ತಕ ಸಮುದಾಯ, ಆಗಿನ ಪ್ರಮುಖ ವ್ಯಾಪಾರಿ ಕೇಂದ್ರಗಳ ಬಗ್ಗೆ, ರಾಜಧಾನಿಯಲ್ಲಿರುವ ಸಂತೆಯ

ಬಗೆಗೆ, ಸಾಗರ ವ್ಯಾಪಾರಿಗಳ ಬಗ್ಗೆ, ಅರಸರ ಕುದುರೆ ವ್ಯಾಪಾರದ ಬಗ್ಗೆ, ಆಗಿನ ಸಂತೆಯ ಪ್ರಾಮುಖ್ಯತೆ, ತೂಕ ಮತ್ತು ಅಳತೆ, ನಾಣ್ಯಗಳು, ತೆರಿಗೆ ಹೀಗೆ ಎಲ್ಲಾ ಅಂಶದ ಬಗೆಗೆ ತಿಳಿಸಿದ್ದಾರೆ. ಅಲ್ಲದೆ ವಿಜಯನಗರ ಸಂತೆಯ ಬಗೆಗೆ ಎಷ್ಟು ಶಾಸನಗಳು ಇವೆ ಎಂಬುದನ್ನು ಸಹ ತಿಳಿಸುತ್ತದೆ.

ಮೈಸೂರು ವಿಶ್ವವಿದ್ಯಾಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಜಾನಪದ ವಿಭಾಗದ ಪ್ರವಾಚಕರಾದ ಶ್ರೀಮತಿ ಎ.ಸಿ.ಲಲಿತ ಅವರ ಮಾರ್ಗದರ್ಶನದಲ್ಲಿ ಯಾರು? "ಮುಡುಕುತೊರು ಸಂತೆಗಳು" ಎಂಬ ಶೀರ್ಷಿಕೆಯಡಿಯಲ್ಲಿ ಒಂದು ಕಿರು ಪ್ರಬಂಧವನ್ನು ಸಿದ್ಧಪಡಿಸಿ ಜಾನಪದ ಡಿಪ್ಲೊಮಾ ಪದವಿಗೆ ಸಲ್ಲಿಸಿದ್ದಾರೆ. ಇದು ವಿಶೇಷವಾಗಿ ಮುಡುಕುತೊರೆ ಜಾತ್ರೆ ಸಂದರ್ಭದಲ್ಲಿ ಜರುಗುವ ದನಗಳ ಸಂತೆಯನ್ನು ಕೇಂದ್ರವಾಗಿಸಿಕೊಂಡು ಅದರ ವಿಶಿಷ್ಟತೆಯನ್ನು ಚರ್ಚಿಸಿದ್ದಾರೆ. ಅದರ ಪ್ರಾಚೀನತೆ ಮತ್ತು ದನಗಳ ಜಾತ್ರೆ ರೈತರೆ ರೂಪಿಸಿಕೊಂಡ ಒಂದು ವ್ಯವಸ್ಥೆ ಎಂಬುದು ಅರ್ಥವಾಗುತ್ತದೆ. ಈ ಕುರಿತು ಹೆಚ್ಚು ಚರ್ಚಿಸುತ್ತಾರೆ.

ಮೈತ್ರಿ ಕೆ.ಎಂ. ರವರು ರಚಿಸಿರುವ 'ಬುಡಕಟ್ಟು ಕುಲಕಸುಬುಗಳು' (೨೦೦೨) ಎಂಬ ಕೃತಿಯಲ್ಲಿ ಕರ್ನಾಟಕದ ೪೯ ಬುಡಕಟ್ಟುಗಳ ಪರಿಚಯ, ಸಾಮಾಜಿಕ ಜೀವನದ ಬಗ್ಗೆ ತಿಳಿಸುತ್ತಾ, ಆ ಬುಡಕಟ್ಟುಗಳ ಕುಲಕಸುಬು ಮತ್ತು ಇನ್ನಿತರ ವೃತ್ತಿಗಳನ್ನು ವಿವರಿಸಲಾಗಿದೆ. ಕೆಲವು ಬುಡಕಟ್ಟುಗಳು ತಮ್ಮ ವಸ್ತುಗಳನ್ನು ಮಾರಲು ಮಾರುಕಟ್ಟೆಗೆ ಬರುವುದನ್ನು ತಿಳಿಸಲಾಗಿದೆ.

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸುದರ್ಶನ ಕುಮಾರ್ ಎಂ., ಅವರು ಸಾದರಪಡಿಸಿದ 'ಬದಲಾಗುತ್ತಿರುವ ಸಮಾಜದಲ್ಲಿ ಹಕ್ಕಿಪಿಕ್ಕಿ ಸಮುದಾಯದ ಆರ್ಥಿಕ ಸ್ಥಿತಿಗತಿ' ಎಂಬ ಎಂ.ಫಿಲ್. ಸಂಪ್ರಬಂಧದಲ್ಲಿ ಹಕ್ಕಿಪಿಕ್ಕಿಯವರು ಯಾವ ರೀತಿಯಲ್ಲಿ ಮುಖ್ಯವಾಹಿನಿಯೊಂದಿಗೆ ತನ್ನ ಆರ್ಥಿಕ ಜೀವನವನ್ನು ಅಳವಡಿಸಿಕೊಂಡಿದೆ ಹಾಗೂ ಹಕ್ಕಿಪಿಕ್ಕಿಯವರು ತಯಾರಿಸಿದ ವಸ್ತುಗಳು ಸಂತೆಯಲ್ಲಿ ಮಾರಾಟ ಮಾಡುವ ಬಗೆಯನ್ನು ತಿಳಿಸಿದ್ದಾರೆ.

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪ್ರಸಾರಾಂಗ ಪ್ರಕಟಿಸಿದ ಡಾ. ಬಿ. ಶೇಷಾದ್ರಿಯವರು ರಚಿಸಿದ 'ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕೀಕರಣ ಮತ್ತು ಜನಾಂದೋಳನ' ಎಂಬ ಮಂಟಪಮಾಲೆಯಲ್ಲಿ ಖಾಸಗಿ ವಲಯ ಮತ್ತು ಮಾರುಕಟ್ಟೆ ಪ್ರಣೀತ ಉತ್ಪಾದನಾ ಚಟುವಟಿಕೆಗಳ ಹಿಂದಿನ ಸಿದ್ಧಾಂತದ ಸೂಕ್ಷ್ಮ ಎಳೆ ಹಾಗೂ ನೆಲೆಗಳನ್ನು ಗುರುತಿಸುವುದು ಕಂಡುಬರುತ್ತದೆ.

ಎರ್ರಿಸ್ವಾಮಿ ಎನ್.ಟಿ. ಅವರು 'ಗ್ರಾಮೀಣ ಅಭಿವೃದ್ಧಿಗೆ ಹೊಸ ಆಯಾಮ' (೧೯೯೬) ಎಂಬ ಪುಸ್ತಕದಲ್ಲಿ ಕೊಂಚಿ ಕೊರವರು ಚಾಪೆ, ಕಸಬರಿಗೆ ತಯಾರಿಸಲು ಹಾಕುವ ಬಂಡವಾಳ, ಲಾಭನಷ್ಟ ಮತ್ತು ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದರ ಬಗ್ಗೆ ತಿಳಿಸಿದ್ದಾರೆ.

ಪ್ರಭಾಕರ ಎ.ಎಸ್., ಅವರು ರಚಿಸಿರುವ 'ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು' ಎಂಬ ಕೃತಿಯಲ್ಲಿ ಸ್ಥಿತ್ಯಂತರದ ರೂಪಗಳು, ಆಧುನಿಕತೆಯ ರೂಪವಿರೂಪ, ಪರಿಸರ, ವಿಜ್ಞಾನ, ಜಾಗತೀಕರಣ ಮತ್ತು ಬುಡಕಟ್ಟುಗಳು, ಪಾರಂಪರಿಕ ಜ್ಞಾನ, ಭೂಒಡೆತನ ಮತ್ತು ಬುಡಕಟ್ಟುಗಳು, ಬುಡಕಟ್ಟುಗಳ ಅಭಿವೃದ್ಧಿ, ಸರ್ಕಾರದ ಯೋಜನೆಗಳನ್ನು ತಿಳಿಸಲಾಗಿದೆ. ಬುಡಕಟ್ಟು ರೈತರಾಗಿ ಮಾರ್ಪಟಿದ್ದು, ಇದರಿಂದ ಸಂದಾಯವಾಗುತ್ತಿದ್ದ ಕಂದಾಯದ ಬಗ್ಗೆ ಹೇಳಲಾಗಿದೆ.

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಕಡ್ಲಬಾಳ ಪನ್ನಂಗಧರ ಅವರ ಅಪ್ರಕಟಿತ ಸಂಶೋಧನ ಪ್ರಬಂಧವಾದ 'ಮೇದರ ಸಂಸ್ಕೃತಿ ಮತ್ತು ವಾಣಿಜ್ಯ ಅಧ್ಯಯನ'ದಲ್ಲಿ ಮೇದ ಬುಡಕಟ್ಟಿನ ಸಂಸ್ಕೃತಿಯನ್ನು ಅಧ್ಯಯನ ಮಾಡಲಾಗಿದೆ. ಅಲ್ಲದೇ ಮೇದರು ತಯಾರಿಸುವ ವಸ್ತುಗಳನ್ನು ಸಂತೆ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಮಾರಲಾಗುತ್ತದೆ. ಈ ವಸ್ತುಗಳು ಮಾರಾಟ ಹಾಗೂ ಬಂಡವಾಳ ಲಾಭನಷ್ಟದ ಕುರಿತು ಚರ್ಚಿಸಲಾಗಿದೆ.

'ಜಾಗತೀಕರಣ ಒಂದು ಸಮಗ್ರ ಮಂಥನ' (೨೦೦೪) ಎಂಬ ಕೃತಿಯಲ್ಲಿ ರಂಜಾನ್ ದರ್ಗಾ ಅವರು ಬರೆದಿರುವ ರೈತರು, ಕಾರ್ಮಿಕರು, ವ್ಯಾಪಾರಿಗಳು ಹಾಗೂ ಜಾಗತೀಕರಣ ಎಂಬ ಲೇಖನದಲ್ಲಿ ಜಾಗತೀಕರಣದಿಂದ ರೈತರು, ಕಾರ್ಮಿಕರು, ವ್ಯಾಪಾರಿಗಳು ಯಾವ ಒಳಿತು ಮತ್ತು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದನ್ನು ತಿಳಿಸಿದ್ದಾರೆ.

'ಕರ್ನಾಟಕದ ಮಾರಾಟ ತೆರಿಗೆ ಕಾಯ್ದೆ ೧೯೫೭' (೧೯೯೯-೨೦೦೦) ಎಂಬ ಕೃತಿಯಲ್ಲಿ ಲೇ. ಗಣೇಶ ವ್ಹಿ. ಜಿತೂರಿ ಅವರು 'ಕರ್ನಾಟಕದ ಮಾರಾಟ ತೆರಿಗೆ ಕಾಯ್ದೆ ಹಾಗೂ ನಿಯಮಗಳು' ಹಾಗೂ ಕರ್ನಾಟಕ ಮಾರಾಟ ತೆರಿಗೆ ಅಡಿ ಮಾಡಿದ ನೋಟಿಫಿಕೇಶನ್‌ಗಳು ಮತ್ತು ತೆರಿಗೆ ದರದ ಎಲ್ಲ ಶೆಡ್ಯೂಲ್‌ಗಳನ್ನು ಮತ್ತು ಕೇಂದ್ರ ಮಾರಾಟ ತೆರಿಗೆ ಕಾಯ್ದೆ, ನಿಯಮಗಳನ್ನು ಮತ್ತು ನೋಟಿಫಿಕೇಶನ್‌ಗಳನ್ನು ವಿವರಿಸಿದ್ದಾರೆ.

ವೈ.ಚಿ. ಮುರಳೀಧರ ಅವರ 'ಮಾರುಕಟ್ಟೆಯಲ್ಲಿ ಬಳಕೆದಾರ' (೨೦೦೨) ಎಂಬ ಕೃತಿಯಲ್ಲಿ ಗ್ರಾಹಕರು ಯಾವ ರೀತಿಯಲ್ಲಿ ಸರಿಯಾಗಿ ವಸ್ತುಗಳನ್ನು ಖರೀದಿಸಬೇಕು, ಖರೀದಿಸುವ ಹಂತಗಳು, ಮಾರುಕಟ್ಟೆಯಲ್ಲಿನ ಸಮಸ್ಯೆಗಳು, ಸರಕುಗಳನ್ನು ಖರೀದಿಸಲು ಕರಾರುಗಳು, ಒಪ್ಪಂದಗಳು ಹಾಗೂ ನಿಬಂಧನೆಗಳು, ಜಾಹಿರಾತುಗಳ ಬಗ್ಗೆ ಎಚ್ಚರಿಕೆ, ಆಹಾರ ಕಲಬರಕೆ, ಐ.ಎಸ್.ಐ.ನ ಮಹತ್ವ ತೂಕ ಮತ್ತು ಅಳತೆಯ ಸಮಸ್ಯೆ, ಗಿಫ್ಟ್ ಹ್ಯಾಂಪರ್ ಕೊಡುವ ಹಿಂದಿನ ಕುತಂತ್ರ, ಹಳೆಯ ನೋಟುಗಳ ಸಮಸ್ಯೆಯ ಬಗ್ಗೆ ತಿಳಿಸಲಾಗಿದೆ. ಒಟ್ಟಿನಲ್ಲಿ ಗ್ರಾಹಕರು ಮಾರುಕಟ್ಟೆಯಲ್ಲಿ ಯಾವ ರೀತಿ ವ್ಯವಹರಿಸಬೇಕು ಎಂಬುದನ್ನು ಹೆಚ್ಚಾಗಿ ಹೇಳುತ್ತದೆ.

ಕೆ.ವಿ. ಪುಟ್ಟಪ್ಪನವರ 'ವಾಣಿಜ್ಯಶಾಸ್ತ್ರ' (೧೯೬೮) ಎಂಬ ಪುಸ್ತಕದಲ್ಲಿ ಸರಕುಗಳ ಮಾರಾಟದ ಬೆಲೆಯ ಬಗ್ಗೆ, ಸರಕು ಸಾಮಾನುಗಳ ಸಂಗ್ರಹ, ಗಡಂಗುಗಳ ಉಪಯೋಗ, ಪ್ಯಾಕಿಂಗ್, ಜಾಹಿರಾತು, ಮಾರುಕಟ್ಟೆಯ ಮಾರಾಟಗಾರನ ವ್ಯಕ್ತಿತ್ವದ ಬಗ್ಗೆ ತಿಳಿಸಲಾಗಿದೆ.

ಎಂ.ವಿ.ಆರ್.ರಾವ್‌ರವರ 'ಮಾರಾಟ ಕಾರ್ಯಗಳು' (೧೯೮೬) ಮಾರಾಟದ ಸಂಕ್ಷಿಪ್ತರೂಪ, ಪ್ರಾಮುಖ್ಯತೆ, ಮಾರಾಟ ಸ್ಥಳದ ವಿಂಗಡನೆ, ಮಾರುವವರು ಮತ್ತು ಕೊಳ್ಳುವವರ ಮಾರುಕಟ್ಟೆಗಳು ಮುಂತಾದ ವಿಷಯದ ಬಗ್ಗೆ ಚರ್ಚಿಸಲಾಗಿದೆ.

ಪ್ರಮೋದ್ ಜಾತ್ರ ಅವರ 'ಗ್ರಾಹಕ ಮಹಾಶಯ ನಿಮಗೆ ಸ್ವಾಗತ' (೨೦೦೪) ಎಂಬ ಕೃತಿಯಲ್ಲಿ ಗ್ರಾಹಕರಿಗೆ ಮಾರುಕಟ್ಟೆಯಲ್ಲಿ ವಸ್ತುಗಳ ಮಾರಾಟ ಮಾಡುವುದರ ಬಗ್ಗೆ, ವ್ಯಾಪಾರದ ಮಾತಿನ ಚಕಮಕಿ ಬಗ್ಗೆ, ಗ್ರಾಹಕರು ಸರಕುಗಳನ್ನು ಕೊಳ್ಳುವಾಗಿನ ಎಚ್ಚರಿಕೆಯ ಬಗ್ಗೆ ಹೆಚ್ಚಾಗಿ ಹೇಳಲಾಗಿದೆ.

ದಾಕ್ಷಾಯಣಿ ಅವರ 'ಕೃಷಿ ಮಾರುಕಟ್ಟೆ' (೧೯೯೪) ಎಂಬ ಕೃತಿಯಲ್ಲಿ ವಿವಿಧ ರೀತಿಯ ಮಾರುಕಟ್ಟೆಯ ಬಗ್ಗೆ, ಕೃಷಿ ಮಾರುಕಟ್ಟೆಯಲ್ಲಿ ಮಾರುವ ವಸ್ತುಗಳು, ಎ.ಪಿ.ಎಂ.ಸಿ.ಯಲ್ಲಿ ಮಾರಾಟದ ಬಗ್ಗೆ, ವಿವಿಧ ರೀತಿಯ ಮಾರಾಟಗಾರರನ್ನು, ಕೃಷಿ ಮಾರುಕಟ್ಟೆಯಲ್ಲಿ ಬೆಲೆ ನಿಗದಿಯಾಗುವ ರೀತಿ, ಮಾರುಕಟ್ಟೆಯ ದಲ್ಲಾಳಿಗಳು, ರೈತರು, ದಾಸ್ತಾನುದಾರರು, ಸಗಟು ವ್ಯಾಪಾರಗಾರರು ಚಿಲ್ಲರೆ ವ್ಯಾಪಾರಿಗಳಿಗೆ ಸಿಗುವ ಲಾಭದ ಬಗ್ಗೆ ತಿಳಿಸಲಾಗಿದೆ. ಅಲ್ಲದೇ ರೈತರಿಗೆ ಸಾಲ ಕೊಡುವ ಲೇವಾದೇವಿಯವರ ಹಾಗೂ ಕೂಲಿಕಾರರು ಮಾರುಕಟ್ಟೆಯಲ್ಲಿ ಮಾಡುವ ಕೆಲಸ, ಅವರು ದುಡಿಯುವ ಸಮಯ ಹಾಗೂ ಕೂಲಿಗಳ ಮತ್ತು ಕೂಲಿಕಾರರ ಸಂಘದ ಬಗ್ಗೆ ತಿಳಿಸಲಾಗಿದೆ.

'ಬುಡಕಟ್ಟು ಅಭಿವೃದ್ಧಿ ಮೀಮಾಂಸೆ' ಎಂಬ ವಿಚಾರ ಸಂಕಿರಣದಲ್ಲಿ ಮಂಜುನಾಥ ಬೇವಿನಕಟ್ಟಿ ಮತ್ತು ಬಿ. ಮುರಾರಿ ಬಲ್ಲಾಳರವರು ಬರೆದ ಲೇಖನಗಳಾದ ಕ್ರಮವಾಗಿ ಪಾರಂಪರಿಕ ಉತ್ಪಾದನೆ ಮತ್ತು ಆದಿವಾಸಿಗಳ ಅಭಿವೃದ್ಧಿ ಕೆಲವು ವೈರುಧ್ಯಗಳು, ಬುಡಕಟ್ಟು ಅಭಿವೃದ್ಧಿ ಪರಿಕಲ್ಪನೆ ಮತ್ತು ಮೀಮಾಂಸೆಯಲ್ಲಿ ಬುಡಕಟ್ಟು, ಕುಲಕಸುಬುಗಳು, ಅವರು ಉತ್ಪಾದಿಸಿದ ವಸ್ತುಗಳ ಮಾರಾಟದ ವಿಧಾನ ಹಾಗೂ ಈ ವಸ್ತುಗಳ ಮಾರಾಟದ ಬಗ್ಗೆ ಮುಖ್ಯವಾಹಿನಿ ಹೊಂದಿರುವ ದೃಷ್ಟಿಯನ್ನು ತಿಳಿಸಲಾಗಿದೆ ಹಾಗೂ ಜಾಗತೀಕರಣ ಸಂದರ್ಭದಲ್ಲಿ ಆಧುನಿಕ ಕೈಗಾರಿಕೆಗಳು ಬುಡಕಟ್ಟುಗಳು ತಯಾರಿಸಿದ ವಸ್ತುಗಳಿಗೆ ಪೈಪೋಟಿಯನ್ನು ನೀಡುತ್ತಿರುವುದನ್ನು ತಿಳಿಸಲಾಗಿದೆ.

ಶಂಕರನಾರಾಯಣರಾವ್ ಎನ್.ಪಿ.ರವರು ರಚಿಸಿರುವ 'ಪರಿವರ್ತನೆಯ ಸುಳಿಯಲ್ಲಿ ಕಿರು ಸಮುದಾಯಗಳು' (೨೦೦೦) ಎಂಬ ಕೃತಿಯನ್ನು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರು ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ತಲತಲಾಂತರದಿಂದ ಕೃಷಿ, ಅರಣ್ಯ ಉತ್ಪನ್ನ ಸಂಗ್ರಹ, ಬುಟ್ಟಿ ಹೆಣೆಯುವುದು, ಕುಂಬಾರಿಕೆ, ಮರಗೆಲಸ, ಬಿದುರು ಕೆಲಸ ಮುಂತಾದ ವೃತ್ತಿಯನ್ನು ಮಾಡುವಂತ ಸಮುದಾಯಗಳಾದ ಯರವ, ಮಲೆಕುಡಿಯ ಮುಂತಾದವರ ಬಗ್ಗೆ ಹೆಚ್ಚಾಗಿ ಹೇಳಲಾಗಿದೆ ಹಾಗೂ ಈ ವೃತ್ತಿಗೆ ಮಾರುಕಟ್ಟೆಯಲ್ಲಿ ಯಾವ ರೀತಿ ಬೆಲೆ ಇದೆ ಎಂಬುದನ್ನು ಹೇಳಲಾಗಿದೆ.

'ಗಿರಿಜನ ಸಂಸ್ಕೃತಿ' (೨೦೦೦) ಎಂಬ ಕೃತಿಯಲ್ಲಿ ಡಾ. ಅಂಬಳಿಕೆ ಹಿರಿಯಣ್ಣನವರ 'ಬುಡಕಟ್ಟು ಸಮೂಹಗಳ ಬದಲಾಗುತ್ತಿರುವ ಆರ್ಥಿಕ ಜೀವನ' ಎಂಬ ಲೇಖನದಲ್ಲಿ ಪರಂಪರಾಗತ ವೃತ್ತಿಯಲ್ಲೇ ಮೇಲೇರಿ ಮೇಲು ಜಾತಿಯ ಕಸಬುಗಳನ್ನು ಅಳವಡಿಸಿಕೊಳ್ಳುವುದು, ಜಾತಿಮುಕ್ತ ವೃತ್ತಿಯ ಅವಲಂಬನೆ, ಪರಂಪರಾಗತ ಜಾತಿ ಕಸುಬನ್ನು ತೊರೆದು ಸಮಾಜದ ಕೆಳವರ್ಗದ ಕಸುಬನ್ನು ಅವಲಂಬಿಸುವುದು ಮುಂತಾದವುಗಳಲ್ಲಿ ಬುಡಕಟ್ಟು ಸಮೂಹಗಳು ತಮ್ಮ ವೃತ್ತಿಯನ್ನು ತೊರೆದು ಜೀವನ ಸಾಗಿಸಲು ಕಾರಣ ಮತ್ತು ಆಧುನಿಕ ಜಗತ್ತಿನೊಂದಿಗೆ ಹೊಂದಿಕೊಳ್ಳುವ ಬಗೆಯನ್ನು ಹೇಳಲಾಗಿದೆ.

'ಸಣ್ಣದು ಸುಂದರ' ಎಂಬ ಕೃತಿಯನ್ನು ಇ.ಎಫ್. ಶೂಮ್ಯಕರ್‌ರವರು ಆಂಗ್ಲ ಭಾಷೆಯಲ್ಲಿ ರಚಿಸಿದ್ದು, ಇದನ್ನು ಕನ್ನಡಕ್ಕೆ ಈಶ್ವರ ಪಿಡಿಯವರು ಅನುವಾದಿಸಿದ್ದಾರೆ. ಈ ಕೃತಿಯಲ್ಲಿ ಬೃಹತ್ ಕೈಗಾರಿಕೆಗಳ ಬದಲಾಗಿ ಮಧ್ಯಮ ಕೈಗಾರಿಕೆಗಳನ್ನು ಹಳ್ಳಿ, ಪಟ್ಟಣಗಳಲ್ಲಿ ಸ್ಥಾಪಿಸಬೇಕೆಂದೂ ಕೈಯಿಂದ ಮಾಡುವ ಕೆಲಸವೇ ಆಧುನಿಕ

ಮಾನವನಿಗೆ ಎಲ್ಲ ಉದ್ವೇಗಗಳಿಂದ ಪಾರು ಮಾಡಬಲ್ಲದೆಂದೂ ವಿವರಿಸಿ, ಬಡತನ ನಿವಾರಣೆಯ ಸೂತ್ರವನ್ನು ಕೊಡಲಾಗಿದೆ.

'ಕರ್ನಾಟಕ ಬುಡಕಟ್ಟುಗಳು' ಸಂಪುಟ ೧, ೨ (೧೯೯೮-೨೦೦೦)ವನ್ನು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು ಅವರ ಪ್ರಕಾಶನದಲ್ಲಿ ಮೂಡಿಬಂದಿದೆ. ಈ ಸಂಪುಟಗಳಲ್ಲಿ ಕರ್ನಾಟಕದ ಬುಡಕಟ್ಟುಗಳ ಪರಿಚಯ ಮಾಡುತ್ತಾ ಅವರ ವೃತ್ತಿಗಳ ಬಗ್ಗೆ ತಿಳಿಸಿ, ಕೆಲವೊಂದು ಬುಡಕಟ್ಟುಗಳು ಮಾರುಕಟ್ಟೆ ಅಥವಾ ಸಂತೆಯಲ್ಲಿ ಮಾಡುವ ವ್ಯಾಪಾರ ಮತ್ತು ಗಳಿಸುವ ಲಾಭದ ಬಗ್ಗೆ ತಿಳಿಸಲಾಗಿದೆ.

ಪ್ರೊ. ಬಿ. ಸಿದ್ದಪ್ಪರವರು ರಚಿಸಿರುವ 'ಆಧುನಿಕ ಭಾರತದ ಆರ್ಥಿಕಾಭಿವೃದ್ಧಿ' (೧೯೯೯) ಎಂಬ ಕೃತಿಯಲ್ಲಿ ಭಾರತದ ಆರ್ಥಿಕತೆಯ ಅನೇಕ ಅಂಶಗಳನ್ನು ಹೇಳಲಾಗಿದ್ದು, ಕೃಷಿ ಮಾರುಕಟ್ಟೆಯ ಲೋಪದೋಷಗಳನ್ನು ತಿಳಿಸಿ, ಅದರ ಸುಧಾರಣೆಗಳನ್ನು ಯಾವ ರೀತಿ ಮಾಡಬೇಕು ಎಂಬುದನ್ನು ತಿಳಿಸಿದ್ದಾರೆ.

ಎಚ್.ಆರ್.ಕೃಷ್ಣಮೂರ್ತಿ ಹೊಸಬೀಡು ಅವರ 'ಭಾರತದ ಆರ್ಥಿಕ ವ್ಯವಸ್ಥೆ' (೨೦೦೨) ಕೃತಿಯಲ್ಲಿ ಕೃಷಿ ಮಾರುಕಟ್ಟೆಯ ಬಗ್ಗೆ ವಿವರಿಸುತ್ತಾ ರೈತರು ತಾವು ಉತ್ಪಾದಿಸಿದ ಬೆಳೆಯ ಕೆಲಭಾಗವನ್ನು ಆಗಾಗ್ಗೆ ನಡೆಯುವ ಜಾತ್ರೆ ಮತ್ತು ಸಂತೆಗಳಲ್ಲೂ ಮಾರುವ ಚಟುವಟಿಕೆ ನಡೆಯುತ್ತಿದೆ, ಜಾತ್ರೆಗಳು ಮತ್ತು ಸಂತೆಗಳು ವ್ಯವಸ್ಥಿತ ಮಾರುಕಟ್ಟೆಗಳಲ್ಲ ಎಂಬುದನ್ನು ತಿಳಿಸಿ ದೇಶದಲ್ಲಿ ಇಂದು ಸುಮಾರು ೨೨,೦೦೦ ಸಂತೆಗಳಿವೆ ಎಂದು ಅಂದಾಜನ್ನು ತಿಳಿಸಲಾಗಿದೆ.

'ಜಾನಪದ ಕೆಲವು ಅಧ್ಯಯನಗಳು' (೧೯೯೪) ಎಂಬ ಕೃತಿಯನ್ನು ಡಾ. ಅಂಬಳಿಕೆ ಹಿರಿಯಣ್ಣನವರು ರಚಿಸಿದ್ದು, ಇದನ್ನು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು ಅವರು ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ಬುಡಕಟ್ಟು ಜನರ ಬದಲಾಗುತ್ತಿರುವ ಆರ್ಥಿಕ ಜೀವನವನ್ನು ತಿಳಿಸುತ್ತಾ, ಪರಂಪರಾಗತ ವೃತ್ತಿಗಳು ಮತ್ತು ಅವಲಂಬಿಸಿದ ಹೊಸವೃತ್ತಿಗಳು ಎಷ್ಟರಮಟ್ಟಿಗೆ ಪೂರಕ ಮತ್ತು ವಿರುದ್ಧ ಎಂಬ ಅಂಶಗಳನ್ನು ತಿಳಿಸಿದ್ದಾರೆ.

ಎಡ್ವಿನ್ ಜಯದಾಸ್ ಅವರ 'ಟ್ರೈಬಲ್ಸ್ ಇನ್ ಅವರ್ ಗ್ಲೋಬಲ್ ವಿಲೇಜ್' (೧೯೯೨) ಎಂಬ ಕೃತಿಯಲ್ಲಿ ಆದಿವಾಸಿಗಳು ಮಾರುಕಟ್ಟೆಯಲ್ಲಿ ಮಾಡುವ ವೃತ್ತಿ ಮತ್ತು ಅದರಿಂದ ಗಳಿಸುವ ಲಾಭವನ್ನು ಕುರಿತು ಹೇಳಲಾಗಿದೆ. ಅಲ್ಲದೇ ಹೆಗ್ಗಡೆ ದೇವನಕೋಟೆಯಲ್ಲಿ ವಾಸಿಸುವ ಕುರುಬರ ಜೀವನಕ್ರಮ ಹಾಗೂ ಅವರ ವೃತ್ತಿಯ ಬಗ್ಗೆ ತಿಳಿಸುತ್ತ ಕುರಿಸಾಕಾಣಿಕೆಯ ಬಗ್ಗೆ ತಿಳಿಸಲಾಗಿದೆ.

ಮಿ. ಆನಂದ್ ಮೋಹನ್ ಡಿಸಿ ಅವರ 'ಅನುಭವ್' ಕೃತಿಯಲ್ಲಿ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ ನಡೆಸಿದ ಪ್ರಾಜೆಕ್ಟ್ ಬಗ್ಗೆ ತಿಳಿಸಿದ್ದಾರೆ. ಬಿಳಿಗಿರಿರಂಗನ ಬೆಟ್ಟದಲ್ಲಿ ಸೋಲಿಗರು ನಡೆಸುವ ವೊಕೇಷನಲ್ ಟ್ರೈನಿಂಗ್ ಮತ್ತು ಕಾಟೇಜ್ ಇಂಡಸ್ಟ್ರೀಸ್ ಬಗ್ಗೆ, ಕೃಷಿಯ ಬಗ್ಗೆ ಕಾದಿ ಮತ್ತು ಹಳ್ಳಿ ಉದ್ಯಮದ ಬಗ್ಗೆ ತಿಳಿಸಲಾಗಿದೆ.

ಎನ್.ಜಿ. ರಂಗ ಅವರ 'ದ ಮಾರ್ಡನ್ ಇಂಡಿಯನ್ ಪ್ರೇಸಂಟ್'ದಲ್ಲಿ ಕೃಷಿ ಮಾರುಕಟ್ಟೆ ಬಗ್ಗೆ ಹೆಚ್ಚಾಗಿ ತಿಳಿಸಿದ್ದು Special Committes for staple crops, marketing Surveys, Control of Central Government necessary, Appointment of marketing officers the practical side government should give and Assulance ಬಗ್ಗೆ ತಿಳಿಸಲಾಗಿದೆ.

'ಟ್ರೈಬಲ್ಸ್ ಇನ್ ಇಂಡಿಯಾ' (೧೯೯೮) ಎಂಬ ಕೃತಿಯಲ್ಲಿ ಅನೇಕ ಲೇಖನಗಳಿಂದ ಅವುಗಳಲ್ಲಿ ಕೆಲವು ಒರಿಸ್ಸಾ ಮತ್ತು ತಮಿಳುನಾಡಿನ ಆದಿವಾಸಿಗಳ ಕಸುಬು ಮತ್ತು ತಯಾರಿಸಿದ ವಸ್ತುಗಳನ್ನು ಮಾರುಕಟ್ಟೆಯಲ್ಲಿ ಮಾರುವ ಬಗ್ಗೆ ಮತ್ತು ಅದರಿಂದಾಗುವ ಲಾಭನಷ್ಟದ ಬಗ್ಗೆ ತಿಳಿಸಲಾಗಿದೆ. ಈ ಕಸುಬುಗಳಿಂದ ಅವರ ಆರ್ಥಿಕ ಸ್ಥಿತಿ ಉತ್ತಮವಾಗಿದೆಯೋ ಇಲ್ಲವೋ ಎಂಬುದನ್ನು ಚರ್ಚಿಸಲಾಗಿದೆ.

ಈ ಎಲ್ಲ ಅಧ್ಯಯನಗಳು ಸಂತೆಯ ನಿಶ್ಚಿತವಾದ ಈಗಿನ ಸ್ವರೂಪವನ್ನು ತಿಳಿಸುವುದಿಲ್ಲ. ಆಧುನಿಕ ಯುಗದಲ್ಲಿ ಸಂತೆಯು ಯಾವ ರೀತಿಯ ಲಕ್ಷಣವನ್ನು ಹೊಂದಿದೆ ಮತ್ತು ಇದರಲ್ಲಿ ಬುಡಕಟ್ಟು ಯಾವ ರೀತಿಯಾದ ಪಾತ್ರವನ್ನು ವಹಿಸಿವೆ ಎಂಬುದನ್ನು ನನ್ನ ಅಧ್ಯಯನದಲ್ಲಿ ಹೇಳಲಾಗಿದೆ.

# ಅಧ್ಯಾಯ ೨

# ಸಂತೆಯ ಉಗಮ ಮತ್ತು ವಿಕಾಸ

## ಅಧ್ಯಾಯ ೨

# ಸಂತೆಯ ಉಗಮ ಮತ್ತು ವಿಕಾಸ

ಯಾವುದೇ ಒಂದು ವಸ್ತುವನ್ನು ಅಥವಾ ವಿಷಯವನ್ನು ಅಧ್ಯಯನ ಮಾಡುವಾಗ ಆ ವಸ್ತು ಅಥವಾ ವಿಷಯದ ಹುಟ್ಟು, ವಿಕಾಸದ ಬಗ್ಗೆ ತಿಳಿಯುವುದು ಅವಶ್ಯಕ. ಕಾರಣ ಆ ವಿಷಯ ಅಥವಾ ವಸ್ತುವಿನ ಮೂಲವನ್ನು ತಿಳಿದಾಗ ಅದರ ಜ್ಞಾನದ ಬಗ್ಗೆ ಪರಿಪೂರ್ಣತೆಯನ್ನು ಕಂಡುಕೊಳ್ಳಲು ಸಾಧ್ಯ. ಯಾವುದೇ ವಸ್ತು ಅಥವಾ ವಿಷಯದ ಮೂಲವನ್ನು ತಿಳಿಯದೇ ಹೋದರೆ ತಳಪಾಯವಿಲ್ಲದ ಮನೆಯನ್ನು ಕಟ್ಟಿದಂತೆ ಆಗುತ್ತದೆ. ಆದ್ದರಿಂದ ವಿಷಯದ ಪೂರ್ಣ ಗ್ರಹಿಕೆಗೆ ಅದರ ಹುಟ್ಟು, ಪೂರ್ವೋತ್ತರ ಮೂಲ ಅವಶ್ಯಕವಾಗಿ ಬೇಕಾಗಿರುತ್ತದೆ. ಅಂತೆಯೇ ಸಂತೆಯಲ್ಲಿ ಬುಡಕಟ್ಟುಗಳ ವ್ಯವಹಾರ ಅಥವಾ ಕಸುಬುಗಳನ್ನು ತಿಳಿಯುವುದಕ್ಕೆ ಮುಂಚೆ ಸಂತೆಯ ಉಗಮ ಮತ್ತು ವಿಕಾಸವನ್ನು ತಿಳಿಯುವುದು ಅವಶ್ಯಕವಾಗಿದೆ.

ವ್ಯಕ್ತಿ ಏಕಾಂಗಿಯಾಗಿ ಬದುಕಲು ಸಾಧ್ಯವಿಲ್ಲ. "ಮನಕ್ಕೆ ಮನ ಕೂಡಿದ್ರ ಮನಿಮಾರ, ಜನಕ್ಕೆ ಜನ ಕೂಡಿದ್ರ ಸಹಕಾರ"[1] ಎಂಬ ಜನಪದರ ನಾಣ್ಣುಡಿಯಂತೆ ಮಾನವರು ಕಾಡಿಂದ ನಾಡಿಗೆ ಬರುವುದಕ್ಕಿಂತ ಮೊದಲು ಗುಂಪುಗುಂಪಾಗಿಯೇ ವಾಸಿಸುತ್ತಿದ್ದರು. ಅಲೆಮಾರಿ ಬದುಕನ್ನು ಸಾಗಿಸುತ್ತಿದ್ದಾಗಲೂ ಕೂಡ ಗುಂಪುಗಳು ಚದುರಲಿಲ್ಲ. ತಮಗೆ ಮತ್ತು ತಾವು ಸಾಕಿಕೊಂಡಿರುವ ಪ್ರಾಣಿಗಳಿಗೆ ಬೇಕಾದ ಆಹಾರ, ಮತ್ತು ನೀರು ಯಥೇಚ್ಛವಾಗಿ ಎಲ್ಲಿ ದೊರೆಯುತ್ತಿತ್ತೋ ಅಲ್ಲೆಲ್ಲ ನೆಲೆ ನಿಂತ ಜನಸಮೂಹಗಳೇ ಹಳ್ಳಿಗಳಾಗಿ ಪರಿಣಮಿಸಿದವು. ಅಲ್ಲಿ ಕುಟುಂಬ, ಸಮಾಜ, ಧರ್ಮ ಮುಂತಾದ ಸಂಸ್ಥೆಗಳು ಜನ್ಮ ತಾಳಿದವು.

ಹೀಗೆ ನೆಲೆನಿಂತ ಮಾನವರು ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ವಸ್ತುವಿನಿಮಯ ಪದ್ಧತಿಯನ್ನು ಮೊದಮೊದಲು ರೂಢಿಸಿಕೊಂಡರು. ಅದು ಅವರ ಅಗತ್ಯತೆಗಳನ್ನು ಪೂರ್ಣವಾಗಿ ಪೂರೈಸಲು ಸಾಧ್ಯವಾಗಲಿಲ್ಲ. ಆದ್ದರಿಂದ ಹಣದ ವ್ಯವಸ್ಥೆಯು ಹುಟ್ಟಿಕೊಂಡಿತು. ಇದರಿಂದ ತಮಗೆ ಬೇಕಾದ ವಸ್ತುಗಳನ್ನು ಕೊಂಡುಕೊಳ್ಳಲು ಸುಲಭವಾಯಿತು. ಯಾವಾಗ ವಸ್ತುಗಳಿಗೆ ಬೆಲೆ ಕಟ್ಟಲೂ ಪ್ರಾರಂಭವಾಯಿತೋ, ಆಗ ವಸ್ತುಗಳನ್ನು ಮಾರಲು ಮತ್ತು ಕೊಳ್ಳಲು ಒಂದು ನಿಶ್ಚಿತವಾದ ಸ್ಥಳವನ್ನು ನಿಗದಿಪಡಿಸಲಾಯಿತು. ಇದನ್ನು 'ಸಂತೆ' ಎಂದು ಕರೆದು, ಇಲ್ಲಿ ಕೊಂಡುಕೊಳ್ಳುವ ಪ್ರಕ್ರಿಯೆ ಪ್ರಾರಂಭವಾಯಿತು. ಆದರೆ 'ಸಂತೆ' ಇಂಥಾ ದಿನದಂದೇ ಪ್ರಾರಂಭವಾಯಿತು ಎಂಬುದಕ್ಕೆ ಯಾವುದೇ ಕುರುಹುಗಳು ಲಭ್ಯವಿಲ್ಲದಿದ್ದರೂ ಕಳೆದ ಕೆಲ ಶತಮಾನಗಳಿಂದ ಸಂತೆಗಳು ಅಸ್ತಿತ್ವದಲ್ಲಿ ಇದ್ದವು ಎಂಬುದಕ್ಕೆ ಹಲವಾರು ಪುರಾವೆಗಳು ನಮಗೆ

ದೊರೆಯುತ್ತವೆ. ಸಂತೆ ಎಂಬುದು ಎಲ್ಲ ವರ್ಗದ ಜನರಿಗೆ ನಿತ್ಯಜೀವನದಲ್ಲಿ ಪೂರಕವಾಗಿ ಒಂದಿಲ್ಲಾ ಒಂದು ರೀತಿಯಲ್ಲಿ ಸಹಕಾರಿಯಾಗಿದೆ. ಹಿಂದೆ ಸಂತೆಯು ಯಾವ ಉದ್ದೇಶವನ್ನು ಇಟ್ಟುಕೊಂಡು ಆರಂಭವಾಗಿದೆಯೋ ಇಂದು ಸಹ ಅಂದಿಗಿಂತಲೂ ಹೆಚ್ಚಿನ ಕಾರ್ಯವೈಖರಿಯನ್ನು ಮಾಡುತ್ತಿವೆ. ಗ್ರಾಮೀಣ ಜನತೆಯ ಜೀವನಕ್ರಮವು ಇಂದು ಸಂತೆಗೆ ತಕ್ಕಂತೆ ತಮ್ಮ ಕಾರ್ಯವನ್ನು ಮಾಡುತ್ತಿದ್ದಾರೆ. ಉದಾಹರಣೆಗೆ ಸಂತೆಯು ಸೋಮವಾರ ದಿನದಂದು ನಡೆಯುತ್ತಿದ್ದರೆ ಅದೇ ಅವರಿಗೆ ವಾರದ ಕೊನೆಯ ದಿನವಾಗಿ ಪರಿಣಮಿಸಿದೆ. ಅಂದಿಗೆ ಅವರ ಕೆಲಸಗಳು ಸ್ಥಗಿತಗೊಂಡು ದುಡಿತದ ಪ್ರತಿಫಲವನ್ನು ಪಡೆದು ತಮ್ಮ ಜೀವನಾವಶ್ಯಕ ವಸ್ತುಗಳನ್ನು ತೆಗೆದುಕೊಳ್ಳಲು ಸಂತೆಗೆ ಆಗಮಿಸುತ್ತಿದ್ದಾರೆ. ಇವರು ಸಂತೆಯ ದಿನದಂದೇ ತಮ್ಮ ವಸ್ತುಗಳನ್ನು ಮಾರಲು ಮತ್ತು ಕೊಳ್ಳಲು ಬರಲು ಹಲವಾರು ಕಾರಣಗಳಿವೆ. ಸಂತೆಯಲ್ಲಿ ಹೆಚ್ಚಿನ ಜನತೆ ಕೊಳ್ಳಲು ಬರುವುದರಿಂದಲೂ ವ್ಯಾಪಾರಗಾರರಿಗೆ ಲಾಭವಾದರೆ, ಸಂತೆಯಲ್ಲಿ ಮಾರುವಂತ ವಸ್ತುಗಳು ಅಗ್ಗದ ಬೆಲೆಗೆ ದೊರೆಯುವುದರಿಂದಲೂ ಗ್ರಾಹಕರಿಗೂ ಇಲ್ಲಿ ಹೆಚ್ಚಿನ ರೀತಿಯ ಲಾಭವಿದೆ.

ಸಂತೆ ಎಂಬ ವ್ಯವಸ್ಥೆ ರೂಢಿಗೆ ಬಂದು ಶತಮಾನಗಳೇ ಕಳೆದರೂ ಅದರ ಮಹತ್ವ ಇಂದಿಗೂ ಸಹ ಕುಗ್ಗಿಲ್ಲ. ಇಂದಿನ ಸೂಪರ್ ಕಂಪ್ಯೂಟರ್‌ನ ಯುಗದಲ್ಲಿ ಸಂತೆಯ ಅಗತ್ಯವಿದೆ. ಇಲ್ಲಿ ಮಾರುವಂತಹ ವಸ್ತುಗಳು ಪ್ರತಿಯೊಬ್ಬ ಗ್ರಾಮೀಣ ಮತ್ತು ನಗರದ ಪ್ರದೇಶದ ಜನತೆಗೆ ಕೈಗೆಟುಕುವ ಬೆಲೆಯಲ್ಲಿ ದೊರೆಯುತ್ತವೆ. ಸರಳ ರೀತಿಯ ವ್ಯಾಪಾರ ವಹಿವಾಟುಗಳು ನಡೆಯುತ್ತವೆ. ಇದರಿಂದ ಸಂಬಂಧಗಳು ಗಟ್ಟಿತನದಿಂದ ಕೂಡಿರುತ್ತವೆ. ಯಾವ ಆಧುನಿಕ ಮಾರುಕಟ್ಟೆಗಳಲ್ಲಿ ಕಾಣದಂತ ಸಂಬಂಧಗಳು ಸಂತೆಯಲ್ಲಿ ಹೆಚ್ಚಾಗಿ ಬೆಸೆದುಕೊಂಡಿರುತ್ತವೆ. ಪ್ರತಿಯೊಬ್ಬ ವ್ಯಾಪಾರಿಯೂ ತನ್ನ ಉತ್ತಮ ಸಂಬಂಧದಿಂದಲೇ ಅನೇಕ ಗ್ರಾಹಕರನ್ನು ತನ್ನ ಬಳಿಗೆ ಸೆಳೆದುಕೊಳ್ಳುತ್ತಾನೆ. ಇದರಿಂದ ವ್ಯಾಪಾರಗಾರನ ವ್ಯಾಪಾರ ವಹಿವಾಟು ಉತ್ತಮಗೊಳ್ಳುವುದಲ್ಲದೇ ತನ್ನ ಸಾಮಾಜಿಕ ಜೀವನವು ಉತ್ಕೃಷ್ಟತೆಯಿಂದ ಕೂಡಿರುತ್ತದೆ.

## ೨:೧ ಸಂತೆಯ ಉಗಮ

ಜಗತ್ತಿನ ಹುಟ್ಟಿನ ಬಗೆಗೆ ಜೀವವಿಜ್ಞಾನ ತಿಳಿಸುತ್ತದೆಯಾದರೂ ಜಗತ್ತಿನ ಒಳಗಿರುವ ಎಷ್ಟೋ ಕಾರ್ಯವೈಖರಿಗಳನ್ನು ದಾಖಲಿಸುವಲ್ಲಿ ಮನುಷ್ಯ ಎಡವಿದ್ದಾನೆ. ಸಂತೆಯ ಹುಟ್ಟನ್ನು ನಿಖರವಾಗಿ ಹೇಳಲಾಗದಿದ್ದರೂ ಕಳೆದ ಕೆಲ ಶತಮಾನಗಳಿಂದ ಇದು ಅಸ್ತಿತ್ವದಲ್ಲಿದೆ ಎಂಬುದಕ್ಕೆ ಅನೇಕ ಪುರಾವೆಗಳು ದೊರೆತಿವೆ. ಇದನ್ನು ಅಧ್ಯಾಯ ಒಂದರಲ್ಲಿ ಈ ಮೊದಲೇ ತಿಳಿಸಲಾಗಿದೆ. ಆದರೆ ಈ ಪುರಾವೆಗಳು ಅನೇಕ ರೀತಿಯಲ್ಲಿ ನಮಗೆ ಕಾಣಸಿಗುತ್ತವೆ. ಅವುಗಳೆಂದರೆ ಶಾಸನಗಳು, ಹಸ್ತಪ್ರತಿಗಳು, ಪ್ರವಾಸಿಗರ ಬರಹಗಳು, ಜನಪದ ಗಾದೆ ಮತ್ತು ಒಗಟುಗಳು ಇತ್ಯಾದಿ. ಈ ಎಲ್ಲ ಆಧಾರಗಳಿಂದ ಸಂತೆಯ ಅಸ್ತಿತ್ವ ಅಲ್ಲಿ ಮಾರುವಂತಹ ವಸ್ತುಗಳ ಬಗೆಗೆ ತಿಳಿದುಕೊಳ್ಳಲು ಸಾಧ್ಯವಿದೆ. ಇದಲ್ಲದೆ ವ್ಯಕ್ತಿನಾಮಗಳು ಮತ್ತು ಊರಿನೊಂದಿಗೆ ಸಂತೆ ಸೇರಿಕೊಂಡಿರುವುದರಿಂದ ಸಂತೆಯ ಮಹತ್ವವನ್ನು ನಾವು ತಿಳಿಯಬಹುದಾಗಿದೆ.[೨] ಕೆಲವು ಊರುಗಳನ್ನು ಸಂತೆಗಳ ಹೆಸರಿನೊಂದಿಗೆ ಸೇರಿಸಿ ಕರೆಯಲೂ ಕಾರಣಗಳೂ ಇಲ್ಲದಿಲ್ಲ. ಒಂದಾನೊಂದು

ಕಾಲವಲ್ಲಿ ಕೇವಲ ಸಾಮಾನ್ಯ ಗ್ರಾಮವಾಗಿದ್ದಾಗ ಹಳ್ಳಿಯೂ ಹೊಸದಾಗಿ ನಿರ್ಮಾಣವಾದ ಪೇಟೆ, ಮಾರುಕಟ್ಟೆ, ಸಂತೆಯ ಕಾರಣದಿಂದ ಅಥವಾ ಜಾತ್ರೆಯ ಕಾರಣದಿಂದ ಪ್ರಾಮುಖ್ಯತೆಯನ್ನು ಪಡೆದು ಊರಿನ ಹೆಸರು ಸಂತೆಯೊಂದಿಗೆ ಬೆರೆತಿರುವುದನ್ನು ಅನೇಕ ಉದಾಹರಣೆಗಳಿಂದ ತಿಳಿದುಬರುವುದು. ಬಹುಶಃ ಸಂತೆಯು ಪ್ರಾಮುಖ್ಯತೆಯನ್ನು ಪಡೆದಾಗ ಈ ಹೆಸರಿನ ಬದಲಾವಣೆ ಆಗಿರುವ ಸಾಧ್ಯತೆಯಿದೆ. ಅಥವಾ ಸಂತೆಯು ನಡೆಯುವ ವಾರವನ್ನು ಪರಿಗಣಿಸಿ ಆ ಹಸರು ಬಂದಿರುವುದು ಸ್ಪಷ್ಟ. ಉದಾ. ಶನಿವಾರ ಸಂತೆ, ಸೋಮವಾರ ಪೇಟೆ, ಕೊಡಲಿಪೇಟೆ, ವೀರರಾಜೇಂದ್ರಪೇಟೆ (ಕೊಡಗು ಜಿಲ್ಲೆ), ಸಂತೆಬೆನ್ನೂರು, ಸಂತೆಸರಗೂರು, ಸಂತೆಮರಳ್ಳಿ, ಹೊಸಪೇಟೆ ಮುಂತಾದ ನಗರಗಳು ವಿಶಾಲವಾಗಿ ಬೆಳೆದಂತೆ ವಿವಿಧ ಬಡಾವಣೆಗಳಲ್ಲಿ ಬೇರೆ ಬೇರೆ ದಿವಸ ಸಂತೆ ನಡೆಯುವುದರಿಂದ ಆ ಪೇಟೆಗಳನ್ನು ಆಯಾ ದಿವಸ ನಡೆಯುವ ಸಂತೆಯ ಹೆಸರಿನಿಂದ ಅಥವಾ ಆ ಪೇಟೆಯನ್ನು ಕಟ್ಟಿಸಿದವರ ಹೆಸರಿನಿಂದ ಕರೆಯುವ ಪದ್ಧತಿ ವಿಜಯನಗರ ಕಾಲದಿಂದಲೂ ರೂಢಿಯಲ್ಲಿ ಇರುವುದಕ್ಕೆ ಅನೇಕ ಸಾಕ್ಷ್ಯಾಧಾರಗಳು ನಮಗೆ ದೊರೆಯುತ್ತವೆ.

ಪ್ರಾಚೀನ ಮತ್ತು ಮಧ್ಯಕಾಲೀನ ಆರ್ಥಿಕ ಇತಿಹಾಸದ ಅವಲೋಕನದಿಂದ ಸಂತೆಗಳು ತಮ್ಮದೇ ಆದ ಆರ್ಥಿಕ, ವಾಣಿಜ್ಯ, ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿಕೊಂಡು ಬಂದಿರುವುದನ್ನು ಗಮನಿಸಬಹುದು.[೩] 'ಫ್ರಾನ್ಸ್ ಸ್ವಾಸ್ ಬೆರ್‌ಸ್ಸೇ' ಎಂಬ ವಿದೇಶಿ ಪ್ರವಾಸಿ ಬರೆದ ಪತ್ರದಲ್ಲಿ ಮೊಗಲ್ ಚಕ್ರವರ್ತಿ ಔರಂಗಜೇಬನ ಆಡಳಿತವನ್ನು ವಿವರಿಸುತ್ತಾ "ದಿಲ್ಲಿಯ ಚಾವಟ್ಟಿಯಲ್ಲಿ ಅಸಂಖ್ಯಾತ ಸಾಮಾನುಗಳನ್ನು ಮಾರುವ ಮಾರುಕಟ್ಟೆ ಇತ್ತು" ಎಂದು ಹೇಳಿದ್ದಾರೆ. ಇದರಿಂದ ಔರಂಗಜೇಬನ ಕಾಲದಲ್ಲಿಯೂ ಸಂತೆ ಇತ್ತು ಎಂಬುದು ನಮಗೆ ತಿಳಿದುಬರುತ್ತದೆ. ಅಲ್ಲದೆ ೧೨ನೆಯ ಶತಮಾನದ ಶರಣರ ವಚನಗಳಲ್ಲಿಯೂ ಸಂತೆಯ ಬಗ್ಗೆ ಉಲ್ಲೇಖಗಳು ನಮಗೆ ದೊರೆಯುತ್ತವೆ. ಹಾಗೂ ಅನಾದಿ ಕಾಲದಿಂದ ಕೆಲವು ಗಾದೆಗಳನ್ನು ಉದಾಹರಿಸಬಹುದು. ಸಾಮಾನ್ಯ ಜನರ ಬಾಯಲ್ಲಿ ರೂಢಿಯಲ್ಲಿರುವ ಗಾದೆ ಮತ್ತು ಒಗಟುಗಳು ಸಹ ಸಂತೆಯ ಪ್ರಾಚೀನತೆಯನ್ನು ತಿಳಿಸುತ್ತವೆ.

ಹೊಯ್ಸಳರ ಶಾಸನಗಳು, ವಿಜಯನಗರ ಶಾಸನಗಳು, ಚಾಲುಕ್ಯರ ಶಾಸನಗಳು, ಮೊಗಲರ ಶಾಸನಗಳು ಮುಂತಾದ ಶಾಸನಗಳಲ್ಲಿ ಸಂತೆಯ ಬಗ್ಗೆ ಉಲ್ಲೇಖಗಳಿವೆ. ಕನ್ನಡ ನಾಡಿನಲ್ಲಿ ದೊರೆತ ಸುಮಾರು ೨೦೦-೨೫೦ ಶಾಸನಗಳಿಂದ ಮೊದಲು ಇದ್ದ ಸಂತೆ, ಅವುಗಳ ರಚನೆ, ಅವು ಒಳಗೊಂಡ ವಿವಿಧ ವರ್ತಕ ಸಮುದಾಯ, ವರ್ತಕರ ಸಾಮಾಜಿಕ, ರಾಜಕೀಯ ವರ್ಚಸ್ಸು, ಸುಂಕಪದ್ಧತಿ, ಸಂತೆಗೆ ಪೂರಕವಾದಂತಹ ಇತರ ಅಂಶಗಳು ಅಂದರೆ ಹಣಕಾಸು, ಸಂಚಾರ ಸೌಲಭ್ಯ, ತೂಕ ಮತ್ತು ಅಳತೆ, ಆ ಮದು ರಫ್ತು, ವರ್ತಕರ ನೀತಿ ಸಂಹಿತೆ, ವರ್ತಕರ ಸಂಘ ರಚನೆ, ವಿದೇಶಿ ವ್ಯಾಪಾರ ನೀತಿ ಮುಂತಾದ ಹತ್ತು ಹಲವಾರು ವಿಷಯ ತಿಳಿದುಬರುವುದು. ಸಂತೆಯ ಹುಟ್ಟಿನ ಮೊದಲಿನ ಹಂತದಲ್ಲಿ ಕನಿಮೆ ಅವಶ್ಯಕತೆಯನ್ನು ಪೂರೈಸುತ್ತಿದ್ದರೆ, ಇಂದು ಅದರ ಕಾರ್ಯವೈಖರಿ ಹೆಚ್ಚಾಗಿದೆ. ಅಂದರೆ ಸಂತೆಯ ಉಪಯುಕ್ತತೆ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿರುವುದನ್ನು ಇತಿಹಾಸದ ಉದ್ದಕ್ಕೂ ಗಮನಿಸಬಹುದು.

ಪ್ರಾಚೀನ ಕಾಲದ ಸಂತೆಗಳು ಕೇವಲ ಕೆಲವು ಸೀಮಿತ ವ್ಯಾಪ್ತಿಯನ್ನು ಹೊಂದಿದ್ದವು. ಇವು ಆಗಿನ ಕಾಲದ ಮಾನವನ ಸಾಮಾನ್ಯ ಅವಶ್ಯಕತೆಗಳನ್ನು ಪೂರೈಸುತ್ತಿದ್ದವು. ನಂತರ ಮಧ್ಯಕಾಲದಲ್ಲಿ ರಾಜರಿಗೆ ಅನುಕೂಲವಾಗುವ ಹಾಗೂ ಸಾಮಾನ್ಯ ಜನರ ಅವಶ್ಯಕತೆಯನ್ನು ಪೂರೈಸಲು ಸಂತೆಗಳು ರೂಢಿಗೆ ಬಂದವು. ಸಂತೆಗಳ ಜವಾಬ್ದಾರಿಯೂ ಹೆಚ್ಚಾಯಿತು. ಜನಸಾಮಾನ್ಯರ ಜೀವನಾವಶ್ಯಕ ವಸ್ತುಗಳು ಮತ್ತು ರಾಜನಿಗೆ ಬೇಕಾದ ಕುದುರೆ ವ್ಯಾಪಾರ, ಶಸ್ತ್ರಾಸ್ತ್ರಗಳನ್ನು ಈ ಅವಧಿಯಲ್ಲಿ ಮಾರಲಾಗುತ್ತಿತ್ತು ಎಂಬುದಕ್ಕೆ ವಿಜಯನಗರದ ಬಜಾರುಗಳಲ್ಲಿ ನಡೆಯುತ್ತಿದ್ದ ಸಂತೆಗಳೇ ಸಾಕ್ಷಿಯಾಗಿವೆ. ನಂತರದ ಕಾಲಘಟ್ಟದಲ್ಲಿ ಗ್ರಾಮಾಂತರ ಪ್ರದೇಶದ ಜನರಿಗೂ ಅಲ್ಲದೇ ನಗರವಾಸಿ ಜನರಿಗೂ ಸಂತೆಗಳು ಅವಶ್ಯಕವಾಗಿ ಬೇಕಾಯಿತು. ಗ್ರಾಮೀಣ ಜನತೆಯೂ ಸಂತೆಯ ಆಗುಹೋಗುಗಳಿಗೆ ಪೂರಕವಾಗಿ ಸ್ಪಂದಿಸುತ್ತಿರುತ್ತಾರೆ. ಸಂತೆಯಲ್ಲಿ ಎಲ್ಲ ರೀತಿಯ ವಸ್ತುಗಳು ಅಗ್ಗದ ಬೆಲೆಗೆ ದೊರೆಯಲು ಪ್ರಾರಂಭವಾಗಿವೆ. ಕಾರಣ ರೈತ ತಾನು ಉತ್ಪಾದಿಸಿದ ವಸ್ತುಗಳನ್ನು ಸಂತೆಯಲ್ಲಿ ನೇರವಾಗಿ ಮಾರುವುದರಿಂದ, ಅವನು ತನಗೆ ಅನುಕೂಲವಾದ ರೀತಿಯಲ್ಲಿ ಬೆಲೆಯನ್ನು ನಿಗದಿಪಡಿಸಿ ವ್ಯಾಪಾರ ಮಾಡುವುದೇ ಆಗಿದೆ.

ಮಧ್ಯಕಾಲೀನ ಯುಗದಲ್ಲಿ ಅಂದರೆ ವಿಜಯನಗರದ ಅವಧಿಯಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಮತ್ತು ಅದರ ಪ್ರಕೃತಿ ಸಂಪತ್ತನ್ನು ಮುಕ್ತ ಕಂಠದಿಂದ ಕೊಂಡಾಡಿರುವ ವಿದೇಶಿ ಪ್ರವಾಸಿಗರು ಅಲ್ಲಿನ ಮಾರುಕಟ್ಟೆಗಳಲ್ಲಿ ಟನ್‌ಗಟ್ಟಲೆ ಮಾರುತ್ತಿದ್ದ ನಿಂಬೆ, ಕಿತ್ತಾಳೆ, ದ್ರಾಕ್ಷಿ, ದಾಳಿಂಬೆಗಳನ್ನು ಪಾಯಸ್ (೧೫೨೦) ವರ್ಣಿಸಿರುವನು. ಇದೇ ಪ್ರವಾಸಿ ಮುಂದುವರೆದು "ಇಲ್ಲಿ ಮಾರಾಟವಾಗುವ ವಸ್ತುಗಳನ್ನು ನೋಡಿ ನನಗೆ ವರ್ಣಿಸಲು ಸಾಧ್ಯವಾಗಲಿಲ್ಲ. ಈ ತರಹ ಹಸು, ಎಮ್ಮೆಗಳನ್ನು ಮತ್ತೆಲ್ಲಿಯೂ ಕಾಣುವಂತಿಲ್ಲ. ದೊಡ್ಡ ಬೀದಿಗಳ ಎರಡೂ ಬದಿಗಳಲ್ಲಿ ಮಾರುತ್ತಿದ್ದ ನಾನಾ ವಿಧದ ಪದಾರ್ಥಗಳ ಅಂಗಡಿಗಳನ್ನು ಅಲ್ಲಿಯ ಮಾರಾಟದ ವೈಖರಿಯನ್ನು ಈ ಪ್ರವಾಸಿಯು ವರ್ಣಿಸುತ್ತಾ ಎಲ್ಲಿ ಜನರು ಇದನ್ನು ಉತ್ಪ್ರೇಕ್ಷೆ ಎಂದು ಭಾವಿಸುವರೋ"[೨] ಎಂದು ತಾನೇ ಅನುಮಾನ ಪಡುವನು. ವಿಜಯನಗರದ ಪೇಟೆಗಳಲ್ಲಿನ ಸುಂದರ ಗುಲಾಬಿ ಹೂವಿನ ವ್ಯಾಪಾರವನ್ನು ಕುರಿತಂತೆ ಅಬ್ದುಲ್ ರಜಾಕ್ (೧೪೪೩) ಈ ರೀತಿ ವಿವರಣೆ ನೀಡುವನು. "ಗುಲಾಬಿ ವ್ಯಾಪಾರಿಗಳು ತಮ್ಮ ಅಂಗಡಿಗಳ ಮುಂದೆ ಎತ್ತರವಾದ ವೇದಿಕೆಗಳ ಮೇಲೆ ಎರಡೂ ಕಡೆ ಹೂವುಗಳ ರಾಶಿಯನ್ನು ಹಾಕಿಕೊಂಡು ವ್ಯಾಪಾರ ಮಾಡುತ್ತಾರೆ. ಇಲ್ಲಿಯ ಜನರು ಗುಲಾಬಿ ಹೂಗಳು ಇಲ್ಲದಿದ್ದರೆ ಬದುಕುವಂತೆಯೇ ಕಾಣುವುದಿಲ್ಲ"[೩] ಎಂದು ಅಚ್ಚರಿ ಸೂಚಿಸಿರುವನು. ಮುಂದುವರೆದು "ನಗರವು ಏಳು ಸುತ್ತಿನ ಕೋಟೆಗಳಿಂದ ಕೂಡಿದ್ದು ಮೂರನೇ ಮತ್ತು ಏಳನೆಯ ಸುತ್ತುಗಳ ನಡುವೆ ಅಂಗಡಿಗಳು, ಮಾರುಕಟ್ಟೆಗಳು ಒಂದಕ್ಕೊಂದು ಎದುರುಬದುರಾಗಿ ಹೊಂದಿಕೊಂಡು ಇದ್ದವು. ಮಾರುಕಟ್ಟೆಯ ಮುಂಭಾಗ ವಿಶಾಲವಾದ ಗ್ಯಾಲರಿ ಮತ್ತು ಕಮಾನುಗಳಿಂದ ಕೂಡಿರುತ್ತಿತ್ತು" ಎಂದು ವಿವರಿಸಿರುವನು. ತಮ್ಮ ವರ್ಣನೆಯನ್ನು ಕೇವಲ ಗುಲಾಬಿ ಹೂವಿನ ಮತ್ತು ಪಾನ ಸುಪಾರಿ (ಎಲೆ-ಅಡಿಕೆ) ಬಜಾರಿನ ಮಟ್ಟಿಗೆ ಸೀಮಿತಗೊಳಿಸದ ವಿದೇಶಿ ಪ್ರವಾಸಿಗಳು ಜನಸಾಮಾನ್ಯರ ದಿನನಿತ್ಯದ ಮಾರಾಟ ವಸ್ತುಗಳಾದ ಅಕ್ಕಿ ಮತ್ತು ಗೋಧಿಯ ಸಂತೆಯನ್ನು ಕುರಿತು ಸಹ ವರ್ಣಿಸಿರುವರು.

ಇದೇ ರೀತಿ ಪ್ರಾನ್ಸಾಸ್ ಬೆರ್‌ನ್ಸೆ ಎಂಬ ಪ್ರವಾಸಿಗನು ಮೊಗಲ್ ಚಕ್ರವರ್ತಿ ಔರಂಗಜೇಬನ ಕಾಲದಲ್ಲಿಯ ಮಾರುಕಟ್ಟೆಯ ಬಗ್ಗೆ ವಿವರಿಸುತ್ತ ಹೀಗೆ ಹೇಳಿದ್ದಾನೆ. "ಚಾವಟ್ಟೆಯಲ್ಲಿ ಅಸಂಖ್ಯಾತ ಸಾಮಾನುಗಳನ್ನು ಮಾರುವ ಬಜಾರು ಅಥವಾ ಮಾರುಕಟ್ಟೆ ಇದೆ. ನಾನಾತರಹ ದೊಂಬರಾಟ ಮುಂತಾದ ಆಟಪಾಟಗಳನ್ನಾಡುವವರೂ ಇಲ್ಲಿದ್ದಾರೆ"[೬] ಎಂಬುದನ್ನು ತಿಳಿಸಿದ್ದಾನೆ. ಜೆಮೆಲ್ಲಿ ಕರೇರಿ ಎಂಬ ಮತ್ತೊಬ್ಬ ಪ್ರವಾಸಿಗನು ೧೬೯೫ರಲ್ಲಿ ಇಂಡಿಯಾಕ್ಕೆ ಬಂದಿದ್ದನು. ಆ ಸಮಯದಲ್ಲಿ ಮೊಗಲ್ ಚಕ್ರವರ್ತಿ ಔರಂಗಜೇಬನ ಆಳ್ವಿಕೆಯಿತ್ತು. ಇವನ ಪ್ರಕಾರ ಮೊಗಲರ ಆಳ್ವಿಕೆಯಲ್ಲಿ "ಸಾಂಬ್ರಾಣಿ ಎಂಬ ಊರಲ್ಲಿ ಭಾರಿ ಸಂತೆ ನಡೆದು ಆ ಊರು ಒಂದರಿಂದಲೇ ರಾಜನಿಗೆ ಮೂರು ಲಕ್ಷ ರೂಪಾಯಿಗಳ ವರಮಾನವಿತ್ತು"[೭] ಎಂಬುದನ್ನು ತಿಳಿಸುತ್ತಾನೆ.

ಈ ಮೇಲಿನ ಉಲ್ಲೇಖಗಳ ಪ್ರಕಾರ ಸಂತೆಯೊಂಬುದು ಕೇವಲ ವ್ಯಾಪಾರ ವಹಿವಾಟುಗಳು ಮಾತ್ರ ನಡೆಯದೆ ಮನರಂಜನೆ, ಸಂತೆಯಿಂದ ರಾಜನಿಗೆ ವರಮಾನ, ಭಿಕ್ಷಾಟನೆ, ವರ್ತಕ ಸಮುದಾಯದ ಜೀವನ ಮುಂತಾದ ವಿಷಯವನ್ನು ಸಹ ಒಳಗೊಂಡಿರುತ್ತದೆ ಎಂಬುದು ನಮಗೆ ತಿಳಿದುಬರುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ಸಂತೆಯ ಉಗಮವು ವಸ್ತುವಿನಿಮಯ ಪದ್ಧತಿ ಪ್ರಾರಂಭದ ಹಂತದಲ್ಲಿ ಆಗಿದೆ. ಹಣದ ಚಲಾವಣೆ ಬಂದ ನಂತರ ಸ್ಪಷ್ಟ ಚಿತ್ರಣ ನಮಗೆ ತಿಳಿದುಬರುತ್ತದೆ.

## ೨:೨ ಸಂತೆಯ ವಿಕಾಸ

ಅಧ್ಯಯನದ ಪ್ರಾರಂಭದಲ್ಲಿ ಹೇಳಿದಂತೆ ಜನರ ಬೇಡಿಕೆಗಳು ಅಧಿಕಗೊಂಡು ವಸ್ತುವಿನಿಮಯ ಪದ್ಧತಿಯಿಂದ ಹಣದ ಚಲಾವಣೆ ಪ್ರಾರಂಭವಾಯಿತು. ನಮ್ಮ ಪೂರ್ವಜರ ದೈನಂದಿನ ಬೇಡಿಕೆಗಳು ಸಣ್ಣ ಪ್ರಮಾಣದಲ್ಲಿದ್ದವು. ಅಲ್ಲದೆ ಅವರು ತಮಗೆ ಬೇಕಾದ ಸರಕು ಸಾಮಗ್ರಿಗಳನ್ನು ತಾವೇ ಉತ್ಪಾದಿಸಿಕೊಳ್ಳುತ್ತಿದ್ದುದರಿಂದ ವಿನಿಮಯದ ಪ್ರಶ್ನೆ ಉದ್ಭವಿಸದೆ ಪೇಟೆಯ ಮಹತ್ವ ಅಷ್ಟೊಂದು ಅನಿಸಿರಲಿಲ್ಲ. ಆದರೆ ಮುಂದೆ ಮಾನವ ತನ್ನ ಅವಶ್ಯಕತೆಗಿಂತ ಹೆಚ್ಚಿಗೆ ಉತ್ಪಾದಿಸುತ್ತ ಅಥವಾ ಸಂಗ್ರಹಿಸುತ್ತಾ ಹೋದಂತೆಲ್ಲ ಹೆಚ್ಚಾಗಿರುವ ಪದಾರ್ಥಗಳನ್ನು ಇತರರ, ಹೆಚ್ಚಾದ ಸರಕುಗಳೊಂದಿಗೆ ವಿನಿಮಯ ಮಾಡುವ ಪದ್ಧತಿ ಕಾರ್ಯರೂಪಕ್ಕೆ ಬಂದಿತು. ಆದರೆ ಈ ರೀತಿ ವಸ್ತುವಿನಿಮಯ ತನಗೆ ಬೇಕಾದ ಎಲ್ಲ ಸಾಧನ ಸಾಮಗ್ರಿಗಳನ್ನು ಹಾಗೂ ಜೀವನಾವಶ್ಯಕ ವಸ್ತುಗಳನ್ನು ಒದಗಿಸದಾಯಿತು. ಅಲ್ಲದೆ ವಿನಿಮಯದ ನಿಶ್ಚಿತ ಮಾಧ್ಯಮದ ಅಭಾವದಿಂದ ಸರಳ ವಿನಿಮಯ ಕೂಡ ಅಸಾಧ್ಯವಷ್ಟೇ ಅಲ್ಲದೆ ಕಷ್ಟಮಯವಾಯಿತು. ಈ ಶೋಧನೆಯಲ್ಲಿಯೇ ಹಣದ ವ್ಯವಸ್ಥೆ ಏರ್ಪಟ್ಟಿತು. ವಿನಿಮಯಕ್ಕೆ ಅತಿಯಾಗಿ ಉಪಯುಕ್ತವಾದ ಈ ಹಣದ ವ್ಯವಸ್ಥೆಯಿಂದಲೇ ವಾಣಿಜ್ಯ ವಿಕಾಸಗೊಂಡು ವ್ಯಾಪಾರ ಹೆಚ್ಚಿತು. ಹೀಗೆ ಹೆಚ್ಚಾದ ವ್ಯಾಪಾರ ವಹಿವಾಟು ಸಂತೆಗಳ ಬೆಳವಣಿಗೆಗೆ ಕಾರಣವಾಯಿತು.

ಈ ಮೊದಲೇ ತಿಳಿಸಿದಂತೆ ಅನಾದಿ ಕಾಲದಿಂದಲೂ ಸಾಮಾನ್ಯ ಜನರಲ್ಲಿ ಸಂತೆಯನ್ನು ಕುರಿತು ಗಾದೆ ಮತ್ತು ಒಗಟುಗಳು ಹುಟ್ಟಿಕೊಂಡಿವೆ. ಈ ಗಾದೆ ಮತ್ತು ಒಗಟುಗಳು ಸಂತೆಗೆ ಇರುವಂತ ಮಹತ್ವವನ್ನು

ತಿಳಿಯಪಡಿಸುತ್ತವೆ. ಅಷ್ಟೇ ಅಲ್ಲದೆ ೧೨ನೆಯ ಶತಮಾನದಲ್ಲಿ ಬಂದಂತಹ ವಚನಗಳಲ್ಲಿಯೂ ಸಂತೆಯನ್ನು ಕುರಿತ ಉಲ್ಲೇಖಗಳಿವೆ. ಅನೇಕ ವಚನಾಕಾರರು ತಮ್ಮ ಧರ್ಮ ಪ್ರಚಾರಕಕಾಗಿ ಸಂತೆಯನ್ನು ಆಧರಿಸಿರುವುದು ಉಂಟು. "ಚಿಂತೆ ಇಲ್ಲದವನಿಗೆ ಸಂತೆಯಲ್ಲೂ ನಿದ್ದೆ" ಎಂಬ ಗಾದೆಯು ಸುಖಿ ಜೀವನದ ವ್ಯಕ್ತಿಯನ್ನು ಪ್ರತಿಬಿಂಬಿಸುತ್ತಿದ್ದರೆ, "ಸಂತೆ ಹೊತ್ತಿಗೆ ಮೂರು ಮೊಳ ನೇದ್ಹಂಗೆ" ಎಂಬ ಗಾದೆಯು ಸೋಮಾರಿತನವನ್ನು ಬಿಂಬಿಸುತ್ತದೆ. ಅಂದರೆ ಸಂತೆ ಎಂಬುದು ವ್ಯಕ್ತಿಯ ಎರಡು ಮುಖಗಳನ್ನು ಪ್ರತಿಬಿಂಬಿಸುವಂತ ಸಾಧನವಾಗಿದೆ. ಅದೇ ರೀತಿಯಲ್ಲಿ ಅನೇಕ ಗಾದೆಗಳು ಇವೆ. ವಚನಕಾರ್ತಿಯಾದ ಅಕ್ಕಮಹಾದೇವಿ "ಸಂತೆಯೊಳಗೊಂದು ಮನೆಯ ಮಾಡಿ ಸದ್ದುಗದ್ದಲಕ್ಕೆ ಅಂಜಿದಡೊತ್ತಯ್ಯ" ಎಂಬ ವಚನದಲ್ಲಿ ಸಂತೆಯ ಕುರಿತು ಪ್ರಸ್ತಾಪ ಮಾಡಿರುವುದು ನಮಗೆ ತಿಳಿದುಬರುತ್ತದೆ.

[1]ಸಂತೆ ವ್ಯಾಪಾರವು ಒಂದು ನಿರಂತರ ಪ್ರಕ್ರಿಯೆ. ಯಾವಾಗ ಹಣದ ಚಲಾವಣೆ ಆರಂಭವಾಯಿತೋ, ಆಗಿನಿಂದಲೇ ಸಂತೆಯ ಮಹತ್ವವೂ ಹೆಚ್ಚಾಯಿತು. ಪ್ರತಿಯೊಬ್ಬ ವ್ಯಕ್ತಿಯು ಹಣದ ವಿನಿಮಯದಿಂದ ತಮ್ಮ ಅವಶ್ಯಕತೆ ಪೂರೈಸಿಕೊಳ್ಳಲೂ ಪ್ರಾಚೀನ ಕಾಲದಿಂದಲೂ ಸಂತೆಗೆ ಬರಲು ಪ್ರಾರಂಭಿಸಿದನು. ಆದ್ದರಿಂದ ಮೊದಲೂ ನಾವು ಹಣದ ಚಲಾವಣೆಯ ಕುರಿತು ತಿಳಿಯುವುದು ಅವಶ್ಯಕ.

### ೨:೨:೧ ಹಣದ ಚಲಾವಣಾ ಪದ್ಧತಿ

ಹಣದ ಚಾಲಾವಣೆಯ ನಂತರ ಸಂತೆಗಳು ಪ್ರಾರಂಭವಾದವು ಕಾರಣ ವಸ್ತುವಿನಿಮಯಕ್ಕೆ ಮಧ್ಯವರ್ತಿಯಾಗಿ ಹಣ ಕಾರ್ಯ ನಿರ್ವಹಿಸುತ್ತದೆ. ಹಣದ ಚಲಾವಣೆಯು ಸಿಂಧೂ ನಾಗರಿಕತೆಯಲ್ಲೆ (ಕ್ರಿ.ಪೂ. ೩೫೦೦-೨೦೦೦) ಇತ್ತು ಎಂದು ಹೇಳಲಾಗುತ್ತದೆ. ಹಣದ ಚಲಾವಣೆ ಜಾರಿಗೆ ಬರಲು ಪ್ರಮುಖವಾಗಿ ಎರಡು ಕಾರಣಗಳಿವೆ. ಅವುಗಳೆಂದರೆ ಸಾಟಿ ಪದ್ಧತಿಯಲ್ಲಿನ ಮಿತಿ ಅಥವಾ ದೋಷ ಹಾಗೂ ಲೋಹದ ಶೋಧನೆ. ಸಾಟಿ ಪದ್ಧತಿಯಲ್ಲಿ ಜನರು ವಸ್ತುಗಳನ್ನು ವಸ್ತುವಿಗೆ ನೇರವಾಗಿ ಹಣದ ಸಹಾಯವಿಲ್ಲದೆ ಪರಸ್ಪರ ವಿನಿಮಯ ಮಾಡಿಕೊಳ್ಳುವುದಾಗಿದೆ. ಮಾನವನ ಬಯಕೆಗಳು ಮೊದಲು ಬಹಳಷ್ಟು ಮಿತವಾಗಿದ್ದವು. ನಂತರ ಇವು ಹೆಚ್ಚಾದಂತೆ ಸಾಟಿ ಪದ್ಧತಿಯಲ್ಲಿ ಹಲವಾರು ಮಿತಿಗಳು ಕಂಡುಬಂದವು. ಅವುಗಳೆಂದರೆ ಸಾಟಿ ಪದ್ಧತಿಯಲ್ಲಿ ಬಯಕೆಗಳು ಪರಸ್ಪರ ಹೊಂದಿಕೊಂಡಾಗ ಮಾತ್ರ ವಿನಿಮಯ ಸಾಧ್ಯವಾಗುತ್ತಿತ್ತು. ಉದಾಹರಣೆಗೆ ಒಬ್ಬ ವ್ಯಕ್ತಿಯ ಹತ್ತಿರ ಹಸುವಿದ್ದು, ಇದನ್ನು ಗೋಧಿಗೆ ವಿನಿಮಯ ಮಾಡಿಕೊಳ್ಳಲು ಬಯಸಿದಾಗ ಇಬ್ಬರ ಬಯಕೆಯು ಹೊಂದಾಣಿಕೆಯಾಗದೆ ವ್ಯಾಪಾರ ನಡೆಯುವುದಿಲ್ಲ. ಅದೇ ರೀತಿ ವಿನಿಮಯ ಪದ್ಧತಿಯಲ್ಲಿ ವಸ್ತುಗಳ ಬೆಲೆಯನ್ನು ನಿರ್ಧರಿಸುವುದು ಸಹ ಸಮಸ್ಯೆಯಾಗಿರುತ್ತದೆ. ಅಲ್ಲದೇ ಕೆಲವು ವಸ್ತುಗಳ ವಿಭಜನೆಯು ಸಾಧ್ಯವಿಲ್ಲದೇ ಇರುತ್ತದೆ. ಜೊತೆಗೆ ಸಂಪತ್ತನ್ನು ಶೇಖರಿಸುವುದು, ಸಾಲದ ವ್ಯವಹಾರದ ತೊಂದರೆ, ಸಂಪತ್ತಿನ ವರ್ಗಾವಣೆಯ ತೊಂದರೆ ಇವೆಲ್ಲವೂ ಸಾಟಿ ವಿನಿಮಯ ಪದ್ಧತಿಯ ಅನನುಕೂಲಗಳಾಗಿವೆ. ಈ ಎಲ್ಲಾ ತೊಂದರೆಗಳ ನಿವಾರಣೆಗೆ ಹಣವೂ ಅತ್ಯವಶ್ಯಕವಾಯಿತು.[5] ಇಂಥಾ ಸಮಯದಲ್ಲಿಯೇ ಲೋಹದ ಶೋಧವಾಗಿ "ಲೋಹದ ಯುಗ"

ಪ್ರಾರಂಭವಾಯಿತು. ಇದರ ಕಾಲ ಸುಮಾರು ಕ್ರಿ.ಪೂ. ೨೮೦೦ರಿಂದ ಕ್ರಿ.ಪೂ. ೧೦೦೦ ಎಂದು ಪರಿಗಣಿಸಲಾಗಿದೆ.

ಮಾನವರಿಗೆ ಮೊದಲು ಪರಿಚಿತವಾದ ಲೋಹ ತಾಮ್ರ ನಂತರ ಚಿನ್ನ, ಸೀಸ ಮುಂತಾದ ಲೋಹದ ಬಳಕೆಗಳು ಆರಂಭವಾಯಿತು. ಪ್ರಾರಂಭದಲ್ಲಿ ಲೋಹಗಳನ್ನು ಬೇರೆ ಬೇರೆ ಉದ್ದೇಶಗಳಿಗೆ ಬಳಸಲಾಗುತ್ತಿತ್ತು. ನಂತರ ಇದರ ಮೌಲ್ಯವನ್ನು ಅರಿತ ಜನರು ಇವುಗಳನ್ನು ನಾಣ್ಯಗಳ ರೂಪದಲ್ಲಿ ಚಲಾವಣೆಗೆ ತಂದರು. ಚಿನ್ನದ ನಾಣ್ಯಗಳನ್ನು ಮೊಟ್ಟಮೊದಲ ಬಾರಿಗೆ ಪ್ರಚುರ ಪಡಿಸಿದರು ಕುಶನರಾಗಿದ್ದಾರೆ. ಹಣದ ರೂಪವೂ ಕಾಲದಿಂದ ಕಾಲಕ್ಕೆ, ಬದಲಾಗುತ್ತಾ ಬಂದಿದೆ. ಪ್ರಾಚೀನ ಕಾಲದಲ್ಲಿ ಚಿನ್ನದ ನಾಣ್ಯ, ಬೆಳ್ಳಿಯ ನಾಣ್ಯ, ತಾಮ್ರದ ನಾಣ್ಯ, ಕಂಚಿನ ನಾಣ. ಚರ್ಮದ ನಾಣ್ಯ ಮುಂತಾದ ನಾಣ್ಯಗಳ ಚಲಾವಣೆಯಲ್ಲಿ ಇದ್ದವು. ಇವು ವಸ್ತುವಿನಿಮಯ ಸಾಧನವಾಗಿ ಬಳಸಲ್ಪಡುತ್ತಿದ್ದವು. ಇವುಗಳಿಂದ ಸಾಟಿ ವಿನಿಮಯ ಪದ್ಧತಿಯ ದೋಷಗಳು ನಿವಾರಣೆಯಾದವು. ಚಿನ್ನದ ನಾಣ್ಯವು ನಾಣ್ಯಗಳಲ್ಲೆ ಅತ್ಯಂತ ಪ್ರಮುಖವಾದುದು ಮತ್ತು ಹೆಚ್ಚು ಬೆಲೆ ಬಾಳುವ ನಾಣ್ಯವಾಗಿತ್ತು. ಕಾರಣ ಚಿನ್ನವು ವಿರಳವಾಗಿ ದೊರೆಯುವಂತ ಮತ್ತು ಗಟ್ಟಿತನದಿಂದ ಕೂಡಿರುವಂತ ಲೋಹವಾಗಿದೆ. ಚಿನ್ನದ ನಾಣ್ಯದ ಮುಖ ಬೆಲೆಯು ಇದರ ಆಂತರಿಕ ಬೆಲೆಗೆ ಸಮವಾಗಿದ್ದರಿಂದ, ಇದನ್ನು ಯಾರೂ ಸಹ ಕೋಟಾ ನಾಣ್ಯವನ್ನು ಸೃಷ್ಟಿಸಲು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಇದು ಹೆಚ್ಚು ಜನಪ್ರಿಯವಾಗಿತ್ತು. ಇದರ ನಂತರದ ಸ್ಥಾನ ಬೆಳ್ಳಿಯ ಮತ್ತು ತಾಮ್ರದ ನಾಣ್ಯಗಳಿಗೆ ಲಭ್ಯವಿತ್ತು. ಅಲ್ಲದೇ ಮೊಗಲರ ಆಳ್ವಿಕೆಯಲ್ಲಿ ಮಹಮ್ಮದ್ ಬಿನ್ ತುಘಲಕ್‌ನು ಚರ್ಮದ ನಾಣ್ಯಗಳನ್ನು ತಯಾರಿಸಿ ಒಂದು ವಿಚಿತ್ರವಾದ ಇತಿಹಾಸವನ್ನು ನಿರ್ಮಿಸಿದನು. ಆದರೆ ಇಲ್ಲಿ ಕೋಟಾ ನಾಣ್ಯಗಳು ಅಧಿಕವಾಗಿ ಚರ್ಮದ ನಾಣ್ಯ ಬಿದ್ದು ಹೋಯಿತು.

ಮೇಲ್ಕಂಡ ನಾಣ್ಯಗಳು ಸಾಟಿ ಪದ್ಧತಿಯಲ್ಲಿಯ ದೋಷಗಳನ್ನು ನಿವಾರಿಸಿದವಾದರೂ, ಈ ನಾಣ್ಯ ಪದ್ಧತಿಯೂ ಸಹ ದೋಷಗಳಿಂದ ಮುಕ್ತವಾಗಿರಲಿಲ್ಲ. ಈ ನಾಣ್ಯಗಳನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಲು ಸುಲಭವಾಗಿರಲಿಲ್ಲ. ಸಾಗಣೆ ಸಮಯದಲ್ಲಿ ನಾಣ್ಯಗಳು ತುಂಬಾ ಭಾರವಾಗಿದ್ದವು. ಮತ್ತು ಕಳ್ಳಕಾಕರು ಈ ನಾಣ್ಯಗಳನ್ನು ಅಪಹರಿಸುವ ಅಪಾಯವೂ ಸಹ ಇತ್ತು. ಈ ಎಲ್ಲಾ ಅನನುಕೂಲಗಳನ್ನು ಎದುರಿಸಲು ಕಾಗದ ಹಣ ಚಲಾವಣೆಗೆ ಬಂದಿತು. ಕಾಗದದ ಹಣ ಭಾರತದಲ್ಲಿ ಬ್ರಿಟಿಷರ ಆಗಮನದೊಂದಿಗೆ ಪ್ರಾರಂಭವಾಯಿತು. ಕಾಗದದ ಹಣವು ಸಾಮಾನ್ಯ ಕಾಗದದಿಂದ ತಯಾರಿಸದೇ ಹೆಚ್ಚು ದೀರ್ಘಾವಧಿ ಬಾಳಿಕೆ ಬರುವಂತ ಮತ್ತೂ ಯಾರು ಸಹ ಈ ಹಣವನ್ನು ನಕಲಿ ಮಾಡದಂತೆ ತಯಾರಿಸಲಾಗಿರುತ್ತದೆ. ಈ ಹಣವು ಅತ್ಯಂತ ಅನುಕೂಲಕಾರಿಯಾಗಿದೆ. ಅಲ್ಲದೇ ವೈಜ್ಞಾನಿಕತೆಯಿಂದಲೂ ಕೂಡಿದೆ. ಆದಾಗ್ಯೂ ಆಧುನಿಕ ಕಂಪ್ಯೂಟರ್ ಯುಗದಲ್ಲಿ ಕಾಗದದ ಹಣದ ನಕಲಿ ಹಣವನ್ನು ತಯಾರಿಸುತ್ತಿದ್ದಾರೆ. ಆದರೂ ಸಹ ಈ ಹಣ ಬಹಳ ದೀರ್ಘವಾದ ಸಮಯದಿಂದಲೂ ಅಸ್ತಿತ್ವದಲ್ಲಿದೆ. ಆಧುನಿಕ ಯುಗದಲ್ಲಿ ಕಾಗದ ಹಣದ ಜೊತೆಗೆ ನಾಣ್ಯಗಳು ಮತ್ತು ಕ್ರೆಡಿಟ್ ಕಾರ್ಡುಗಳು ಸಹ ಚಲಾವಣೆಯಲ್ಲಿದೆ. ಆದರೆ ನಾಣ್ಯಗಳು ಸೀಮಿತ ಕಾರ್ಯವನ್ನು ಮಾಡುತ್ತಿದ್ದರೆ, ಕ್ರೆಡಿಟ್ ಕಾರ್ಡುಗಳು ಕೆಲವೊಂದು ವರ್ಗಗಳಿಗೆ ಮಾತ್ರ ಮೀಸಲಾಗಿವೆ.

## ೨:೩ ಪ್ರಾಚೀನ ಕಾಲದ ಸಂತೆಗಳು ಮತ್ತು ಆಧುನಿಕ ಸಂತೆಗಳ ಹೋಲಿಕೆ

ಪ್ರಾಚೀನ ಕಾಲದ ಸಂತೆಗಳಲ್ಲಿ ಹೆಚ್ಚಾಗಿ ದಿನನಿತ್ಯ ಉಪಯೋಗಿ ವಸ್ತುಗಳನ್ನು ಮಾರುತ್ತಿದ್ದರು. ಅಂದರೆ ತರಕಾರಿ, ಹಣ್ಣು-ಹಂಪಲು, ಮಡಿಕೆಗಳು, ಬುಟ್ಟಿಗಳು, ದವಸ-ಧಾನ್ಯಗಳು, ಹೂಗಳು, ಹಸು-ಎಮ್ಮೆಗಳು, ಆಲಂಕಾರಿಕ ವಸ್ತುಗಳು, ಚಿನ್ನ-ಬೆಳ್ಳಿ-ವಜ್ರ-ವೈಢೂರ್ಯಗಳು, ರಾಜನಿಗೆ ಅನುಕೂಲವಾದ ಕುದುರೆಗಳು, ಯುದ್ಧ-ಸಾಮಗ್ರಿಗಳು, ವಸ್ತ್ರಗಳು ಮುಂತಾದವುಗಳನ್ನು ಮಾರುತ್ತಿದ್ದರು. ಆದರೆ ಆಧುನಿಕ ಜಗತ್ತಿನ ಸಂತೆಗಳು ಕೇವಲ ತರಕಾರಿ, ಹಣ್ಣು-ಹಂಪಲ, ಮಡಿಕೆ, ಬುಟ್ಟಿಗಳು, ದವಸ-ಧಾನ್ಯಗಳು, ಕೃಷಿ ಸಂಬಂಧಿ ವಸ್ತುಗಳನ್ನು ಮಾತ್ರ ಮಾರಾಟ ಮಾಡುತ್ತಿದ್ದಾರೆ. ಚಿನ್ನ-ಬೆಳ್ಳಿ-ವಜ್ರ-ವೈಢೂರ್ಯಗಳಿಗೆ ಬೇರೆಯದೇ ರೀತಿಯಲ್ಲಿ ಮಾರುಕಟ್ಟೆಯ ವ್ಯವಸ್ಥೆ ಇದೆ. ರಾಜನಿಗೆ ಸಂಬಂಧಿಸಿದ ವಸ್ತುಗಳೆಲ್ಲ ಇಲ್ಲವಾಗಿವೆ. ಕಾರಣ ರಾಜನ ಆಳ್ವಿಕೆ ಆಧುನಿಕ ವ್ಯವಸ್ಥೆಯಲ್ಲಿ ಇಲ್ಲದಿರುವುದೇ ಆಗಿದೆ. ಆದರೆ ಆಧುನಿಕ ಸಂತೆಯು ಇಂದಿಗೂ ಸಹ ಪ್ರಸ್ತುತ. ಅವು ಯಾವ ಉದ್ದೇಶದಿಂದ ಹುಟ್ಟಿಕೊಂಡಿದ್ದವೋ, ಅದೇ ರೀತಿ ಹೆಚ್ಚಿನ ರೀತಿಯ ಕಾರ್ಯವೈಖರಿಯನ್ನು ಇಂದು ಮಾಡುತ್ತಿವೆ. ಸಂತೆಗಳು ಗ್ರಾಮೀಣ ಪ್ರದೇಶದ ಜನರಿಗೆ ಹಿಂದೆ ಯಾವ ರೀತಿ ಅನುಕೂಲತೆಯನ್ನು ಕೊಡುತ್ತಿತ್ತೋ, ಇಂದು ಅದಕ್ಕಿಂತಲೂ ಹೆಚ್ಚಿನ ರೀತಿಯ ಅನುಕೂಲತೆಯನ್ನು ಒದಗಿಸುತ್ತಿದೆ.

ಪ್ರಾಚೀನ ಕಾಲದಲ್ಲಿ ಸಂತೆಗಳಲ್ಲಿ ನಾನಾ ವಿಧವಾದ ವಸ್ತುಗಳು ದೊರೆಯುತ್ತಿದ್ದವು ಎಂಬುದಕ್ಕೆ ಅನೇಕ ರೀತಿಯ ಸಾಕ್ಷ್ಯಾಧಾರಗಳು ದೊರೆತಿವೆ. ಅವುಗಳಲ್ಲಿ ಮುಖ್ಯವಾದುದು, ವಿದೇಶಿ ಪ್ರವಾಸಿಗನಾದ ಫಯಾಸ್‌ನು ಈ ಹಿಂದೆ ಪ್ರಸ್ತಾಪಿಸಿದಂತೆ ವಿಜಯನಗರದ ಸಂತೆಯನ್ನು ಕುರಿತಂತೆ ಈ ರೀತಿ ವಿವರಿಸುತ್ತಾನೆ. "ಇಲ್ಲಿ ಪ್ರತಿದಿನ ಸಾಯಂಕಾಲ ಸಂತೆ ನಡೆಯುತ್ತಿತ್ತು. ಅಲ್ಲಿ ಸಾಮಾನ್ಯ ಕುದುರೆಗಳು, ಗಿಡ್ಡ ಜಾತಿಯ ಸವಾರಿ ಕುದುರೆಗಳು, ಹಣ್ಣು ಮತ್ತು ತೋಟದ ಬೆಳೆಗಳು ಮತ್ತು ಮರದ ವಸ್ತುಗಳು ಮಾರಾಟವಾಗುತ್ತಿತ್ತು. ಅಲ್ಲದೇ ಪ್ರತಿ ಶುಕ್ರವಾರ ಹಂದಿಗಳ, ಕೋಳಿಗಳ ಮತ್ತು ಒಣಗಿದ ಮೀನುಗಳ ಸಂತೆ ನಡೆಯುತ್ತಿತ್ತು. ನಗರದ ಪ್ರತಿ ಒಂದು ಭಾಗದಲ್ಲಿ ಪ್ರತಿ ದಿವಸ ಸಂತೆ ನಡೆಯುತ್ತಿತ್ತು"[೯]. ಇದರಂತೆ ಪ್ರತಿ ಸಂತೆಯಲ್ಲೂ ಎಲ್ಲಾ ವಿಧವಾದ ವಸ್ತುಗಳು ದೊರೆಯುತ್ತಿತ್ತು ಎಂಬುದು ನಮಗೆ ತಿಳಿದುಬರುತ್ತದೆ. ಇದೇ ಪ್ರವಾಸಿ ಮುಂದುವರೆದು ಮಾರುಕಟ್ಟೆಗಳಲ್ಲಿ ರಾಶಿಗಟ್ಟಲೆ ಮಾರುತ್ತಿದ್ದ ನಿಂಬೆ, ಕಿತ್ತಳೆ, ದ್ರಾಕ್ಷಿ, ದಾಳಿಂಬೆಗಳನ್ನು ವರ್ಣಿಸುತ್ತಾ, "ಇಲ್ಲಿ ಮಾರಾಟವಾಗುವ ವಸ್ತುಗಳನ್ನು ನೋಡಿ ನನಗೆ ವರ್ಣಿಸಲು ಸಾಧ್ಯವಾಗಲಿಲ್ಲ. ಈ ತರಹ ಹಸು ಎಮ್ಮೆಗಳನ್ನು ಮತ್ತೆಲ್ಲಿಯೂ ಕಾಣುವಂತಿಲ್ಲ, ದೊಡ್ಡ ಬೀದಿಗಳ ಎರಡೂ ಬದಿಗಳಲ್ಲಿ ಮಾರುತ್ತಿದ್ದ ನಾನಾ ವಿಧದ ಪದಾರ್ಥಗಳ ಅಂಗಡಿ"ಗಳನ್ನು ಅಲ್ಲಿಯ ಮಾರಾಟ ವೈಖರಿಯನ್ನು ಈ ಪ್ರವಾಸಿಯು ವರ್ಣಿಸುತ್ತಾ ಎಲ್ಲಿ ಜನರು ಇದನ್ನು ಉತ್ಪ್ರೇಕ್ಷೆ ಎಂದು ಭಾವಿಸುವರೋ ಎಂದು ತಾನೇ ಅನುಮಾನ ಪಡುವನು. ವಿಜಯನಗರದ ಪೇಟೆಗಳಲ್ಲಿನ ಸುಂದರ ಗುಲಾಬಿ ಹೂವಿನ ವ್ಯಾಪಾರವನ್ನು ಕುರಿತಂತೆ ಅಬ್ದುಲ್ ರಜಾಕ್ ಎಂಬ ವಿದೇಶಿ ಪ್ರವಾಸಿ ಈ ರೀತಿ ವಿವರಣೆ ನೀಡುವನು "ಗುಲಾಬಿ ವ್ಯಾಪಾರಿಗಳು ತಮ್ಮ ಅಂಗಡಿಗಳ ಮುಂದೆ ಎತ್ತರವಾದ ವೇದಿಕೆಗಳ ಮೇಲೆ ಎರಡೂ ಕಡೆ ಹೂವುಗಳ

ರಾಶಿಯನ್ನು ಹಾಕಿಕೊಂಡು ವ್ಯಾಪಾರ ಮಾಡುತ್ತಾರೆ. ಇಲ್ಲಿಯ ಜನರು ಗುಲಾಬಿ ಹೂವುಗಳು ಇಲ್ಲದಿದ್ದರೆ ಬದುಕುವಂತೆಯೇ ಕಾಣುವುದಿಲ್ಲ”[೧೦] ಎಂದು ಹೇಳಿದ್ದಾನೆ. ಇದೇ ರೀತಿ ಕನಕದಾಸರು “ಮೋಹನ ತರಂಗಿಣಿ”ಯಲ್ಲಿ ಸೋಮಸೂರಿಯ ಬೀದಿಯಲ್ಲಿದ್ದ ಅಂಗಡಿಗಳನ್ನು, ಅಲ್ಲಿ ಮಾರಾಟವಾಗುತ್ತಿದ್ದ ವಸ್ತುಗಳನ್ನು ಮನಸಾರೆ ವರ್ಣಿಸಿದ್ದಾರೆ. ಸುರಗಿ, ಸೇವಂತಿಗೆ, ಕುಂದ, ಮಂದಾರ, ಪಾದರಿ, ಕಂಬೆ, ಕಣಗಿಲೆಯಂತಹ ಹೂಗಳು: ಇವುಗಳಲ್ಲದೆ ಕುಶಲಗಾರರು ತಯಾರಿಸಿದ ವಸ್ತುಗಳು: ತರಕಾರಿ ಇನ್ನಿತರ ಜೀವನಾವಶ್ಯಕ ವಸ್ತುಗಳನ್ನು ಬಜಾರುಗಳ ಇಕ್ಕೆಲಗಳಲ್ಲಿ ಇಡಲಾಗುತ್ತಿದ್ದಿತೆಂಬ ಬಗೆಗೆ ಪ್ರಸ್ತಾಪಿಸಿದ್ದಾರೆ. ಇಷ್ಟೇ ಅಲ್ಲದೇ ೧೬೩೨ರಲ್ಲಿ ಜಹಾಂಗೀರನು ಮೊಗಲ್ ಚಕ್ರವರ್ತಿಯಾಗಿದ್ದ ಕಾಲದಲ್ಲಿ ಬಂದಿದ್ದ ಒಬ್ಬ ಸಾಮಾನ್ಯ ವಿದೇಶಿ ಪ್ರವಾಸಿಗನಾದ ವಿಲಿಯಮ್ ಬ್ರೂಟನ್‌ನು ಆಗಿನ ಮೇಲ್ಕಂಡಿ ಮಾರುಕಟ್ಟೆಯ ಬಗ್ಗೆ ಈ ರೀತಿ ಹೇಳಿದ್ದಾರೆ. “ಮೇಲ್ಕಂಡಿಯಲ್ಲಿ ಒಂದು ಮಾರುಕಟ್ಟೆಯಿದೆ. ಇಲ್ಲಿ ವಿಧ ವಿಧ ಹಣ್ಣು, ಹಂಪಲು, ನಾರು ಬೇರು, ಮೀನು-ಮಾಂಸ, ಕೋಳಿ ಕೊಕ್ಕರೆ, ಹಕ್ಕಿಪಿಕ್ಕಿ ಮತ್ತು ಇತರ ನಿತ್ಯೋಪಯೋಗಿ ವಸ್ತುಗಳನ್ನು ಮಾರುತ್ತಿದ್ದರು.”[೧೧]

ಮೇಲೆ ಹೇಳಿರುವಂತ ವಿದೇಶಿ ಪ್ರವಾಸಿಗರು ಮತ್ತು ದಾಸರ ಪ್ರಕಾರ ಪ್ರಾಚೀನ ಮಾರುಟ್ಟೆಯಲ್ಲಿ ದೊರೆಯುವಂತ ಎಲ್ಲ ವಸ್ತುಗಳು ಆಧುನಿಕ ಗ್ರಾಮಾಂತರ ಪ್ರದೇಶದ ಸಂತೆಗಳಲ್ಲಿ ಇಂದಿಗೂ ಸಹ ಸಿಗುತ್ತಿವೆ. ಆಗಿನ ಸಂತೆಗಳಂತೆಯೇ ಇಂದಿನ ಸಂತೆಗಳು ಸಹ ತನ್ನ ಕಾರ್ಯವೈಖರಿಯನ್ನು ನಡೆಸುತ್ತಿವೆ. ಆಗಿನ ಕಾಲದ ಸಂತೆಗಳಲ್ಲಿ ಇದ್ದಂತೆಯೆ ಈಗಿನ ಕಾಲದ ಸಂತೆಗಳಲ್ಲೂ ವ್ಯಾಪಾರ-ವಹಿವಾಟು, ಮನರಂಜನೆ, ಭಿಕ್ಷಾಟನೆ ಮುಂತಾದ ಎಲ್ಲಾ ರೀತಿಯ ವ್ಯವಸ್ಥೆಯು ದೊರೆಯುತ್ತಿವೆ. ಆದರೆ ಕಾಲಕ್ಕೆ ತಕ್ಕಂತೆ ಸಂತೆಯ ಸ್ವರೂಪವು ಬದಲಾಗುತ್ತ ಬಂದಿದೆ. ಕೆಲವು ಬೆಲೆ ಬಾಳುವಂತ ವಸ್ತುಗಳಿಗೆ ಪ್ರತ್ಯೇಕ ರೀತಿಯ ಮಾರುಕಟ್ಟೆಯನ್ನು ಒದಗಿಸಲಾಗಿದೆ. ಅಲ್ಲದೇ ಆಧುನಿಕ ರೀತಿಯ ಹೊಸ ಹೊಸ ಆವಿಷ್ಕಾರದ ವಸ್ತುಗಳಿಗೂ ಪ್ರತ್ಯೇಕ ಮಾರುಟ್ಟೆಯನ್ನು ಏರ್ಪಡಿಸಲಾಗಿದೆ. ಆದರೆ ಹೆಚ್ಚಾಗಿ ಗ್ರಾಮಾಂತರ ಪ್ರದೇಶದ ಜನರ ನಿತ್ಯೋಪಯೋಗಿ ಅಥವಾ ಜೀವನಾವಶ್ಯಕ ವಸ್ತುಗಳನ್ನು ಪೂರೈಸುವಲ್ಲಿ ಸಂತೆಗಳು ಮಹತ್ವದ ಪಾತ್ರವನ್ನು ವಹಿಸುತ್ತಿದೆ. ಭಾರತದ ಜೀವನಾಡಿಗಳಾದ ಗ್ರಾಮಾಂತರ ಪ್ರದೇಶಗಳು ಸಂತೆಗಾಗಿಯೇ ವಿಶೇಷ ರೀತಿಯಲ್ಲಿ ಸಜ್ಜಾಗುವುದು ಸಂತೆಗೆ ಇರುವ ಮಹತ್ವವನ್ನು ತಿಳಿಯಪಡಿಸುತ್ತದೆ. ಇಂದಿಗೂ ಸಹ ಅನೇಕ ಸಮುದಾಯಗಳು ಸಂತೆಯನ್ನು ನಂಬಿ ಜೀವನ ಸಾಗಿಸುತ್ತಿವೆ. ಸಂತೆಯೆ ಅವರ ಜೀವಾಳವಾಗಿದೆ. ಇಷ್ಟೇ ಅಲ್ಲದೆ ಸಂತೆಗಳು ಮನರಂಜನೆಯಿಂದಲೂ ಕೂಡಿರುತ್ತದೆ. ಫ್ರಾನ್ಸಾಸ್ ಬೆರ್‌ಸ್ಸೆ ಎಂಬ ವಿದೇಶಿ ಪ್ರವಾಸಿಗನು ಬರೆದ ಪತ್ರದಲ್ಲಿ ಸಂತೆಯಲ್ಲಿ ಮನರಂಜನೆಯೂ ಔರಂಗಜೇಬನ ಕಾಲದಲ್ಲಿ ಇತ್ತು ಎಂದು ಹೇಳಿದ್ದಾನೆ. ಇವನ ಪ್ರಕಾರ “ಚಾವಟ್ಟಿಯಲ್ಲಿ ಅಸಂಖ್ಯಾತ ಸಾಮಾನುಗಳನ್ನು ಮಾರುವ ಬಜಾರು ಅಥವಾ ಮಾರುಕಟ್ಟೆ ಇದೆ. ನಾನಾ ತರಹ ದೊಂಬರಾಟ ಮುಂತಾದ ಆಟ-ಪಾಟಗಳನ್ನಾಡುವವರೂ ಇಲ್ಲಿದ್ದಾರೆ.” ಪ್ರಾಚೀನ ಕಾಲದಲ್ಲಿ ಇದ್ದಂತೆಯೆ ಆಧುನಿಕ ಸಂದರ್ಭದ ಗ್ರಾಮಾಂತರ ಪ್ರದೇಶದ ಸಂತೆಗಳಲ್ಲಿಯೂ ದೊಂಬರಾಟ, ವಿವಿಧ ತರಹದ ಆಟ-ಪಾಟಗಳು, ಸಿಂಧೊಳ್ಳಿ ಜನಾಂಗದ ಮೈಜುಮ್ಮೆನ್ನಿಸುವ ಪ್ರದರ್ಶನ, ಹಗಲುವೇಷಗಾರರ

ವೇಷಭೂಷಣದ ಪ್ರದರ್ಶನ, ಧಾರ್ಮಿಕ ಭಿಕ್ಷಾಟನೆಯ ಹಾಡುಗಳು ಮುಂತಾದ ಎಲ್ಲ ರೀತಿಯ ಮನರಂಜನೆಯು ಸಂತೆಯಲ್ಲಿ ಲಭ್ಯವುಂಟು. ಪ್ರಾಚೀನ ಕಾಲದಲ್ಲಿ ಇದ್ದಂತಹ ಸಂತೆಯ ಅಂಶಗಳು ಇಂದಿಗೂ ಸಹ ಪ್ರಸ್ತುತವಾಗಿವೆ.

ಪ್ರಾಚೀನ ಕಾಲದ ಸಂತೆಗಳಲ್ಲಿ ತರಕಾರಿ ಮಾರಾಟಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇದ್ದಿಲ್ಲ. ಆಗಿನ ಜನರಿಗೆ ಅವಶ್ಯಕತೆ ಇದ್ದ ತರಕಾರಿ ವಸ್ತುಗಳನ್ನು ತಮ್ಮ ಮನೆಯ ಹಿತ್ತಲಿನಲ್ಲಿ ಬೆಳೆಯುತ್ತಿದ್ದರು. ತಮ್ಮಲ್ಲಿ ಬೆಳೆಯದೇ ಇರುವಂತ ತರಕಾರಿಗಳನ್ನು ಕೊಳ್ಳಲು ಅವರೂ ನೇರವಾಗಿ ರೈತರಿಂದ ತೋಟಗಳಲ್ಲಿ ಪಡೆಯುತ್ತಿದ್ದರು. ಸಾಂಬಾರು ಪದಾರ್ಥಗಳನ್ನು ಮಾತ್ರ ಕೊಳ್ಳಲೂ ಸಂತೆಗೆ ಆಗಮಿಸುತ್ತಿದ್ದರು. ಕಾರಣ ಎಲ್ಲ ಜನರು ಸಾಂಬಾರು ಪದಾರ್ಥವನ್ನು ಬೆಳೆಯುತ್ತಿರಲಿಲ್ಲ. ಆದ್ದರಿಂದ ಜನರು ತಮಗೆ ಬೆಳೆಯಲು ಸಾಧ್ಯವಿಲ್ಲದ ವಸ್ತುಗಳನ್ನು ಮಾತ್ರ ಕೊಳ್ಳಲು ಸಂತೆಗೆ ಬರುತ್ತಿದ್ದರು. ಸಂತೆಯಲ್ಲಿ ಮಾತ್ರ ವ್ಯಾಪಾರ ಮಾಡುವ ವರ್ತಕರು ಒಂದು ಕಡೆ ಇದ್ದರೆ, ತಲೆಯ ಮೇಲೆ ಬುಟ್ಟಿಯನ್ನು ಹೊತ್ತು ಊರುಗಳಲ್ಲಿ ವ್ಯಾಪಾರ ಮಾಡುವ ವ್ಯಾಪಾರಿಗಳು ಇದ್ದರು. "ಹರಿದ ಚೀಲದಲ್ಲಿ ಕಳವೆಯ (ಭತ್ತ) ತುಂಬಿ ಸುಂಕಕ್ಕೆ ಅಂಜಿ ರಾತ್ರಿಯೆಲ್ಲ ನಡೆದರು" ಎನ್ನುವ ಕವಿಯೋರ್ವನ ಮಾತು ಸಂತೆಯಲ್ಲಿ ತಮ್ಮ ವಸ್ತುಗಳನ್ನು ಮಾರಲು ಹೋದರೆ ಸುಂಕ ಕಟ್ಟಬೇಕು ಎಂಬ ಕಾರಣಕ್ಕಾಗಿ ಸುಂಕದ ಕಟ್ಟೆಯನ್ನು ತಪ್ಪಿಸಿ ರಾತ್ರಿ ಸಂತೆಗೆ ಬರುವ ವ್ಯಾಪಾರಿಯನ್ನು ಕುರಿತು ಹೇಳುತ್ತದೆ. ಇದರಿಂದ ಹಣವೂ ಉಳಿತಾಯವಾಗುವುದಲ್ಲದೆ ತಮ್ಮ ಸರಕುಗಳಿಗೆ ತಾವೇ ಬೆಲೆ ನಿಗದಿಪಡಿಸಲು ಸಹ ಸಹಕಾರಿಯಾಗುತ್ತಿತ್ತು ಎಂಬುದು ನಮಗೆ ತಿಳಿದುಬರುವ ಅಂಶವಾಗಿದೆ.

ಪ್ರಾಚೀನ ಕಾಲದಲ್ಲಿ ಶ್ರೀಮಂತರು, ರಾಜ ಮಹಾರಾಜರು ಧರಿಸಿ ಬಿಟ್ಟಂತಹ ಹಳೆಯ ಬಟ್ಟೆಗಳನ್ನು ಸಂಸ್ಕರಿಸಿ ಅಥವಾ ನವೀಕರಿಸಿ ಮಾರುಕಟ್ಟೆಯಲ್ಲಿ ಹರಾಜಿನಲ್ಲಿ ಮಾರುತ್ತಿದ್ದರು. ಈ ಬಟ್ಟೆಗಳನ್ನು ಕೆಳಮಟ್ಟದ ಜಾತಿಯವರು ಖರೀದಿಸುತ್ತಿದ್ದರು. ಆದರೆ ಇದೇ ರೀತಿಯಲ್ಲಿ ಬಟ್ಟೆಗಳನ್ನು ಬಜಾರು ಬೀದಿಗಳಲ್ಲಿ ಇಂದಿಗೂ ಸಹ ಮಾರಾಟ ಮಾಡುತ್ತಿದ್ದಾರೆ. ಈಗ ಎಲ್ಲ ವರ್ಗದ ಜನರು ಯಾವ ಭೇದ-ಭಾವವಿಲ್ಲದೆ ಈ ಬಟ್ಟೆಗಳನ್ನು ಖರೀದಿಸುತ್ತಿದ್ದಾರೆ. ಅಂದರೆ ಕಾಲಕಾಲಕ್ಕೆ ತಕ್ಕಂತೆ ಮಾರುವಿಕೆ ಮತ್ತು ಕೊಳ್ಳುವಿಕೆಯು ಬದಲಾಗುತ್ತ ನಡೆದಿದೆ ಎಂಬುದು ತಿಳಿಯುತ್ತದೆ.

ಈ ಮೊದಲೆ ತಿಳಿಸಿದಂತೆ ತರಕಾರಿ ವಸ್ತುಗಳಿಗೆ ಪ್ರಾಚೀನ ಕಾಲದಲ್ಲಿ ಹೆಚ್ಚಿನ ಮಹತ್ವವಿರಲಿಲ್ಲ. ಆದರೆ ಇಂದು ಸಂತೆಗಳೆಂದರೆ ಹೆಚ್ಚಾಗಿ ತರಕಾರಿ ಮಾರುವ ಸ್ಥಳ ಎಂದು ಪರಿಗಣಿಸಲಾಗುತ್ತಿದೆ. ಪ್ರಾಚೀನ ಕಾಲದಲ್ಲಿ ಅನೇಕ ರೀತಿಯ ವ್ಯಾಪಾರ ವಹಿವಾಟು, ರಾಜ್ಯದ ಆದಾಯವೂ ಸಹ ಸಂತೆಯಿಂದಲೆ ಬರುತ್ತಿತ್ತು ಎಂಬುದಕ್ಕೆ ಅನೇಕ ದಾಖಲೆಗಳು ನಮಗೆ ದೊರೆತಿವೆ. ಪ್ರತಿ ಸಂತೆಯಿಂದಲೂ ರಾಜ್ಯಕ್ಕೆ ಸುಂಕದ ರೀತಿಯಲ್ಲಿ ಆದಾಯವೂ ಬರುತ್ತಿತ್ತು. ಆಗಿನ ಕಾಲದಲ್ಲಿ ಸಂತೆಗೆ ವಸ್ತುಗಳನ್ನು ಸರಬರಾಜು ಮಾಡುವ ಸಾಧನಗಳೆಂದರೆ ಎತ್ತಿನಬಂಡಿಗಳಾಗಿದ್ದವು. ಈ ಎತ್ತಿನ ಬಂಡಿಗಳಿಂದ ಎರಡು ರೀತಿಯ ಆದಾಯವು ರಾಜ್ಯಕ್ಕೆ ಬರುತ್ತಿತ್ತು. ಪ್ರತಿ ಎತ್ತಿನ ಬಂಡಿಗೆ ಇಂತಿಷ್ಟು ಕರ ಎಂದು ನಿಗದಿಪಡಿಸುತ್ತಿದ್ದರೆ, ಮತ್ತೊಂದು ಸಂತೆಗೆ ಬರುವಂತ ಎತ್ತುಗಳಿಂದ ಗೊಬ್ಬರ (ಸೆಗಣಿ) ದೊರೆಯುತ್ತಿತ್ತು. ಇದನ್ನು ಹರಾಜಿನ ಮೂಲಕ ಗುತ್ತಿಗೆಯನ್ನು

ಕೊಡುತ್ತಿದ್ದರು. ಗುತ್ತಿಗೆಯನ್ನು ಪಡೆದ ವ್ಯಕ್ತಿಯು ಹರಾಜಿನಲ್ಲಿ ನಿರ್ಧರಿಸಿದ ಮೊತ್ತವನ್ನು ರಾಜ್ಯದ ಬೊಕ್ಕಸಕ್ಕೆ ತುಂಬುತ್ತಿದ್ದನು. ಈ ಪದ್ಧತಿಯನ್ನು ಈಗಲೂ ಸಹ ಧನಗಳ ಸಂತೆಯಲ್ಲಿ ಕಾಣುತ್ತೇವೆ. ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿಯಲ್ಲಿ ಪ್ರತಿ ಗುರುವಾರದಂದು ಮತ್ತು ಹೂವಿನ ಹಡಗಲಿಯಲ್ಲಿ ಸೋಮವಾರದಂದು ನಡೆಯುವ ದನಗಳ ಸಂತೆಯಲ್ಲಿ ಈ ಪದ್ಧತಿ ರೂಢಿಯಲ್ಲಿದೆ.

ಅಷ್ಟೇ ಅಲ್ಲದೆ ಪ್ರತಿ ಅಂಗಡಿ ಅಥವಾ ಮಾರುವಂತ ಸ್ಥಳಕ್ಕೆ ಜಾಗತಿ ಎಂಬ ಸುಂಕವನ್ನು ವಿಧಿಸುತ್ತಿದ್ದರು ಎಂಬುದು ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ವಿಜಯನಗರ ಕಾಲದಲ್ಲಿ 'ಸಂತೆ ಪಸರಾಯಿ' ಎಂಬ ಈ ಸುಂಕವನ್ನು ಸಂತೆಯ ಅಂಗಡಿಗಳ ಮೇಲೆ ಹಾಕುತ್ತಿದ್ದರು. ಆಗಿನ ಕಾಲದಲ್ಲಿ ಸಂತೆಯಲ್ಲಿ ವ್ಯಾಪಾರ ವಹಿವಾಟುಗಳ ಮೇಲೆ ಸುಂಕ ಹೇರುವುದಕ್ಕಾಗಿಯೇ ಸುಂಕದ ಮನೆ, ಸುಂಕದ ಕಟ್ಟೆ ಮುಂತಾದವುಗಳನ್ನು ನಿರ್ಮಿಸುತ್ತಿದ್ದರು. ಜೆಮೆಲ್ಲಿ ಕರೇರಿ ಎಂಬ ವಿದೇಶಿ ಪ್ರವಾಸಿಯು ೧೬೯೫ರಲ್ಲಿ ಮೊಗಲ್ ಚಕ್ರವರ್ತಿ ಔರಂಗಜೇಬನ ಆಸ್ಥಾನಕ್ಕೆ ಬಂದಿದ್ದನು. ಇವನು ಹೇಳುವಂತೆ "ಸಾಂಬ್ರಾಣಿಯಲ್ಲಿಯೇ ಸೊಂದೆ ಕಿರಾಸಿ ಕರಾಜ ಇರುವುದು. ಊರಿಗೆ ಮಣ್ಣಿನ ಕೋಟೆಯಿದೆ. ಇಲ್ಲಿ ಭಾರಿ ಸಂತೆ ನಡೆಯುತ್ತದೆ. ಈ ಊರೊಂದರಿಂದಲೇ ರಾಜನಿಗೆ ಮೂರು ಲಕ್ಷ ರೂಪಾಯಿಗಳ ವರಮಾನವಿದೆ." ಇಲ್ಲಿ ಹೇಳಿದಂತೆ ಪ್ರತಿಯೊಂದು ಸಂತೆಯೂ ವರಮಾನ ಮೂಲವಾಗಿತ್ತು ಎಂಬುದನ್ನು ನಮಗೆ ತಿಳಿಸುತ್ತದೆ. ಅಲ್ಲದೆ ರಾಜ ಮಹಾರಾಜರು ಸಂತೆಯನ್ನು ಮತ್ತು ಅದರ ಮೇಲೆ ಸುಂಕವನ್ನು ದಾನ ಕೊಟ್ಟ ನಿದರ್ಶನಗಳು ದೊರೆತಿವೆ. ಬಳ್ಳಾರಿ ತಾಲೂಕು ಕುರುಗೋಡಿನಲ್ಲಿ ಸಿಕ್ಕಂತಹ ಗಂಗರ ಕಾಲದ ಶಾಸನವೊಂದು ದೊರೆತಿದ್ದು ಇದು ಸಿಂದು ವಂಶದ ರಾಜಮಲ್ಲನ ಕಾಲದ್ದಾಗಿದೆ. ಇವನು ಭೂಮಿಯನ್ನು ಮತ್ತು ಗ್ರಾಮದಲ್ಲಿ ಮಾರಾಟವಾಗಿರುವ ಮತ್ತು ಕೊಳ್ಳಲು ವಸ್ತುಗಳ ಮೇಲಿನ ಸುಂಕವನ್ನು ದಾನವಾಗಿ ನೀಡಿರುವುದಾಗಿ ತಿಳಿಸುತ್ತದೆ. ಅದೇ ರೀತಿಯಲ್ಲಿ ಕಲಚೂರಿಗಳ ಕಾಲದ ಶಾಸನದಲ್ಲಿ ಕಲಚೂರಿನ ದೊರೆ ಕುಂತಳ ದೇಶದ ಚಕ್ರವರ್ತಿ, ಸಾಮಂತ ನವಾಬರು ವ್ಯಾಪಾರದ ಮೇಲಿನ ಸುಂಕವನ್ನು ಮತ್ತು ಆದಾಯವನ್ನು ದಾನ ಮಾಡಿದ ಹಾಗೆ ಉಲ್ಲೇಖವಿದೆ. ಈ ರೀತಿಯಲ್ಲಿಯೇ ಸಂತೆಯ ಸ್ಥಳ ಮತ್ತು ಸುಂಕವನ್ನು ದಾನ ಮಾಡಿದ ಅಂಶಗಳು ಇಂದಿಗೂ ಸಹ ಕಾಣಬಹುದು. ಆಧುನಿಕ ಸಂತೆಗಳಿಗಾಗಿ ದೊಡ್ಡ ದೊಡ್ಡ ಶ್ರೀಮಂತರು ತಮ್ಮ ಸ್ಥಳಗಳನ್ನು ಬಿಟ್ಟು ಕೊಟ್ಟ ನಿದರ್ಶನಗಳು ಬಹಳಷ್ಟು ಇವೆ. ಸುಂಕದ ಪದ್ಧತಿಯೂ ಇಂದು ಇಲ್ಲವಾಗಿದ್ದು, ಅದರ ಜಾಗದಲ್ಲಿ ತೆರಿಗೆಯನ್ನು ಕಟ್ಟಲಾಗುತ್ತಿದೆ. ಆಧುನಿಕ ಸಂತೆಗಳಲ್ಲಿ ಜಾಗತಿ ಎಂಬ ಹಳೆಯ ಸುಂಕವನ್ನು ನವೀಕರಿಸಿ ಪುರಸಭೆಗೆ ತೆರಿಗೆ ರೂಪದಲ್ಲಿ ಕಟ್ಟಲಾಗುತ್ತಿದೆ.

ಈ ಮೇಲಿನ ಎಲ್ಲ ಅಂಶಗಳಿಂದ ತಿಳಿದುಬರುವುದೇನೆಂದರೆ ಪ್ರಾಚೀನ ಕಾಲದ ಸಂತೆಗಳಿಗೆ ಮತ್ತು ಆಧುನಿಕ ಗ್ರಾಮಾಂತರ ಪ್ರದೇಶದ ಸಂತೆಗಳಿಗೆ ವ್ಯತ್ಯಾಸಗಳು ಅಷ್ಟಾಗಿ ಕಂಡುಬರುವುದಿಲ್ಲ. ಪ್ರಾಚೀನ ಕಾಲದಲ್ಲಿ ಇದ್ದಂತೆಯೇ ಇಂದು ಸಹ ಅವುಗಳು ಕಾರ್ಯವೈಖರಿ ಇದೆ. ವ್ಯಾಪಾರ-ವಹಿವಾಟು, ಮನರಂಜನೆ, ಭಿಕ್ಷಾಟನೆ, ಧಾರ್ಮಿಕತೆ ಮುಂತಾದ ಎಲ್ಲ ಅಂಶಗಳು ಅಂದು ಇದ್ದಂತೆಯೇ ಇಂದಿಗೂ ಇವೆ.

## ೨.೪ ಸಂತೆಯ ಆರ್ಥಿಕ ಚಟುವಟಿಕೆಗಳು ಮತ್ತು ಬುಡಕಟ್ಟುಗಳ ಹಿತಾಸಕ್ತಿಗಳು

ಬುಡಕಟ್ಟುಗಳು ಬಹಳ ಹಿಂದಿನಿಂದಲೂ ಎಲ್ಲಾ ವಿಧದಲ್ಲೂ ನ್ಯೂನತೆಯನ್ನು ಅನುಭವಿಸುತ್ತಾ ಬಂದಿವೆ. ಅನಾದಿಕಾಲದಿಂದಲೂ ಅವು ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಉಳಿಸಿಕೊಂಡಿದ್ದರ ಪರಿಣಾಮವಾಗಿ ಸಮಾಜದ ಇತರ ವರ್ಗಗಳ ಶೋಷಣೆಗೆ ಗುರಿಯಾಗಿ ಬಹು ಹಿಂದುಳಿಯಬೇಕಾಯಿತು. ಅನೇಕ ಬುಡಕಟ್ಟುಗಳು ತಮ್ಮದೇ ಆದ ಮೂಲವೃತ್ತಿಯನ್ನು ಹೊಂದಿ, ಕಾಡಲ್ಲಿ ನೆಮ್ಮದಿಯಿಂದ ಬದುಕುತ್ತಿದ್ದವು. ಆದರೆ ಮುಖ್ಯವಾಹಿನಿಯಲ್ಲಿ ಔದ್ಯೋಗಿಕತೆಯ ಪ್ರವೇಶವಾದ ಮೇಲೂ ಬಹುಕಾಲದವರೆಗೆ ಇವರನ್ನು ಜೀತದಾಳುಗಳನ್ನಾಗಿ ನೇಮಿಸಿಕೊಂಡು ದುಡಿಸಿಕೊಳ್ಳಲಾಯಿತು. ತೀವ್ರಗತಿಯ ಆಧುನೀಕರಣ ಮತ್ತು ಕೈಗಾರೀಕರಣ ದೇಶದಲ್ಲಿ ಅರಣ್ಯ ಪ್ರದೇಶವನ್ನು ಕಿರಿದುಗೊಳಿಸಿತು. ಇದು ಬುಡಕಟ್ಟು ಜನರ ಜೀವನೋಪಾಯಕ್ಕೆ ಪ್ರತಿಕೂಲವಾಯಿತು. ಪುನರ್‌ವಸತಿ ಮತ್ತು ಪುನರ್ ಬಂಡವಾಳ ಯೋಜನೆಗಳು ಅವರನ್ನು ಕಾಡಿನಿಂದ ಬಯಲಿಗೆ ಸ್ಥಳಾಂತರಗೊಳಿಸಿ ಅವರ ಪ್ರತ್ಯೇಕತೆಯನ್ನು ಭಗ್ನಗೊಳಿಸಿದವು. ಕರ್ನಾಟಕದ ಬುಡಕಟ್ಟು ಜನರ ಸಮಸ್ಯೆಗಳು ಬೇಗೂರು ಅರಣ್ಯ ಕ್ಷೇತ್ರದ ಸಂಪಾದನೆಗಾಗಿ ಮದ್ರಾಸ್ ಪ್ರಾಂತ್ಯ ೧೮೬೪ರಲ್ಲಿ ಬುಡಕಟ್ಟು ಜನರನ್ನು ನೇಮಿಸಿಕೊಂಡಾಗಲೇ ಆರಂಭವಾಯಿತು. ಇದು ಅರಣ್ಯ ಸಂಪನ್ಮೂಲಗಳ ವ್ಯಾಪಕ ಶೋಷಣೆಯ ಆರಂಭವೇ ಆಗಿತ್ತು.[೧೫]

ಬುಡಕಟ್ಟುಗಳು ತಮ್ಮದೇ ಆದ ಜೀವನ ವಿಧಾನವನ್ನು ರೂಪಿಸಿಕೊಂಡು ವಿಶಿಷ್ಟವಾದ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದವರು. ಇತರ ಮಾನವ ಸಮುದಾಯಗಳಷ್ಟೇ ಅಥವಾ ಅದಕ್ಕೂ ಮಿಗಿಲಾಗಿ ಸ್ವಾಭಿಮಾನ ಮತ್ತು ಆತ್ಮಶಕ್ತಿಯನ್ನು ಗಳಿಸಿಕೊಂಡವರು. ಈ ಬುಡಕಟ್ಟು ಸಮೂಹಗಳು ಬದಲಾದ ಪರಿಸ್ಥಿತಿಯಲ್ಲಿ ಪರಂಪರಾಗತ ಕಸುಬಿನೊಡನೆ ಬೇರೆ ಹವ್ಯಾಸಗಳಲ್ಲೂ ಆಸಕ್ತಿ ತೋರುತ್ತಿರುವುದನ್ನು ಕಾಣಬಹುದು. ಸರದಿ ಕೃಷಿ, ಬೇಟೆ, ಜೇನು ಸಾಕಾಣಿಕೆ, ಬುಟ್ಟಿ ಹೆಣೆದು ಮಾರುವುದು, ಬಿದಿರು ವಸ್ತು ತಯಾರಿಸಿ ಮಾರಾಟ, ಕಮ್ಮಾರಿಕೆ, ಬಾರಿಗೆ ತಯಾರಿಸುವುದು, ಗಿಡಮೂಲಿಕೆಗಳ ಮಾರಾಟ ಇವೇ ಮುಂತಾದ ವೃತ್ತಿಗಳಲ್ಲಿ ತೊಡಗಿದ್ದಾರೆ. ಬಹುಪಾಲು ಬುಡಕಟ್ಟು ಜನರು ವ್ಯವಸಾಯ ವೃತ್ತಿಗಳಲ್ಲಿ ಅವಲಂಬಿಸಿರುವುದು ಮತ್ತು ಕೃಷಿ ಕಾರ್ಮಿಕರಾಗಿರುವುದು ಕಂಡುಬರುತ್ತದೆ. ಬದಲಾದ ಸಾಮಾಜಿಕ, ಆರ್ಥಿಕ ಪರಿಸರ ಹಾಗೂ ಕೈಗಾರೀಕರಣದ ಪರಿಣಾಮದಿಂದಾಗಿ ಅನೇಕರು ತಮ್ಮ ಮೂಲಸ್ಥಾನಗಳನ್ನು ತೊರೆದು ಬುಡಕಟ್ಟು ಕಸುಬುಗಳನ್ನು ಕೈಬಿಟ್ಟಿದ್ದಾರೆ. ಅಂತೆಯೇ ಅವರ ಆರ್ಥಿಕ ಜೀವನವೂ ಬದಲಾಗಿದೆ. ತನ್ನ ಸ್ವಂತಿಕೆಯ ವೃತ್ತಿಯಲ್ಲಿ ತೊಡಗಿದ್ದ ಬುಡಕಟ್ಟು ಈ ಮೇಲೆ ತಿಳಿಸಿದ ಕಾರಣ ಮಾತ್ರವಲ್ಲದೇ ಇನ್ನು ಅನೇಕ ಕಾರಣಗಳಿಂದಾಗಿ ತನ್ನ ವೃತ್ತಿಯನ್ನು ಬಿಟ್ಟು ಪರ್ಯಾಯ ವೃತ್ತಿಯಲ್ಲಿ ತೊಡಗಿಸಿಕೊಂಡಿರುವುದು ಕಾಣುತ್ತೇವೆ. ಈ ಪರ್ಯಾಯ ವೃತ್ತಿಗಳು ಸಹ ಬುಡಕಟ್ಟುಗಳ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಲಿಲ್ಲ. ಕಾರಣ ಮುಖ್ಯವಾಹಿನಿಯ ಜನರು ಇವರನ್ನು ಅತ್ಯಂತ ನಿಕೃಷ್ಟದಿಂದ ನೋಡಿಕೊಳ್ಳುತ್ತದೆ. ಮಾತ್ರವಲ್ಲದೇ ಇವರ ಕಸುಬುಗಳಿಗೆ ಯಾವುದೇ ಮರ್ಯಾದೆಯ ಬೆಲೆ ಕೊಡುತ್ತಿಲ್ಲ. ಅಲ್ಲದೇ ಇವರ ಕಸುಬುಗಳಿಗೆ ದೊಡ್ಡ

ದೊಡ್ಡ ಕೈಗಾರಿಕೆಗಳು ಪೈಪೋಟಿಯನ್ನು ಒಡ್ಡುತ್ತಿವೆ. ಉದಾಹರಣೆಗೆ ಮೇದ ಬುಡಕಟ್ಟು ತಯಾರಿಸುವ ಬಿದಿರಿನಿಂದ ತಯಾರಿಸಿದ ವಸ್ತುಗಳಿಗೆ ಪ್ಲಾಸ್ಟಿಕ್ ಸಾಮಗ್ರಿಗಳು ಪೈಪೋಟಿಯನ್ನು ಒಡ್ಡುತ್ತವೆ. ಈ ಪೈಪೋಟಿಯನ್ನು ಭರಿಸದೇ, ದೊಡ್ಡ ರೀತಿಯ ಮಾರುಕಟ್ಟೆಯ ವ್ಯಾಪಾರ ಮಾಡಲಾಗದೇ, ಮಾರುಕಟ್ಟೆಯ ಒಂದು ರೂಪವಾದ ಸಂತೆಯಲ್ಲಿ ಅಗ್ಗದ ಬೆಲೆಗೆ ತಮ್ಮ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಇದರಿಂದ ಮುಖ್ಯವಾಹಿನಿಗೆ ಲಾಭವಾಗುತ್ತದೆ ವಿನಃ ಬುಡಕಟ್ಟು ಜನರಿಗೆ ಅಲ್ಲ.

ಆಧುನಿಕ ಸಂದರ್ಭದಲ್ಲಿ ಮುಖ್ಯವಾಹಿನಿಯು ಅಗ್ಗದ ಬೆಲೆಗೆ ವಸ್ತುಗಳನ್ನು ಪಡೆದು ಅಧಿಕ ತೃಪ್ತಿಯನ್ನು ಹೊಂದಲು ಇಷ್ಟಪಡುತ್ತದೆ. ಜಾಗತೀಕರಣದ ಹಿನ್ನೆಲೆಯಲ್ಲಿ ರೂಪುಗೊಂಡ ಬೃಹತ್ ಕೈಗಾರಿಕೆಗಳು ದೊಡ್ಡ ರೀತಿಯ ಮಾರುಕಟ್ಟೆಯನ್ನೇ ಸೃಷ್ಟಿಸಿವೆ. ಈ ಮಾರುಕಟ್ಟೆಗಳಲ್ಲಿ ಅಗ್ಗದ ಬೆಲೆಗೆ ದೊರೆಯುವ ಮತ್ತು ಉತ್ತಮ ಬಾಳಿಕೆ ಬರುವ ವಸ್ತುಗಳು ಲಭ್ಯವಿರುತ್ತವೆ. ಇಂಥ ಒಂದು ಮಾರುಕಟ್ಟೆಯಲ್ಲಿ ಬುಡಕಟ್ಟುಗಳ ವಸ್ತುಗಳು ದೊರೆಯುವುದು ಸಾಧ್ಯವಿಲ್ಲವಾಗಿದೆ. ದೊರೆತರೂ ಅದು ಅಲ್ಪಪ್ರಮಾಣದಲ್ಲಿ ಇರುತ್ತದೆ. ಬುಡಕಟ್ಟು ವಸ್ತುಗಳು ಅಧಿಕ ಶ್ರಮವನ್ನು ಮತ್ತು ಅಲ್ಪಕಾಲ ಬಾಳಿಕೆ ಬರುವಂತಾಗಿರುತ್ತವೆ. ಆದ್ದರಿಂದ ಈ ವಸ್ತುಗಳು ಕೈಗಾರಿಕೆಗಳಲ್ಲಿ ತಯಾರಿಸಿದ ವಸ್ತುಗಳಿಗೆ ಪೈಪೋಟಿಯನ್ನು ಒಡ್ಡದೇ ಮಾರುಕಟ್ಟೆಯ ಒಂದು ರೂಪವಾದ, ವ್ಯವಸ್ಥಿತವಲ್ಲದ ಸಂತೆಗಳಲ್ಲಿ ತಮ್ಮ ವ್ಯಾಪಾರವನ್ನು ಮಾಡುತ್ತಾರೆ. ಈ ವ್ಯವಸ್ಥೆಯನ್ನು ಮನಗಂಡ ಮುಖ್ಯವಾಹಿನಿಯು ಚೌಕಾಸಿ ಮಾಡುತ್ತಾ ಕಡಿಮೆ ಬೆಲೆಗೆ ವಸ್ತುಗಳನ್ನು ಮಾರುವಂತೆ ಮಾಡುತ್ತಾರೆ. ಆದ್ದರಿಂದ ಬುಡಕಟ್ಟು ಜನರು ತಮ್ಮ ಜೀವನ ನಿರ್ವಹಣೆಗೆ ಅಗ್ಗದ ಬೆಲೆಗೆ ತಮ್ಮ ವಸ್ತುಗಳನ್ನು ಮಾರಿಯೂ ಬಿಡುತ್ತಾರೆ. ಈ ಎಲ್ಲಾ ವ್ಯವಸ್ಥೆಯನ್ನು ಮುಖ್ಯವಾಹಿನಿಯೇ ನಿರ್ಮಿಸುತ್ತದೆ ಎಂದು ಹೇಳಿದರೆ ತಪ್ಪಾಗಲಾರದು ಹಾಗೂ ಈ ವ್ಯವಸ್ಥೆಯಿಂದ ಮುಖ್ಯವಾಹಿನಿಗೆ ಲಾಭವಾಗುವುದರಿಂದ ಈ ಮೇಲೆ ತಿಳಿಸಿದಂತೆ ಬುಡಕಟ್ಟುಗಳ ಪರ್ಯಾಯ ವೃತ್ತಿಯ ಪೂರಕವಾಗಿ ಕೆಲಸ ಮಾಡುತ್ತದೆ. ಆದರೆ ಬುಡಕಟ್ಟುಗಳಿಗೆ ಕಾಡಿನಲ್ಲಿ ಸುಖ ಜೀವನ ನಡೆಸುತ್ತಿದ್ದು, ಇಂದು ತನ್ನದಲ್ಲದ ತಪ್ಪಿನಿಂದ, ಕಾಡಿನಿಂದ ನಾಡಿಗೆ ಬಂದು, ತನ್ನ ವೃತ್ತಿಯಲ್ಲದ ಪರ್ಯಾಯ ವೃತ್ತಿಯಲ್ಲಿ ತೊಡಗಿ ಅಲ್ಪ ಲಾಭದಲ್ಲಿ ನಿಕೃಷ್ಟ ರೀತಿಯ ಜೀವನವನ್ನು ಸಾಗಿಸುತ್ತಿದ್ದಾರೆ. ಇದು ಬುಡಕಟ್ಟು ಆಸಕ್ತಿಗೆ ವಿರುದ್ಧವಾಗಿದೆ ಎಂದು ಹೇಳಬಹುದು.

ಈ ಮೇಲೆ ತಿಳಿಸಿದ ಬುಡಕಟ್ಟುಗಳ ಆಸಕ್ತಿಗೆ ವಿರುದ್ಧ ಮತ್ತು ಮುಖ್ಯವಾಹನಿ ಜನರಿಗೆ ಇವರ ವ್ಯವಹಾರ ಪೂರಕವಾಗಿ ಸಂತೆಯಲ್ಲಿ ಯಾವ ರೀತಿ ಕಂಡುಬರುತ್ತದೆ ಎಂಬುದನ್ನು ಬಿಡಿ ಬಿಡಿಯಾಗಿ ಈ ಕೆಳಗಿನಂತೆ ತಿಳಿಯಬಹುದು.

ಅ. ಇತರ ಸಮುದಾಯಗಳು ಬುಡಕಟ್ಟು ಸಮುದಾಯಗಳ ಆಸಕ್ತಿಗೆ ವಿರುದ್ಧವಾಗಿ ವ್ಯವಹರಿಸುವಿಕೆ.

ಬ. ಮುಖ್ಯವಾಹಿನಿಯಲ್ಲಿರುವ ಸಮುದಾಯಗಳ ಆಸಕ್ತಿಗೆ ಪೂರಕವಾಗಿ ಕೆಲಸ ನಿರ್ವಹಿಸುವಿಕೆ ಅಥವಾ ವ್ಯವಹರಿಸುವಿಕೆ.

**ಅ. ಇತರ ಸಮುದಾಯಗಳು ಬುಡಕಟ್ಟುಗಳ ಆಸಕ್ತಿಗೆ ವಿರುದ್ಧವಾಗಿ ವ್ಯವಹರಿಸುವಿಕೆ**

೧. ಆರ್ಥಿಕವಾಗಿ (Economicaly)

೨. ಸಾಮಾಜಿಕವಾಗಿ (Socialy)

೩. ಶೈಕ್ಷಣಿಕವಾಗಿ (Educationaly)

೪. ಮನೋವೈಜ್ಞಾನಿಕವಾಗಿ (Psycologicaly)

**೧. ಆರ್ಥಿಕವಾಗಿ (Economicaly)**

ಸಾಮಾನ್ಯವಾಗಿ ಬುಡಕಟ್ಟು ಸಮುದಾಯಗಳಲ್ಲಿನ ಜನಸಾಮಾನ್ಯರು ರೈತರಾಗಿದ್ದು, ಅವರು ಹೆಚ್ಚಾಗಿ ತಾವು ಬೆಳೆದ ವಸ್ತುಗಳನ್ನು ನೇರವಾಗಿ ಸಂತೆಗಳಿಗೆ ಅಥವಾ ಮಾರುಕಟ್ಟೆಗಳಿಗೆ ಹೋಗಿ ಮಾರುವುದಿಲ್ಲ. ಅವರು ವ್ಯಾಪಾರಗಾರರಿಗೆ ತಾವು ಬೆಳೆದ ದವಸಧಾನ್ಯಗಳನ್ನು ಮಾರುತ್ತಾರೆ. ಆದರೆ, ವ್ಯವಹರಿಸುವಾಗ ಇರುವ ವ್ಯವಸ್ಥೆಯನ್ನು ಈ ಕೆಳಕಂಡಂತೆ ನಾವು ಕಾಣಬಹುದು.




ಈ ವ್ಯವಹಾರ ಚಟುವಟಿಕೆಯನ್ನು ನಾವು ಸಂತೆಯ ಹಿನ್ನೆಲೆಯಲ್ಲಿ ಕಾಣಬಹುದು. ಈ ಸಂತೆ ಅಥವಾ ಮಾರುಕಟ್ಟೆಯಲ್ಲಿ ಇತರ ಸಮುದಾಯಗಳು ಬುಡಕಟ್ಟುಗಳ ಆಸಕ್ತಿಗೆ ವಿರುದ್ಧವಾಗಿರುವ ಸ್ಥಿತಿಯನ್ನು ಅತ್ಯಂತ ಸೂಕ್ಷ್ಮವಾಗಿ ನೋಡಿದಾಗ ಅಥವಾ ಅಧ್ಯಯನ ಮಾಡಿದಾಗ ಸತ್ಯಸಂಗತಿ ಕಂಡುಬರುವುದಂತೂ ಸ್ಪಷ್ಟ.

ರೈತ, ದಲ್ಲಾಳಿ, ವಿತರಣೆಗಾರ, ದಾಸ್ತಾನುಗಾರ, ಸಗಟು ವ್ಯಾಪಾರಗಾರ, ಚಿಲ್ಲರೆ ವ್ಯಾಪಾರಗಾರರು ಮತ್ತು ಕೊಂಡುಕೊಳ್ಳುವ ಜನ - ಈ ಎಲ್ಲ ವ್ಯವಸ್ಥೆಯಲ್ಲಿ ಮೊದಲ ಸ್ಥಾನದಲ್ಲಿರುವವರನ್ನು ಗಮನಿಸಿದಾಗ, ಅವರಲ್ಲಿ ಹೆಚ್ಚಾಗಿ ಬುಡಕಟ್ಟು, ಹಿಂದುಳಿದ ಮತ್ತು ಆರ್ಥಿಕವಾಗಿ ಹಿಂದುಳಿದ ಜನಸಮುದಾಯವರೆ ಹೆಚ್ಚು.

ಆದರೆ, ಅವರು ಆರ್ಥಿಕವಾಗಿ ಹಿಂದುಳಿದಿದ್ದು, ನೇರವಾಗಿ ಮಾರುಕಟ್ಟೆ ಅಥವಾ ಸಂತೆಯಲ್ಲಿ ವ್ಯವಹರಿಸದೆ, ದಲ್ಲಾಳಿಗಳ, ದಾಸ್ತಾನುಗಾರ, ಸಗಟು ವ್ಯಾಪಾರಗಾರ ಕಪಿಮುಷ್ಠಿಯಲ್ಲಿ ಸಿಲುಕಿ ಶೋಷಣೆಗೆ ಒಳಪಡುತ್ತಿರುತ್ತಾರೆ. ರೈತಾಪಿವರ್ಗ, ಬುಡುಕಟ್ಟುವರ್ಗ, ಹಿಂದುಳಿದವರ್ಗಗಳಲ್ಲಿ ಆರ್ಥಿಕ ಸುಸ್ಥಿತಿ ಇಲ್ಲದಿರುದ್ದರ ಪರಿಣಾಮವಾಗಿ ಆರ್ಥಿಕವಾಗಿ ಸಬಲವಾಗಿರುವ ಇತರ ಮೇಲ್ವರ್ಗದ, ಮುಂದುವರಿದ ಸಮುದಾಯಗಳು ತಮ್ಮ ವ್ಯವಹಾರದ ಗುಟ್ಟು ಅಥವಾ ಚಾಣಾಕ್ಷತೆಯನ್ನು ಬಳಸಿ ಆರ್ಥಿಕವಾಗಿ ಮುಂದುವರಿಯುತ್ತಿರುವುದು ಸಾಮಾನ್ಯ ವಿಚಾರ.

ಸಂತೆಗಳಲ್ಲಿ ಇತರ ಸಮುದಾಯಗಳು ತಮ್ಮ ಆರ್ಥಿಕ ಬಲದಿಂದ ಸ್ವಂತ ಮಳಿಗೆ, ವ್ಯವಸ್ಥಿತ ವ್ಯವಹಾರಕ್ಕೆ ಬೇಕಾಗುವ ಅನುಕೂಲತೆ, ಸಂಪರ್ಕ ಸಂವಹನಕ್ಕೆ ಬೇಕಾಗುವ ವ್ಯವಸ್ಥೆ, ಬೆಲೆ ಅಥವಾ ದರಗಳ ಏರಿಕೆ ಇಳಿಕೆಯ ಸಮಯದಲ್ಲಿ ಸಮಪ್ರಮಾಣ ಕಾಯ್ದುಕೊಳ್ಳಲು ಆರ್ಥಿಕ ಸುಸ್ಥಿತಿ ಇರುವ ಇವೆಲ್ಲದರ ಮಧ್ಯೆ ಏನೂ ಅನುಕೂಲತೆಯನ್ನು ಹೊಂದಿರದ ಬುಡಕಟ್ಟು, ಹಿಂದುಳಿದ, ರೈತಾಪಿವರ್ಗಕ್ಕೆ ಸೇರಿದ ಸಮುದಾಯದ ಜನಸಾಮಾನ್ಯರು, ನೇರವಾಗಿ ಸಂತೆ ಅಥವಾ ಮಾರುಕಟ್ಟೆಯಲ್ಲಿ ಇತರ ಸಮುದಾಯಗಳಿಂದ ತಮ್ಮ ಆಸಕ್ತಿಗಳಿಗೆ ಧಕ್ಕೆಯಾಗುತ್ತಿರುವುದನ್ನು ಕಂಡು ಸುಮ್ಮನಿರುವಂತಿದೆ. ಆರ್ಥಿಕವಾಗಿ ಸುಸ್ಥಿತಿಯಿರುವ ಅನೇಕ ಬುಡಕಟ್ಟು ಸಮುದಾಯಗಳು ಸಂತೆಯಲ್ಲಿ ಸಮರ್ಥವಾಗಿ ಕಾರ್ಯ ನಿರ್ವಹಿಸುತ್ತಿರುವ ಅಂಶವನ್ನು ಗಮನಿಸಿದಾಗ, ಅವರು ಇತರ ಸಮುದಾಯಗಳ ಸಮಾನ ಸ್ಥಾನದಲ್ಲಿರುವುದು ಕಂಡುಬಂದು, ಅವರ ಹಿತಾಸಕ್ತಿಗೆ ಅಷ್ಟೊಂದು ಪ್ರಮಾಣದಲ್ಲಿ ಯಾವುದೇ ಧಕ್ಕೆಯಾಗುತ್ತಿಲ್ಲದಿರುವುದು ಕಂಡುಬರುತ್ತದೆ.

ಸ್ತರವಿನ್ಯಾಸದ (Stratification) ತಳಹದಿಯಲ್ಲಿ ಬುಡಕಟ್ಟು ಸಮುದಾಯಗಳು ಮತ್ತು ಇತರ ಸಮುದಾಯಗಳಿರುವುದನ್ನು ಇಂದಿನ ಸಂತೆಯಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾಗಿದ್ದು, ಒಟ್ಟಾರೆ, ಅಭಿಪ್ರಾಯದಲ್ಲಿ ಹೇಳುವುದಾದರೆ, ಇತರ ಸಮುದಾಯಗಳು ಬುಡಕಟ್ಟು ಸಮುದಾಯಗಳ ಹಿತಾಸಕ್ತಿಗೆ ವಿರುದ್ಧವಾಗಿರುವ ಪರಿಯನ್ನು ಸೂಕ್ಷ್ಮವಾಗಿ ಕಾಣಬಹುದಾಗಿದೆ.

### ೨. ಸಾಮಾಜಿಕವಾಗಿ (Socialy)

ಬುಡಕಟ್ಟು ಸಮುದಾಯಗಳು ಎಂದಾಕ್ಷಣ ಹಿಂದುಳಿದವರು ಎಂಬ ಪರಿಕಲ್ಪನೆ ಬರುವುದು ಸಹಜ. ಅದರ ಜೊತೆ ಜೊತೆಯಲ್ಲೇ ಅವರು ಆರ್ಥಿಕವಾಗಿ ಹಿಂದುಳಿದವರಾಗಿದ್ದು, ಸಾಮಾಜಿಕ ಸ್ಥಾನಮಾನದಲ್ಲಿ ಮತ್ತು ಸಾಮಾಜಿಕ ಅಂತಸ್ತಿನಲ್ಲಿ ಹಿಂದುಳಿದಿರುವಂತೆ ಮಾಡಿರುವ ಸಾಮಾಜಿಕ ವ್ಯವಸ್ಥೆ ಭಾರತೀಯ ಸಂಸ್ಕೃತಿಯಲ್ಲಿರುವ ಒಂದು ಮರೆಮಾಚದ ಅಂಶ. ಅದೇನೇ ಇದ್ದರೂ, ಸಂತೆಯಲ್ಲಿ ಬುಡಕಟ್ಟು ಸಮುದಾಯಗಳು ಮತ್ತು ಇತರ ಸಮುದಾಯಗಳನ್ನು ಅವಲೋಕಿಸಿದಾಗ ಅವರೆಡರ ಸಾಮಾಜಿಕ ಅಂತಸ್ತಿನಲ್ಲೂ ವ್ಯತ್ಯಾಸವನ್ನು ಮನಗಾಣಬಹುದು. ಆರ್ಥಿಕವಾಗಿ ಈಗಾಗಲೇ ಅವರ ಹಿತಾಸಕ್ತಿಗಳಲ್ಲಿ ವ್ಯತ್ಯಾಸಗಳನ್ನು ಕಾಣಬಹುದಾಗಿದ್ದು, ಸಾಮಾಜಿಕವಾಗಿಯೂ ಸಹ ಕಾಣಬರುತ್ತಿರುವುದನ್ನು ನೋಡಿದಾಗ ಸಾಮಾಜಿಕ ನೆಲೆಗಟ್ಟಿನಡಿಯಲ್ಲಿ ಇತರ ಸಮುದಾಯಗಳು ಬುಡಕಟ್ಟುಗಳ ಆಸಕ್ತಿಗೆ ವಿರುದ್ಧವಾಗಿ ವ್ಯವಹರಿಸುವ ಚಟುವಟಿಕೆಗಳಿರುವುದನ್ನು ಸಂತೆಯಲ್ಲಿ ಕಂಡುಕೊಳ್ಳಬಹುದು.

ಸಾಮಾಜಿಕ ಸ್ಥಾನಮಾನದಲ್ಲಿ ಏಕತೆಯನ್ನು ಹೊಂದಿರುವ ಬುಡಕಟ್ಟು ಸಮುದಾಯಗಳಿಂದ ಹೊರತಾದ ಇತರ ಸಮುದಾಯಗಳು ಏಕತೆಯನ್ನು, ಒಗ್ಗಟ್ಟನ್ನು ಹೊಂದಿದ್ದು, ವ್ಯವಹರಿಸುವಲ್ಲಿ ಪರಸ್ಪರ ಸಹಕಾರಯುಕ್ತ ನೀತಿಯನ್ನು ಅನುಸರಿಸಿ ಬಂಡವಾಳ ವ್ಯವಹರಿಸುವುದರಲ್ಲಾಗಲಿ, ಆದಾಯವನ್ನು ಹೊಂದುವುದರಲ್ಲಾಗಲಿ ಏಕಸ್ವಾಮ್ಯತೆಯನ್ನು ಹೊಂದುತ್ತಿರುವುದು ಕಂಡುಬರುತ್ತದೆ. ಇದಕ್ಕೆ, ಈ ವ್ಯವಹಾರಕ್ಕೆ ಮುಖ್ಯವಾಗಿ ಮೂಲಭೂತ ಪ್ರೇರಣೆ ಎಂದರೆ ಅವರ ಸಾಮಾಜಿಕ ಸ್ಥಾನ-ಸ್ಥಿತಿಯ ಬಾಂಧವ್ಯವೇ ಮುಖ್ಯ ಕಾರಣ. ಆದರೆ ಇದು ಇತರ ಬುಡಕಟ್ಟು ಸಮುದಾಯದ ಆಸಕ್ತಿಗೆ ವಿರುದ್ಧವಾಗುವುದಿಲ್ಲವಾದರೂ, ನಾವೆಲ್ಲ ಒಂದು ಎಂಬ ಭಾವನೆ ಅವರಲ್ಲಿದ್ದಾಗ, ಇತರರನ್ನೂ ಮುಂದುವರಿಯಲಿಕ್ಕೆ ಬಿಡದಿದ್ದಾಗ, ಇನ್ನುಳಿದವರ ಹಿತಾಸಕ್ತಿಗೆ ಧಕ್ಕೆ ಅಥವಾ ವಿರುದ್ಧವಾಗಿರುವ ಅಂಶ ಕಂಡುಬರುತ್ತದೆ. ಈ ಸಾಮಾಜಿಕ ಏಕತೆ ವ್ಯಾಪಾರಸ್ಥರಲ್ಲಿ ಅಷ್ಟೇ ಇರದೇ ಗ್ರಾಹಕರಲ್ಲಿಯೂ ಹೆಚ್ಚಾಗಿ ಜಾಗೃತವಾಗಿರುವುದರಿಂದ ತಮ್ಮ ತಮ್ಮ ಸಮುದಾಯದ ಸದಸ್ಯ ವ್ಯಾಪಾರಗಾರರಲ್ಲಿ ವ್ಯವಹರಿಸುವಿಕೆಯಿಂದ ಬುಡಕಟ್ಟು ಸಮುದಾಯದ ಸದಸ್ಯರ ಸಂಖ್ಯೆ ಕಡಿಮೆಯಿದ್ದಾಗ, ವ್ಯವಹಾರದಲ್ಲಿ ವ್ಯತ್ಯಾಸವಾಗುತ್ತದೆ. ಆದರೆ, ಈ ಅಂಶ ಆಯಾ ಪ್ರದೇಶದ ಆಯಾ ಸಮುದಾಯದ ಜನಸಂಖ್ಯೆ ನೆಲೆ ನಿಂತಿರುವಿಕೆಯ ಆಧಾರದ ಮೇಲೆ ವಿಭಿನ್ನ ಪರಿಣಾಮಗಳನ್ನು ನೀಡುತ್ತದೆ.

**೩. ಶೈಕ್ಷಣಿಕವಾಗಿ (Educationaly)**

ಸಂತೆಯಲ್ಲಿ ವ್ಯವಹರಿಸುವ ಬುಡಕಟ್ಟುಗಳ ಸ್ಥಿತಿ ಅಥವಾ ಬಗೆಯನ್ನು ಅವಲೋಕಿಸಿದಾಗ ಮುಖ್ಯವಾಗಿ ಶೈಕ್ಷಣಿಕ ಅಂಶವು ಸಹ ಅಲ್ಲಿ ವಿಶೇಷ ಸ್ಥಾನವನ್ನು ಪಡೆಯುತ್ತದೆ. ಬುಡಕಟ್ಟು ಸಮುದಾಯಗಳು ಇತರ ಸಮುದಾಯಗಳಿಂದ ತಮ್ಮ ಆಸಕ್ತಿಗೆ ಧಕ್ಕೆ ಉಂಟುಮಾಡಿಕೊಳ್ಳುವುದಕ್ಕೆ ಪ್ರಮುಖ ಕಾರಣವೇನೆಂದರೆ, ಶೈಕ್ಷಣಿಕವಾಗಿ ಹಿಂದುಳಿದಿರುವುದು. ಈ ಶೈಕ್ಷಣಿಕ ಅಂಶವು ಅವರ ಹಿತಾಸಕ್ತಿಗೆ ಪೂರಕವಾಗಿರಬೇಕಾದರೆ, ಅವರು ಶೈಕ್ಷಣಿಕವಾಗಿ ಮುಂದುವರೆದಾಗ ಮಾತ್ರ ಸಾಧ್ಯ.

ಮುಖ್ಯವಾಹಿನಿಯಲ್ಲಿರುವ ಸಮುದಾಯಗಳು ವ್ಯವಹರಿಸುವಿಕೆಯಲ್ಲಿ ಪ್ರಾವಿಣ್ಯತೆಯನ್ನು ಪಡೆದಿರುವ ಪ್ರಮುಖವಾಗಿ ಶೈಕ್ಷಣಿಕ ಸ್ಥಾನವನ್ನು ಅವರು ಹೊಂದಿರುವಿಕೆ. ಆದರೆ, ಶೈಕ್ಷಣಿಕವಾಗಿ ಅಷ್ಟೊಂದು ಸ್ಥಾನ ಹೊಂದಿರದ, ಶಿಕ್ಷಣವನ್ನು ಪಡೆದಿರುವ ಬುಡಕಟ್ಟು ಸಮುದಾಯಗಳು ಸಬಲವಾಗಿ ಇತರ ಸಮುದಾಯಗಳ ವ್ಯವಹರಿಸುವಿಕೆಯೊಂದಿಗೆ ಪೈಪೋಟಿ ನಡೆಸಲಾರವು. ಶಿಕ್ಷಣದಿಂದ ವಂಚಿತರಾದ ಬುಡಕಟ್ಟು ಜನಸಮುದಾಯ ವ್ಯವಹರಿಸುವುದರಲ್ಲಿ ಎಡವಿ, ಆದಾಯವನ್ನು ಅಲ್ಪಪ್ರಮಾಣದಲ್ಲಿ ಪಡೆಯುವುದು ಕಂಡುಬರುತ್ತಿದ್ದು, ಇತರ ಸಮುದಾಯಗಳು ಹೆಚ್ಚಿನ ಆದಾಯ ಹೊಂದುತ್ತಿರುವುದು ಕಾಣಬಹುದು. ಆದರೆ ಈ ಹೇಳಿಕೆಯು ಅಷ್ಟು ಸಮರ್ಪಕತೆಯನ್ನು ಹೊಂದುವುದಿಲ್ಲವಾದರೂ ಅಲ್ಪಮಟ್ಟಿಗಾದರೂ ಒಪ್ಪಿಕೊಳ್ಳಬೇಕಾದ ಸತ್ಯವಾಗಿದೆ.

ನಮ್ಮ ಸಂತೆಯಲ್ಲಿ ಓದು-ಬರಹ ಬಲ್ಲಂತ ಜನರಲ್ಲಿ ವ್ಯವಹರಿಸುವ ರೀತಿ ವಿಶೇಷವಾಗಿ ಕಂಡುಬರುತ್ತಿದ್ದು, ಓದುಬರಹ ಗೊತ್ತಿರದ ಜನಸಮಾನ್ಯರ ವ್ಯವಹರಿಸುವ ರೀತಿಯೇ ಬೇರೆಯಾಗಿರುತ್ತದೆ. ಹೆಚ್ಚಿನ ಜ್ಞಾನವಿರದ ಬುಡಕಟ್ಟುಗಳು ಮುಂದುವರಿದ ಸಮುದಾಯಗಳ ಜೊತೆಗೆ ಪೈಪೋಟಿ ಮಾಡುವುದನ್ನು

ಬಿಟ್ಟು, ತಮ್ಮ ಅಜ್ಞಾನದಿಂದ ಅಲ್ಪತೃಪ್ತರಾಗಿ ಅವರಿಗೆ ಶರಣಾಗುವುದು ಸಾಮಾನ್ಯ ಸಂಗತಿ. ಮುಖ್ಯವಾಹಿನಿಯಲ್ಲಿರುವ ಸಮುದಾಯಗಳು ಇನ್ನಿತರ ಬುಡಕಟ್ಟು ಸಮುದಾಯಗಳಿಗೆ ವ್ಯವಹರಿಸುವ ಚಟುವಟಿಕೆಯ ರಹಸ್ಯವನ್ನು ಮರೆಮಾಚಿ ಅವರು ತಮ್ಮಿಂದಲೇ ವ್ಯವಹರಿಸುವಂತೆ ನೋಡಿಕೊಳ್ಳುವುದು ಮತ್ತು ಹೆಚ್ಚಿನ ಮಟ್ಟದಲ್ಲಿ ತಾವೇ ಮುಂದುವರಿಯುವಂತೆ ನೋಡಿಕೊಳ್ಳುವುದರಿಂದ ಬುಡಕಟ್ಟು ಸಮುದಾಯಗಳು ಹೆಚ್ಚಿಗೆ ತಲೆಕೆಡಿಸಿಕೊಳ್ಳದೇ ಅವರು ಹೇಳಿದಂತೆ ವ್ಯವಹರಿಸಿ ಸುಮ್ಮನಿರುವುದು ಕಂಡುಬರುತ್ತಿದೆ. ಆದರೆ ಅವರು ಶೈಕ್ಷಣಿಕವಾಗಿ ಮುಂದುವರೆದಾಗ ಮಾತ್ರ ಮುಖ್ಯವಾಹಿನಿಯಲ್ಲಿರುವ ಸಮುದಾಯಗಳಿಂದ ತಮ್ಮ ಹಿತಾಸಕ್ತಿಗೆ ಧಕ್ಕೆ ತಗುಲುವುದನ್ನು ತಪ್ಪಿಸಿಕೊಳ್ಳಬಹುದು. ಇಲ್ಲವಿದ್ದರೆ ಈಗಿರುವ ವ್ಯವಸ್ಥೆ ಮುಂದುವರೆಯುವುದಂತೂ ಖಂಡಿತ.

### ೪. ಮನೋವೈಜ್ಞಾನಿಕವಾಗಿ (Psycologicaly)

ಸಂತೆಗಳಲ್ಲಿ ಮುಖ್ಯವಾಹಿನಿಯಲ್ಲಿರುವ ಸಮುದಾಯಗಳು ಬುಡಕಟ್ಟು ಸಮುದಾಯಗಳ ಆಸಕ್ತಿಗೆ ವಿರುದ್ಧವಾಗಿ ವ್ಯವಹರಿಸುವಿಕೆಯಲ್ಲಿ ಕಂಡುಬರುವ ಮತ್ತೊಂದು ಅಂಶವೆಂದರೆ ಮನೋವೈಜ್ಞಾನಿಕತೆ. ಈ ಮನೋವೈಜ್ಞಾನಿಕತೆಯು ವ್ಯವಹಾರ ಚಟುವಟಿಕೆಯಲ್ಲಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸುತ್ತದೆ. ಉದಾಹರಣೆಗೆ ವ್ಯವಹಾರದಲ್ಲಿ ಮನೋವಿಜ್ಞಾನದ ಕೆಲವೊಂದು ಪರಿಕಲ್ಪನೆಗಳಾದ ಮನೋಭಾವ, ಮನೋವೃತ್ತಿ, ಅಭಿವೃತ್ತಿ, ಅಭಿಪ್ರೇರಣೆ, ಅಭಿರುಚಿ, ಅವಧಾನ, ಅವಧಾನ ವಿಚಲನೆ ಮುಂತಾದ ಅಂಶಗಳು ಪ್ರಮುಖವಾಗಿ ಕಂಡುಬರುತ್ತಿದ್ದು, ಇವುಗಳ ಅಡಿಯಲ್ಲಿಯೇ ವ್ಯಾಪಾರಸ್ಥರು ಗ್ರಾಹಕರೊಂದಿಗೆ ವ್ಯವಹರಿಸುತ್ತಿದ್ದು, ಗ್ರಾಹಕರ ಮನೋಭಾವವನ್ನು ಅಧ್ಯಯನ ಮಾಡಿ ವ್ಯವಹಾರವನ್ನು ಸಫಲಗೊಳಿಸಿಕೊಳ್ಳುತ್ತಾರೆ. ಆದರೆ ಇವೆಲ್ಲವುಗಳ ತಿಳುವಳಿಕೆ ಶೈಕ್ಷಣಿಕ ಜ್ಞಾನ ಅಗತ್ಯವಾದರೂ ಸಾಮಾನ್ಯಜ್ಞಾನದಿಂದ ಅನುಭವದಿಂದ ಇದೆಲ್ಲದರ ಜ್ಞಾನ ಹರಿದು ಬರುವುದಂತೂ ಸತ್ಯ.

ಇಂತಹ ಜ್ಞಾನದ ಅರಿವು ಕೆಲವೇ ಸಮುದಾಯಗಳಿಗೆ ಸೀಮಿತವಾಗಿರುವುದಿಲ್ಲ. ಸಾರ್ವತ್ರಿಕವಾದ ಅಂಶವಾದ ಇದು ಎಲ್ಲರಲ್ಲೂ ಇರಬಹುದು ಅಥವಾ ಇರಲಿಕ್ಕಿಲ್ಲ. ಆದರೆ, ಬುಡಕಟ್ಟು ಸಮುದಾಯಗಳು ಇವುಗಳಿಂದ ವಂಚಿತವಾಗಲೂಬಹುದು. ಏಕೆಂದರೆ, ಮುಖ್ಯವಾಹಿನಿಯಲ್ಲಿರುವ ಸಮುದಾಯಗಳು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮುಂದುವರೆದಾಗ, ಮನೋವೈಜ್ಞಾನಿಕವಾಗಿಯೂ ಸಬಲವಾಗಿ ಇತರ ಬುಡಕಟ್ಟು ಸಮುದಾಯಗಳ ಆಸಕ್ತಿಗೆ ವಿರುದ್ಧವಾಗಿಯೂ ಇರಬಹುದು ಅಥವಾ ನಡೆಯಬಹುದು. ಇದಕ್ಕೆ ಕಾರಣ ಎಲ್ಲರಿಂದಲೂ ಉತ್ತಮವಾಗಿರುವ ಉತ್ತಮ ಸ್ಥಿತಿಯಲ್ಲಿರುವ ಸಮುದಾಯಗಳು ಗ್ರಾಹಕರನ್ನು ತಮ್ಮ ಹಿತಕ್ಕೆ ತಂದುಕೊಂಡು, ತಮ್ಮಲ್ಲೆ, ವ್ಯವಹರಿಸುವಂತೆ, ನಡೆಯುವಂತೆ ನಡೆದುಕೊಂಡಾಗ ಬುಡಕಟ್ಟು ಸಮುದಾಯಗಳ ಪಾಡೇನು ಎಂಬ ವಿಷಯ ಕಂಡುಬರುತ್ತದೆ.

ವೈಚಾರಿಕತೆಯಿಂದ (ವಿಚಾರಶೀಲತೆ) ವ್ಯವಹರಿಸುವ ಸಮುದಾಯಗಳು ತಮ್ಮ ಲಾಭನಷ್ಟದಲ್ಲಿ ಪರಿಮಿತಗಳಾದರೂ ಸರಿದೂಗಿಸುವ ಸಾಮರ್ಥ್ಯವನ್ನು ಹೊಂದಿ ಇತರ ಬುಡಕಟ್ಟುಗಳ ವ್ಯವಹಾರ

ನಿಯಂತ್ರಣಕ್ಕೆ ಕೈಹಾಕಿದಾಗ ಬುಡಕಟ್ಟು ಸಮುದಾಯಗಳು ನಷ್ಟವನ್ನನುಭವಿಸಿ ವ್ಯವಹಾರದ ಗತಿಯನ್ನು ಬದಲಾಯಿಸಿಕೊಳ್ಳಬಹುದು ಅಥವಾ ವ್ಯವಹರಿಸುವುದನ್ನು ಬಿಟ್ಟು (ಗ್ರಾಹಕರೊಂದಿಗೆ ನೇರ ವ್ಯವಹಾರ) ದಲ್ಲಾಳಿಗಳಿಗೆ ಶರಣವಾಗುವುದನ್ನು ಕಂಡುಕೊಳ್ಳಬಹುದು. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಪ್ರಮುಖ ವಸ್ತುವಿಷಯ ಮನೋವೈಜ್ಞಾನಿಕತೆ ಎಂಬ ಪರಿಕಲ್ಪನೆಯೇ ಪ್ರಮುಖವಾಗಿ ಕಂಡುಬರುತ್ತದೆ.

**ಬ. ಮುಖ್ಯವಾಹಿನಿಯಲ್ಲಿರುವ ಸಮುದಾಯಗಳ ಆಸಕ್ತಿಗೆ ಪೂರಕವಾಗಿ ಕೆಲಸ ನಿರ್ವಹಿಸುವಿಕೆ ಅಥವಾ ವ್ಯವಹರಿಸುವಿಕೆ**

೧. ಅವಲಂಬನೆ (Dependence)

೨. ಸಂಘಟನೆ (Organisation)

೩. ಉದ್ಯಮಶೀಲತೆ (Entrepreneaurship)

೪. ಸಾರ್ವಜನಿಕ ವಿತರಣಾ ವ್ಯವಸ್ಥೆ (Public Distribution System)

೫. ಹಣಕಾಸಿನ ಸೌಲಭ್ಯ (Provision for Finance)

**೧. ಅವಲಂಬನೆ (Dependence)**

ಮುಖ್ಯವಾಹಿನಿಯಲ್ಲಿರುವ ಸಮುದಾಯಗಳ ಆಸಕ್ತಿಗೆ ಬಡುಕಟ್ಟು ಸಮುದಾಯಗಳು ಪೂರಕವಾಗಿ ಕೆಲಸ ನಿರ್ವಹಿಸುತ್ತವೆ ಅಥವಾ ವ್ಯವಹರಿಸುತ್ತವೆ. ಇದಕ್ಕೆ ಮುಖ್ಯಕಾರಣವೇನೆಂದರೆ ಪರಸ್ಪರ ಅವಲಂಬನೆ. ಬುಡಕಟ್ಟು ಸಮುದಾಯಗಳು ಸ್ವತಃ ತಾವೇ ಹೊಲದಲ್ಲಿ ಬೆಳೆದು ನೇರವಾಗಿ ಸಂತೆಗಳಲ್ಲಿ ಮಾರಾಟ ಮಾಡಲಾರವು. ಏಕೆಂದರೆ ಅವು ಸಹ ಮಧ್ಯವರ್ತಿಗಳಾಗಿ, ವ್ಯಾಪಾರಸ್ಥರಾಗಿ ಸೇವೆಯನ್ನು ಸಲ್ಲಿಸಿ ಲಾಭಾಂಶವನ್ನು ಪಡೆಯಬಹುದು. ಆದರೆ ಈ ನಿಟ್ಟಿನಲ್ಲಿ ಕೆಲಸ ನಿರ್ವಹಿಸಬೇಕಾದರೆ ತಮ್ಮ ಮೇಲಿನ ದೊಡ್ಡ ಪ್ರಮಾಣದ ದಲ್ಲಾಳಿಗಳಿಂದ ಸರಕನ್ನು ಖರೀದಿಸಿ ತಮ್ಮ ಲಾಭಕ್ಕೆ ತಕ್ಕಂತೆ ಮಾರಾಟ ಮಾಡುವುದಾದಲ್ಲಿ ಅವಲಂಬನೆಯನ್ನು ಹೊಂದಲೇಬೇಕು. ಸ್ವತಃ ತಾವು ಸೇವೆ ಸಲ್ಲಿಸುವ ಪರಿ ಸಾಧ್ಯವಾಗದ ಮಾತು. ಈ ಒಂದು ವ್ಯವಸ್ಥೆಯಲ್ಲಿ ಸಹಕಾರ ಮತ್ತು ಪರಸ್ಪರ ಅವಲಂಬನೆಯಿಂದಲೇ ವ್ಯವಹಾರ ಚಟುವಟಿಕೆಗಳು ಜರುಗುತ್ತಿರುತ್ತವೆ.

ಬುಡಕಟ್ಟು ಸಮುದಾಯಗಳು ಮಾರುಕಟ್ಟೆಯಲ್ಲಿ ಬದುಕುಳಿಯುವ ಸಾಧ್ಯತೆಯನ್ನು ಪರಿಗಣಿಸಿದಾಗ ಅವುಗಳ ಸ್ಥಿತಿಗತಿಗೆ ಬೆಂಬಲವಾಗಿ ಇನ್ನಿತರ ಮುಖ್ಯವಾಹಿನಿಯಲ್ಲಿರುವ ಸಮುದಾಯಗಳ ಸಹಕಾರವೂ ಸಹ ಕಾರಣವಾಗಿರುತ್ತದೆ. ಅಂತೆಯೇ ಬುಡಕಟ್ಟು ಸಮುದಾಯಗಳು ಹೆಚ್ಚಿನಮಟ್ಟಿಗೆ ಪರಸ್ಪರ ಅವಲಂಬನೆಯಿಂದಲೇ ಮುಖ್ಯವಾಹಿನಿಯಲ್ಲಿರುವ ಸಮುದಾಯಗಳು ನಡೆದುಕೊಳ್ಳುವ ರೀತಿಯಲ್ಲಿಯೇ ವರ್ತಿಸಿ, ಮುಂದುವರೆಯುತ್ತಿರುತ್ತವೆ. ಇಲ್ಲದಿದ್ದರೆ, ಬುಡಕಟ್ಟುಗಳು ಸಾವು ಬದುಕಿನ ಸ್ಥಿತಿಗೆ ಬಂದು ವ್ಯವಹಾರ ಚಟುವಟಿಕೆಯನ್ನು ನಿಲ್ಲಿಸಬಿಡಬೇಕಾದ ಪ್ರಸಂಗ ಬಂದೊದಗಬಹುದು. ಒಟ್ಟಿನಲ್ಲಿ ಹೇಳುವುದಾದರೆ ಈ ಎರಡೂ ಸಮುದಾಯಗಳು ಪರಸ್ಪರ ಅವಲಂಬನೆ ಹೊಂದಿ ತಮ್ಮ-ತಮ್ಮ ಆಸಕ್ತಿಗೆ ಪೂರಕವಾಗಿ ಕೆಲಸ ನಿರ್ವಹಿಸುತ್ತಿರುತ್ತವೆ.

## ೨. ಸಂಘಟನೆ (Organisation)

"ವಸ್ತುಗಳನ್ನು ಉತ್ಪಾದಿಸಿ, ಉತ್ಪಾದಿಸಿದ ವಸ್ತುಗಳನ್ನು ಸಂತೆಗೆ ಸಾಗಿಸಿ ಆ ವಸ್ತುಗಳನ್ನು ಕೊಳ್ಳಲು ಸಿದ್ಧರಾಗಿರುವವರಿಗೆ ಮಾರಾಟ ಮಾಡುವುದು. ಉತ್ಪನ್ನಗಳು ಉತ್ಪಾದನೆಯಾಗುವುದರಿಂದ ಹಿಡಿದು ಗ್ರಾಹಕರು ಅವುಗಳನ್ನು ಕೊಂಡುಕೊಳ್ಳುವವರೆಗಿನ ಎಲ್ಲಾ ಕಾರ್ಯಚಟುವಟಿಕೆಗಳೂ ನಿಜವಾದ ಅರ್ಥದಲ್ಲಿ ಸಂತೆ ವ್ಯವಸ್ಥೆ ಎನಿಸಿಕೊಳ್ಳುತ್ತದೆ." ಆದರೆ ಈ ವ್ಯವಸ್ಥೆಯಲ್ಲಿ ಸಂಘಟನಾ ಅಂಶವು ಎದ್ದುಕಾಣುತ್ತದೆ. ಉತ್ಪಾದಿಸುವವರು, ದಲ್ಲಾಳಿಗಳು, ಗ್ರಾಹಕರು ಹೀಗೆ ನಾನಾ ಹಂತಗಳಲ್ಲಿ ಸಂಘಟನಾ ಅಂಶವನ್ನು ಅಷ್ಟು ಗಟ್ಟಿಮುಟ್ಟಾಗಿ ಕಾಣದೇ ಹೋದರೂ ಸಡಿಲತೆಯ ಸಂಘಟನೆ ಅಥವಾ ಸಾಂದರ್ಭಿಕ ಸಂಘಟನಾ ವ್ಯವಸ್ಥೆ ಕಾಣುತ್ತೇವೆ. ಈ ವ್ಯವಸ್ಥೆಯಲ್ಲಿ ವರ್ಗವಿನ್ಯಾಸ ಕಂಡುಬರುವುದಾದರೂ, ಪರಸ್ಪರ ಆಸಕ್ತಿಗೆ ಪೂರಕವಾಗಿ ವ್ಯವಹರಿಸುವ ಬಗೆಯನ್ನು ಈ ಹಿನ್ನೆಲೆಯಲ್ಲಿಯೇ ಕಂಡುಕೊಳ್ಳುತ್ತೇವೆ.

'ಸಂಘಟನೆ' ಎಂಬ ಪದ ರೂಪುಗೊಂಡಿರುವುದರ ಹಿನ್ನೆಲೆಯು 'ಆಸಕ್ತಿಗಳನ್ನು', 'ಹಕ್ಕುಗಳನ್ನು' ಕಾಯ್ದುಕೊಳ್ಳುವುದಾಗಿದೆ. ಈ ನಿಟ್ಟಿನಲ್ಲಿ ನೋಡಿದಾಗ, ಬುಡಕಟ್ಟುಗಳು ಮುಖ್ಯವಾಹಿನಿಯಲ್ಲಿರುವ ಸಮುದಾಯಗಳ ಆಸಕ್ತಿಗೆ ಪೂರಕವಾಗಿ ಕೆಲಸ ನಿರ್ವಹಿಸುತ್ತಿರುವ ಅಂಶಗಳು ಕಂಡುಬರುತ್ತಿವೆ. ಉದಾಹರಣೆಗೆ, ತರಕಾರಿ ಮಾರುವವರ ಸಂಘ, ಒಣಮೆಣಸಿನಕಾಯಿ ಮಾರುವವರ ಸಂಘ, ಕಿರಾಣಿ ಸಾಮಾನುಗಳನ್ನು ಮಾರುವವರ ಸಂಘ, ಹೂ ಹಣ್ಣು ಮಾರುವವರ ಸಂಘ, ಮೀನುಮಾಂಸ ಮಾರುವವರ ಸಂಘ, ಹೀಗೆ ನಾನಾರೀತಿಯ ವಿವಿಧ ಸಂಘಟನೆಗಳು ಕಂಡುಬರುತ್ತವೆ. ಆದರೆ ಈ ಸಂಘಟನೆಗಳಿಂದ ಮುಖ್ಯವಾಹಿನಿಯಲ್ಲಿರುವ ಸದಸ್ಯರು, ಬುಡಕಟ್ಟು ಸಮುದಾಯಗಳ ಸದಸ್ಯರು ಎಂದು ಬೇರೆ ಬೇರೆಯಾಗಿಲ್ಲ. ಪರಸ್ಪರ ಸಂಘಟನೆಯ ಸದಸ್ಯರಾಗಿ ಕೆಲಸಕಾರ್ಯವನ್ನು ನಿರ್ವಹಿಸುತ್ತಿರುತ್ತಾರೆ. ಇದರಿಂದ ಎರಡು ಸಮುದಾಯದ ಸದಸ್ಯರು ಒಬ್ಬರಿಗೊಬ್ಬರು ಪರಸ್ಪರ ಪೂರಕವಾಗಿ ಕೆಲಸಕಾರ್ಯ ನಿರ್ವಹಿಸಿ ಅವರವರ ಆಸಕ್ತಿಗೆ ಧಕ್ಕೆವುಂಟಾಗದಂತೆ ನೋಡಿಕೊಳ್ಳುತ್ತಾರೆ.

## ೩. ಉದ್ಯಮಶೀಲತೆ (Entrepreneaurship)

ಬುಡಕಟ್ಟು ಸಮುದಾಯಗಳು ಮುಖ್ಯವಾಹಿನಿಯಲ್ಲಿರುವ ಸಮುದಾಯಗಳ ಆಸಕ್ತಿಗೆ ಪೂರಕವಾಗಿ ಕೆಲಸ ನಿರ್ವಹಿಸುತ್ತವೆ ಎಂಬುದರ ಹಿನ್ನೆಲೆಯಲ್ಲಿ ಉದ್ಯಮಶೀಲತೆಯೂ ಒಂದು ಅಂಶವಾಗಿ ಕಂಡುಬರುತ್ತದೆ. ಉದ್ಯಮಶೀಲತೆಯಲ್ಲಿ ತೊಡಗಿರುವ ಮಾರುಕಟ್ಟೆಯ ವ್ಯಾಪ್ತಿಯಲ್ಲಿ ಬರುವಂತ ಉದ್ಯಮಶೀಲ ಸಂಚಾಲಕರು ದೊಡ್ಡ ಪ್ರಮಾಣದ ಲಾಭಕ್ಕಾಗಿ ಲಾಭನಷ್ಟಗಳ ಹೊಣೆಗಾರಿಕೆಯನ್ನು ಹೊತ್ತುಕೊಂಡಿದ್ದು, ಮಾರುಕಟ್ಟೆಗೆ ಬೇಕಾಗುವ ಪದಾರ್ಥಗಳನ್ನು ಅಥವಾ ಸರಕುಗಳನ್ನು ಸಾಗಿಸುವ ವ್ಯವಸ್ಥೆ ಮಾಡುತ್ತಾರೆ. ಇದರಿಂದ ಇತರ ಸಮುದಾಯಗಳು ಮತ್ತು ಬುಡಕಟ್ಟು ಸಮುದಾಯಗಳು ಗ್ರಾಹಕರ ಬೇಡಿಕೆಯನ್ನು ಪರಿಗಣಿಸಿ ಅವರಿಗೆ ಪೂರಕವಾಗಿ ನಡೆಯುತ್ತಾರೆ ಅಥವಾ ಮುಂದುವರೆಯುತ್ತಾರೆ. ಉದ್ಯಮಶೀಲತೆಯಲ್ಲಿ ಬಂಡವಾಳದಾರರಿಗೆ ಮತ್ತು ದಲ್ಲಾಳಿಗಳಿಗೆ ವ್ಯವಹಾರ ಚಟುವಟಿಕೆಯಲ್ಲಿ ಪರಸ್ಪರಾವಲಂಬನೆ ಇದ್ದು, ಇವರ ಆಸಕ್ತಿಗೆ

ಪೂರಕವಾಗಿ ಇನ್ನಿತರ ಸಮುದಾಯಗಳು ಮತ್ತು ಬುಡಕಟ್ಟು ಸಮುದಾಯಗಳು ಕಾರ್ಯನಿರ್ವಹಿಸುತ್ತವೆ. ಮುಖ್ಯವಾಗಿ ಮುಖ್ಯವಾಹಿನಿಯಲ್ಲಿರುವ ಬಂಡವಾಳದಾರರಾಗಿರುವ ದಲ್ಲಾಳಿಗಳಿಗೆ ಪೂರಕವಾಗಿ ಸರಕು ಮತ್ತು ಸೇವೆಯನ್ನು ಸಲ್ಲಿಸುವವರಿಗಾಗಿ ಬುಡಕಟ್ಟು ಸಮುದಾಯಗಳು ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಇಂದಿನ ಸಂತೆಗಳಲ್ಲಿ ಸಂಶೋಧನೆಯಿಂದ ಗುರುತಿಸಬಹುದಾಗಿದೆ.

ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಒಂದೇ ಬಗೆಯ ವ್ಯವಹಾರ ಚಟುವಟಿಕೆಯಲ್ಲಿ ನಿರತರಾಗಿರುವ ಬುಡಕಟ್ಟು ಸಮುದಾಯದ ವ್ಯಾಪಾರಸ್ಥರು, ಉನ್ನತ ವರ್ಗದ ಸಮುದಾಯಗಳು, ದಲ್ಲಾಳಿಗಳು, ಉದ್ಯಮಶೀಲರು ಮುಂತಾದವರ ಮಾರುಕಟ್ಟೆಯಲ್ಲಿಯೇ ವ್ಯವಹರಿಸುವ ಮನೋಭಾವದ ಏಕತೆ ಹೊಂದಿರುವುದರಿಂದ ಪರಸ್ಪರ ಆಸಕ್ತಿಗಳು ಕಾಪಾಡಲ್ಪಡುತ್ತವೆ ಪೂರಕವಾಗಿರುತ್ತವೆ.

**೪. ಸಾರ್ವಜನಿಕ ವಿತರಣಾ ವ್ಯವಸ್ಥೆ (Public Distribution System)**

ಸಂತೆಯಲ್ಲಿ ಸಾರ್ವಜನಿಕ ವಿತರಣಾ ವ್ಯವಸ್ಥೆ ಅಥವಾ ಗ್ರಾಹಕರಿಗೆ ಸರಕು-ಸೇವೆಗಳನ್ನು ವಿತರಿಸುವ ವ್ಯವಸ್ಥೆಯಲ್ಲಿ ಬುಡಕಟ್ಟು ಸಮುದಾಯಗಳು, ಮುಖ್ಯವಾಹಿನಿಯಲ್ಲಿರುವ ಸಮುದಾಯಗಳ ಆಸಕ್ತಿಗೆ ಪೂರಕವಾಗಿ ಕೆಲಸವನ್ನು ನಿರ್ವಹಿಸುತ್ತವೆ. ಮುಂದುವರಿದ ಸಮುದಾಯಗಳು ಬಂಡವಾಳ ಶೇಖರಣೆ ಫಲದಿಂದಾಗಿ ತಮ್ಮಲ್ಲಿಯೇ ಹೆಚ್ಚಿನ ವಹಿವಾಟು ನಡೆಯಬೇಕೆಂಬ ದೃಷ್ಟಿಯನ್ನು ಹೊಂದಿ ಇನ್ನುಳಿದ ವರ್ತಕರಿಗೆ ವ್ಯವಹರಿಸಲು ತಮ್ಮ ಹತ್ತಿರವಿರುವ ಸರಕುಗಳನ್ನು ಖರೀದಿಸುವಂತೆ ವ್ಯವಸ್ಥೆಯನ್ನು ಮಾಡಿ, ಅದರಿಂದ ಸರಕು ಅಥವಾ ಉತ್ಪಾದನೆಯ ವಸ್ತುವನ್ನು ಪಡೆದವರು ಗ್ರಾಹಕರಿಗೆ ನೇರವಾಗಿ ಮಾರಾಟ ಮಾಡುತ್ತಾರೆ. ಆದರೆ ಈ ವ್ಯವಸ್ಥೆಯಲ್ಲಿ ಬಂಡವಾಳವನ್ನು ಹೊಂದಿರುವ ಬುಡಕಟ್ಟು ಸಮುದಾಯದ ಸದಸ್ಯರು ನೇರವಾಗಿ ತಾವೇ ದಲ್ಲಾಳಿಗಳಾಗಿ ಅಥವಾ ಬಂಡವಾಳದಾರರಾಗಿ ಹಣವನ್ನು ವ್ಯಯಿಸಿ ವ್ಯವಹಾರವನ್ನು ಕಾಯ್ದುಕೊಳ್ಳಬಹುದು. ಆದರೂ ಈ ಮಟ್ಟಕ್ಕೆ ಮುಟ್ಟಿರದ ಅನೇಕ ಬುಡಕಟ್ಟು ಜನಸಾಮಾನ್ಯರನ್ನು ಸಂತೆಯಲ್ಲಿ ಕಂಡಾಗ, ಅವರು ಮುಖ್ಯವಾಹಿನಿಯಲ್ಲಿರುವ ಸಮುದಾಯಗಳೊಂದಿಗೆ ಪರಸ್ಪರವಾಗಿ ಅವಲಂಬನೆ ಮಾಡಿಕೊಂಡು ಹೋಗುವ ಅನಿವಾರ್ಯತೆಯಿದೆ. ಮುಖ್ಯವಾಹಿನಿಯಲ್ಲಿರುವ ಸಮುದಾಯಗಳು ಸಹ ಗ್ರಾಹಕರ ಅನುಕೂಲತೆ ಅಥವಾ ಲಾಭಾಂಶದ ದೃಷ್ಟಿಯಿಂದ ಬುಡಕಟ್ಟುಗಳ ವ್ಯವಹಾರಕ್ಕೆ ಅಡಚಣೆಯಾಗದಂತೆ ಸಾಲ-ಸೌಲಭ್ಯ ನೀಡಿ ಅವರ ಆಸಕ್ತಿಗಳಿಗೆ ಪೂರಕವಾಗಿ ನಡೆದುಕೊಳ್ಳುತ್ತಾರೆ. ಸಾರ್ವಜನಿಕರಿಗೆ ಅಥವಾ ಗ್ರಾಹಕರಿಗೆ ಸರಕನ್ನು ವಿತರಿಸುವ ವ್ಯವಸ್ಥೆಯಲ್ಲಿ ಪರಸ್ಪರ ಆಸಕ್ತಿಯನ್ನು ರಕ್ಷಿಸಿಕೊಳ್ಳುತ್ತಾರೆ.

**೫. ಹಣಕಾಸಿನ ಸೌಲಭ್ಯ (Provision for Finance)**

ಮುಖ್ಯವಾಹಿನಿಯಲ್ಲಿರುವ ಸಮುದಾಯಗಳ ಆಸಕ್ತಿಗೆ ಪೂರಕವಾಗಿ ಕೆಲಸ ನಿರ್ವಹಿಸುವ ಅನೇಕ ಬುಡಕಟ್ಟು ಸಮುದಾಯಗಳನ್ನು ಸಂತೆಯಲ್ಲಿ ನಾವು ಕಾಣುತ್ತೇವೆ. ಇದಕ್ಕೆ ಮುಖ್ಯಕಾರಣ ಹಣಕಾಸಿನ ಸೌಲಭ್ಯ. ಅಂದರೆ, ಹಣಕಾಸಿನಿಂದ ಸಬಲವಾಗಿರದ ಅನೇಕ ಬುಡಕಟ್ಟು ಸಮುದಾಯದ ವ್ಯಾಪಾರಸ್ಥರು

ತಮ್ಮ ಹರಾಜಿನ ಮೂಲಕ ಸರಕನ್ನು ಒದಗಿಸುವ ದಲ್ಲಾಳಿಗಳಿಂದ ಅಥವಾ ಬಂಡವಾಳದಾರರಿಂದ ಹಣಕಾಸಿನ ಸೌಲಭ್ಯವನ್ನು ಪಡೆದು, ಸರಕುಗಳನ್ನು ಪಡೆದು ಅವರು ನಿರ್ಧರಿಸುವ ಬೆಲೆಗೆ ಪದಾರ್ಥಗಳನ್ನು ಕೊಂಡು, ಗ್ರಾಹಕರಿಗೆ ವಿತರಿಸುತ್ತಾರೆ. ಈ ನಿಟ್ಟಿನಲ್ಲಿ ಮುಖ್ಯವಾಹಿನಿಯಲ್ಲಿರುವ ಸಮುದಾಯಗಳ ದಲ್ಲಾಳಿಗಳ ಆಸಕ್ತಿಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತಾರೆ. ಸಾಮಾನ್ಯವಾಗಿ ಮುಖ್ಯವಾಹಿನಿಯಲ್ಲಿರುವ ಸಮುದಾಯಗಳ (ವಿಶೇಷವಾಗಿ) ಮಧ್ಯವರ್ತಿಗಳಾಗಿ, ಬಂಡವಾಳದಾರರಾಗಿ ಮತ್ತು ಹಣಕಾಸಿನ ಸಾಲಸೌಲಭ್ಯ ನೀಡುವವರಾಗಿ ಕಂಡುಬರುತ್ತಾರೆ.

ಈ ಒಂದು ಅಧ್ಯಾಯದಲ್ಲಿ ಒಟ್ಟಾರೆಯಾಗಿ ಹೇಳುವುದಾದರೆ, ಸಂತೆಯ ಉಗಮದ ಬಗೆಗೆ ಸ್ಪಷ್ಟವಾದ ಮಾಹಿತಿಯನ್ನು ಪರಿಪೂರ್ಣವಾಗಿ ನೀಡಲಾಗದಿದ್ದರೂ ಪ್ರಾಚೀನ ಕಾಲದಲ್ಲಿ ಪುರಾವೆಗಳ ಆಧಾರದ ಮೇಲೆ ಅದರ ಅಸ್ತಿತ್ವದ ಉಲ್ಲೇಖ ನೀಡಬಹುದು. ತದನಂತರ ಸಂತೆಗಳ ವಿಕಾಸದ ಬಗೆಗೂ ಸಮರ್ಪಕ ಮಾಹಿತಿಯನ್ನು ಕೊಡಬಹುದು. ಆದರೆ ಹುಟ್ಟು ವಿಕಾಸದಲ್ಲಿ ಅದರ ಸ್ಥಿತಿಗತಿಯ ಸ್ಥಿತ್ಯಂತರಗಳ ಬಗೆಯನ್ನು ಅವಲೋಕಿಸಬಹುದು. ಅದರಲ್ಲಿ ಪ್ರಮುಖವಾಗಿ ವಸ್ತುವಿನಿಮಯ ಪದ್ಧತಿಯಿಂದ ಹಣದ ವಿನಿಮಯದವರೆಗೆ, ಪ್ರಾಚೀನ ಕಾಲದ ಸಂತೆಗಳಿಂದ - ಆಧುನಿಕ ಕಾಲದ ಸಂತೆಗಳ ಗತಿ ಮತ್ತು ಸಂತೆಯಲ್ಲಿನ ವ್ಯಾಪಾರವು ಬುಡಕಟ್ಟು ಆಸಕ್ತಿಗೆ ವಿರುದ್ಧವೇ ಅಥವಾ ಪೂರಕವೇ ಹಾಗೂ ಪ್ರಸ್ತುತವಾಗಿ ಸಂತೆಯಲ್ಲಿ ವ್ಯವಹರಿಸುವ ಬುಡಕಟ್ಟುಗಳ ಸ್ಥಿತಿ ಅಥವಾ ಬಗೆಯ ಬಗೆಗೆ ಸಂಪೂರ್ಣವಾದ ಮಾಹಿತಿಯನ್ನು ಕಲೆಹಾಕಬಹುದಾಗಿದೆ.

## ಟಿಪ್ಪಣಿಗಳು

೧. ಗೊಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ, ಡಾ. ಅರ್ಜುನ ಗೊಳಸಂಗಿ, ಪು.೧೫, ೧೯೯೫

೨. ಇತಿಹಾಸ ದರ್ಶನ, ಎಂ.ಬಿ. ಪಾಟೀಲ, ಪು. ೨೫೫, ೧೯೯೮

೩. ಪ್ರವಾಸಿ ಕಂಡ ಇಂಡಿಯಾ, ಸಂ. ೫, ಎಚ್.ಎಲ್. ನಾಗೇಗೌಡ, ಪು. ೧೭೦, ೧೯೭೫

೪. ಇತಿಹಾಸ ದರ್ಶನ, ಎಂ.ಬಿ. ಪಾಟೀಲ, ಪು. ೨೫೬, ೧೯೯೮

೫. ಕರ್ನಾಟಕ ಚರಿತ್ರೆ, ಸಂ. ೩, ಪು. ೧೧೫, ೧೯೯೭

೬. ಪ್ರವಾಸಿ ಕಂಡ ಇಂಡಿಯಾ, ಸಂ. ೫, ಎಚ್.ಎಲ್. ನಾಗೇಗೌಡ, ಪು. ೧೭೫, ೧೯೭೫

೭. ಪ್ರವಾಸಿ ಕಂಡ ಇಂಡಿಯಾ, ಸಂ. ೭, ಎಚ್.ಎಲ್. ನಾಗೇಗೌಡ, ಪು. ೧೨೧ ೧೨೨, ೧೯೮೩

೮. ಸಮಗ್ರ ಭಾರತದ ಇತಿಹಾಸ, ಸದಾಶಿವ, ಪು. ೨೪, ೧೯೯೮

೯. ಇತಿಹಾಸ ದರ್ಶನ, ಎಂ.ಬಿ. ಪಾಟೀಲ, ಪು. ೨೫೯, ೧೯೯೮

೧೦. ಹಂಪೆಯ ಬಜಾರುಗಳು, ಡಾ.ಎಸ್.ವೈ. ಸೋಮಶೇಖರ, ಪು. ೩೯, ೧೯೯೭

೧೧. ಪ್ರವಾಸಿ ಕಂಡ ಇಂಡಿಯಾ, ಸಂ. ೭, ಎಚ್.ಎಲ್. ನಾಗೇಗೌಡ, ಪು. ೨೪, ೧೯೮೩

೧೨. ಪ್ರವಾಸಿ ಕಂಡ ಇಂಡಿಯಾ, ಸಂ. ೭, ಎಚ್.ಎಲ್. ನಾಗೇಗೌಡ, ಪು. ೧೨೧-೧೨೨, ೧೯೮೩

೧೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಸಂ. ಡಾ. ದೇವರಕೊಂಡಾರೆಡ್ಡಿ, ಪು. ೧೩, ೧೯೯೮

೧೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಸಂ. ಡಾ. ದೇವರಕೊಂಡಾರೆಡ್ಡಿ, ಪು. ೧೫, ೧೯೯೮

೧೫. ಜಾನಪದ ಕೆಲವು ಅಧ್ಯಯನಗಳು, ಡಾ. ಅಂಬಳಿಕೆ ಹಿರಿಯಣ್ಣ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೧

## ಅಧ್ಯಾಯ ೩

# ಸಂತೆಯ ಸ್ವರೂಪ ಮತ್ತು ಲಕ್ಷಣಗಳು

೩:೧ ಪೀಠಿಕೆ

೩:೨ ಸಂತೆಯ ಸ್ವರೂಪ

೩:೩ ಸಂತೆಯ ಲಕ್ಷಣಗಳು

ಅಧ್ಯಾಯ ೩

# ಸಂತೆಯ ಸ್ವರೂಪ ಮತ್ತು ಲಕ್ಷಣಗಳು

## ೩:೧ ಪೀಠಿಕೆ

ಸಂತೆಗಳ ನಿಜವಾದ ಚಿತ್ರಣವನ್ನು ಗಮನಿಸಿದಾಗ ಸಂತೆಯ ಸ್ವರೂಪವು ಸ್ಪಷ್ಟವಾಗಿ ದೊರಕುತ್ತದೆ. ಸಂತೆಗಳು ಜನಜಂಗುಳಿಯಿಂದ ಕೂಡಿರುತ್ತದೆ ಎಂಬುದು ಮೊದಲ ಸತ್ಯವಾದರೂ, ಸಂತೆಯಲ್ಲಿ ಅನೇಕ ಚಟುವಟಿಕೆಗಳು ಜರುಗುತ್ತವೆ ಎಂಬುದು ಸ್ಪಷ್ಟ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಸಂತೆಗಳು ಗ್ರಾಮೀಣ ಜನರಿಗೆ ಅನೇಕ ರೀತಿಯಲ್ಲಿ ಅನುಕೂಲಕರವಾದ ಸ್ಥಳೀಯ ವ್ಯಾಪಾರದ ಕೇಂದ್ರಬಿಂದುಗಳು ಎನ್ನುವುದನ್ನು ಮರೆಯುವಂತಿಲ್ಲ. ಸಂತೆಯಲ್ಲಿ ನಾನಾ ಬಗೆಗಳಿದ್ದು, ಪ್ರಾದೇಶಿಕ ನಿರ್ದಿಷ್ಟತೆ ಇದ್ದು, ಅಲ್ಲಿ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಮತ್ತು ಮನರಂಜನಾತ್ಮಕ ಅಂಶಗಳು ಕಾಣಸಿಗುತ್ತವೆ. ಸಂತೆಗಳು ನಾಗರಿಕತೆಯ ಪ್ರತೀಕಗಳಾದರೂ ಪ್ರಾಚೀನತೆಯ ಸ್ವರೂಪದೊಂದಿಗೆ ಕಾಲಕಾಲಕ್ಕೆ ಬದಲಾವಣೆ ಹೊಂದುತ್ತಾ ಇಂದಿಗೂ ಉಳಿದುಕೊಂಡುಬಂದಿರುವುದು ಅದರ ಅನಿವಾರ್ಯತೆಯನ್ನು ಹೇಳುತ್ತದೆ. ಸಂತೆಗಳು ಬಡಬಗ್ಗರಿಗೆ, ವೃದ್ಧರಿಗೆ, ಹಿಂದುಳಿದುವರಿಗೆ, ಅಲ್ಪಸಂಖ್ಯಾತರಿಗೆ, ಬಂಡವಾಳಶಾಹಿಗಳಿಗೆ, ಬಂಡವಾಳರಹಿತರಿಗೆ, ವೃತ್ತಿಪರ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿರುವವರಿಗೆ, ಗುಡಿಕೈಗಾರಿಕೆಗಳನ್ನು ಹೊಂದಿರುವವರಿಗೆ, ಕಾರ್ಖಾನೆಗಳನ್ನು ಹೊಂದಿ ಸಿದ್ಧವಸ್ತುಗಳನ್ನು ಉತ್ಪಾದಿಸುತ್ತಿರುವವರಿಗೆ ಮಾರುಕಟ್ಟೆಗಳಾಗಿವೆ. ಸಂತೆಗಳು ಕಡುಬಡವರಿಂದ ಹಿಡಿದು ಧನಿಕರವರೆಗೆ ಅವಶ್ಯಕವಾದವುಗಳಾಗಿವೆ. ಸಂತೆಯ ಸ್ವರೂಪವನ್ನು ಕುರಿತು ಮುಂದೆ ಸ್ಪಷ್ಟವಾಗಿ ವಿವರಿಸಲಾಗಿದೆ.

## ೩:೨ ಸಂತೆಯ ಸ್ವರೂಪ

ಸಂತೆಗಳು ಗ್ರಾಮೀಣ, ಪಟ್ಟಣ, ತಾಲೂಕು ಮತ್ತು ಹೋಬಳಿ ಮಟ್ಟದಲ್ಲಿ ಕಂಡುಬರುತ್ತವೆ. ಸಂತೆಗಳು ಗ್ರಾಮದ, ಊರಿನ ನಿರ್ದಿಷ್ಟ ಭಾಗದಲ್ಲಿದ್ದು, ವಿಶಿಷ್ಟವಾಗಿ ಆಯಾ ಊರಿನ ಜನತೆಗೆ ಅಥವಾ ಗ್ರಾಹಕರಿಗೆ ಅನುಕೂಲವಾಗುವಂತಹ ಸ್ಥಳದಲ್ಲಿರುತ್ತವೆ. ಸಮೀಪದ ಹಳ್ಳಿಗಳ ಊರಿನ ಮತ್ತು ಜನಸಂಖ್ಯೆಗೆ ಅನುಗುಣವಾಗಿ ಸಂತೆಗಳ ಗಾತ್ರ ಅಥವಾ ವ್ಯಾಪ್ತಿ ರೂಪುಗೊಳ್ಳುತ್ತವೆ. ಸಂತೆಗಳಲ್ಲಿ ಅನೇಕ ಜನಸಮುದಾಯದವರಿದ್ದು, ಅವರು ತಮಗೆ ಬೇಕಾಗುವ ವಸ್ತುಗಳನ್ನು ಈ ಸಂತೆಗಳಿಂದಲೇ ಪಡೆಯುತ್ತಾರೆ. ಸಂತೆಯಲ್ಲಿ ವಿವಿಧ ಬಗೆಯ ಸಾಮಗ್ರಿಗಳ ಕೊಡುಕೊಳ್ಳುವಿಕೆ ನಡೆಯುತ್ತದೆ. ಅಲ್ಲದೇ ಸಂತೆಯು ಹಗಲಿನಲ್ಲಿಯೇ ಮಾತ್ರ ನಡೆಯುತ್ತದೆ.

ಕೆಲವು ಸಂತೆಗಳು ಸಂಜೆಯಲ್ಲಿಯೂ ನಡೆಯುವುದುಂಟು. ಇದುವರೆಗೂ ಸಂತೆಗಳು ರಾತ್ರಿಯಲ್ಲಿ ಜರುಗಿದ ಉದಾಹರಣೆಗಳಿಲ್ಲ. ಸಂತೆಗಳಿಗೆ ಇಡೀ ಊರಿನ ಹಾಗೂ ಸಮೀಪದ ಹತ್ತಾರು ಹಳ್ಳಿಗಳ ಜನತೆಯ ಗ್ರಾಹಕರಾಗಿದ್ದರೆ, ಸಂತೆಗಳಿಗೆ ಸರಕುಗಳನ್ನು ತರುವ ವ್ಯಾಪಾರಸ್ಥರು, ಮಧ್ಯವರ್ತಿಗಳು ದೂರದ ಊರಿನಿಂದ ತಾಲ್ಲೂಕು ಕೇಂದ್ರಗಳಿಂದ ಬರುತ್ತಾರೆ. ಪರ ಊರಿನವರು, ಸಂತೆ ಜರುಗುವ ಊರಿನಿಂದಲೇ ವ್ಯಾಪಾರಕ್ಕಾಗಿ ಬಂದವರು ಇಲ್ಲಿ ಇರುತ್ತಾರೆ.

### ೩:೨:೧ ಸಂತೆಯ ಬಗೆಗಳು

ಸಂತೆಗಳು ಸಾಮಾನ್ಯ ಜನರಿಗೆ ಅನುಕೂಲಕರವಾದ ವ್ಯಾಪಾರ ವಹಿವಾಟುಗಳನ್ನು ಒದಗಿಸುತ್ತದೆ. ವಿಧ ವಿಧವಾದ ವಸ್ತುಗಳು, ಸರಕು ಸಾಮಗ್ರಿಗಳು ಸಂತೆಯಲ್ಲಿ ದೊರೆಯುತ್ತವೆ. ಕೆಲವೊಂದು ಸಂತೆಗಳು ನಿರ್ದಿಷ್ಟವಾದ ವಸ್ತುಗಳಿಗೆ ಹೆಸರುವಾಸಿಯಾಗಿರುತ್ತವೆ. ಉದಾಹರಣೆಗೆ ದನಗಳ ಸಂತೆ, ಬಟ್ಟೆಯ ಸಂತೆ ಮುಂತಾದವುಗಳು ಈ ರೀತಿಯ ವಸ್ತುಗಳ ಆಧಾರದ ಮೇಲೆ ಸಂತೆಗಳನ್ನು ವರ್ಗೀಕರಿಸಲಾಗುತ್ತವೆ. ಇವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

### ೩:೨:೧:೧ ಪ್ರಾಣಿಗಳ (ಮಾರಾಟ) ಸಂತೆ

ಕೃಷಿಕಾರರು ಸಂತೆಯಲ್ಲಿ ಆಹಾರ ಪದಾರ್ಥ ಧಾನ್ಯಗಳನ್ನು ಖರೀದಿಸುವುದು ವಾರದಲ್ಲಿ ಒಮ್ಮೆ ನಡೆಯುತ್ತದೆ. ಅದೇ ರೀತಿ ಕೃಷಿ ಸಂಬಂಧ ಹಾಗೂ ಬೇರೆ ಬೇರೆ ಉದ್ದೇಶಗಳಿಗಾಗಿ ವಾರಕ್ಕೊಮ್ಮೆ ಪ್ರಾಣಿಗಳ ಸಂತೆಯನ್ನು ನಡೆಸುವುದು ನಾಡಿನ ಹಲವಾರು ಕಡೆಗಳಲ್ಲಿ ಕಂಡುಬರುತ್ತದೆ. ಸಾಮಾನ್ಯವಾಗಿ ಪ್ರಾಣಿಗಳ ಸಂತೆಗಳು ಕಡಿಮೆ ಸಂಖ್ಯೆಯಲ್ಲಿರುತ್ತವೆ. ಇದು ಸಹ ವಾರದ ಯಾವುದಾದರೂ ಒಂದು ದಿನ ನಡೆಯುತ್ತವೆ. ಇಂತಹ ಸಂತೆಗಳಲ್ಲಿ ದೂರದ ಹಳ್ಳಿಗಳಿಂದ ರೈತರು ತಮ್ಮ ಎತ್ತು, ಕುರಿ, ಕೋಳಿ, ಎಮ್ಮೆ, ಹಸು ಮುಂತಾದ ಸಾಕುಪ್ರಾಣಿಗಳನ್ನು ಮಾರಾಟ ಮಾಡಲು ಬಂದಿರುತ್ತಾರೆ. ಇಲ್ಲಿ ಬೇರೆ ಬೇರೆ ಊರುಗಳಿಂದ ಬಂದ ಜನರು ತಮ್ಮ ಉದ್ದೇಶಕ್ಕೆ ಸೂಕ್ತವಾದ ಪ್ರಾಣಿಗಳನ್ನು ಖರೀದಿಸುತ್ತಾರೆ. ಅಲ್ಲದೆ ರೈತರು ತಮ್ಮ ಚಾಣಾಕ್ಷತನ ಮತ್ತು ತಮ್ಮ ಪಾರಂಪರಿಕ ಜ್ಞಾನದಿಂದ ಪ್ರಾಣಿಗಳ ಗುಣಮಟ್ಟವನ್ನು ನೋಡಿ ವ್ಯವಹಾರವನ್ನು ಮಾಡುತ್ತಾರೆ. ಅವರಿಗೆ ಪ್ರಾಣಿಗಳು ಸಾಕುವುದಕ್ಕಾಗಿ, ಕೃಷಿಕೆಲಸಕ್ಕಾಗಿ ಇಲ್ಲವೆ ಮಾಂಸಕ್ಕಾಗಿ ಖರೀದಿಸುವುದುಂಟು. ಇನ್ನೊಂದು ಮುಖ್ಯವಾದ ಅಂಶವೆಂದರೆ, ಈ ಸಂತೆಗಳಲ್ಲಿ ಮಧ್ಯವರ್ತಿಗಳು ಮಾರುವವರ ಕಡೆಯಿಂದ ಪ್ರಾಣಿಗಳನ್ನು ಖರೀದಿಸಿ ತಮಗೆ ಲಾಭವಾಗುವ ರೀತಿಯಲ್ಲಿ ಇತರರಿಗೆ ಮಾರಾಟ ಮಾಡುತ್ತಾರೆ. ಈ ಸಂತೆಗಳು ಅಪರೂಪವಾಗಿ ಕಂಡುಬರುತ್ತವೆಯಾದರೂ ಇಂತಹ ಸಂತೆಗಳಿಗೆ ಆಯಾ ಗ್ರಾಮದವರು, ಅಥವಾ ಹೋಬಳಿಯವರು ಶುಲ್ಕವನ್ನು ಅಥವಾ ತೆರಿಗೆಯನ್ನು ನಿಗದಿಪಡಿಸಿರುತ್ತಾರೆ. ವ್ಯಾಪಾರ ವಹಿವಾಟಿನಲ್ಲಿ ಸಾತ್ವಿಕತೆಗಳಿದ್ದು, ಅವು ಚೌಕಾಸಿಗೆ ಸಂಬಂಧಪಟ್ಟಿರುತ್ತವೆ. ಕರ್ನಾಟಕದಲ್ಲಿ ಇಂತಹ ಸಂತೆಗಳು ಬಹಳ ಕಡೆಗೆ ನಡೆಯುತ್ತಿರುವುದನ್ನು ಕಾಣಬಹುದು. ಉದಾಹರಣೆಗೆ ಮುಕ್ಕುಂಪಿ ಸಂತೆ. ಹೊಸಪೇಟೆಯಿಂದ ಕುಷ್ಟಗಿ ಮಾರ್ಗವಾಗಿ ಹೋಗುವ ರಾಷ್ಟ್ರೀಯ ಹೆದ್ದಾರಿಯಲ್ಲಿ ಬರುತ್ತದೆ. ಇಲ್ಲಿ ಮುಖ್ಯವಾಗಿ ಕುರಿ ಮತ್ತು ಮೇಕೆಗಳ

ಸಂತೆ ನಡೆಯುತ್ತದೆ. ಇದು ನಿರ್ದಿಷ್ಟಪಡಿಸಿದ ದಿನವಾದ ಭಾನುವಾರ, ನಿರ್ದಿಷ್ಟವಾದ ಸ್ಥಳದಲ್ಲಿ ನಡೆಯುತ್ತದೆ. ಇನ್ನು ಚಿತ್ರದುರ್ಗ (ಜಿಲ್ಲಾ ಕೇಂದ್ರ)ದಲ್ಲಿ ಹಂದಿಗಳ ಸಂತೆ ನಡೆಯುತ್ತದೆ. ಇದು ಮಾಂಸಕ್ಕಾಗಿ ಹಂದಿಗಳನ್ನು ಖರೀದಿಸುವ ಸಂತೆಯಾಗಿದೆ. ಮತ್ತೊಂದು ಉದಾಹರಣೆ ಎಂದರೆ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿಯಲ್ಲಿ ಗುರುವಾರದಂದು ಮತ್ತು ಕೊಪ್ಪಳ ಜಿಲ್ಲೆಯ ಗಂಗಾವತಿಯ ಬಳಿಯಿರುವ ದೇಶಕ್ಯಾಂಪ್‌ನಲ್ಲಿ ದನಗಳ ಸಂತೆ ನಡೆಯುತ್ತದೆ.

### ೩:೨:೧:೨ ಧಾನ್ಯಗಳ ಸಂತೆ

ನಮ್ಮ ನಿತ್ಯ ಜೀವನದಲ್ಲಿ ಆಹಾರ ಧಾನ್ಯಗಳನ್ನು ಹೆಚ್ಚಾಗಿ ಬಳಸುತ್ತೇವೆ. ಈ ಧಾನ್ಯಗಳನ್ನು ಹೊಲಗದ್ದೆಗಳಲ್ಲಿ ಬೆಳೆದು ಅವುಗಳನ್ನು ಮಾರಿ ಬಂದ ಹಣದಿಂದ ಜೀವನವನ್ನು ಸಾಗಿಸಲಾಗುವುದು. ಈ ಧಾನ್ಯಗಳ ಸಂತೆಯು ಕೇವಲ ಧಾನ್ಯಗಳಿಗೆ ಮಾತ್ರ ಸೀಮಿತಗೊಂಡಿರುತ್ತವೆ. ಧಾನ್ಯಗಳು ಎಂದಾಕ್ಷಣ, ಅಕ್ಕಿ, ಗೋಧಿ, ಭತ್ತ, ಸಜ್ಜೆ, ನವಣೆ, ರಾಗಿ, ಹೆಸರು, ಬೇಳೆಕಾಳು, ಶೇಂಗಾ, ಜೋಳ ಇನ್ನು ಮುಂತಾದ ದವಸ-ಧಾನ್ಯಗಳು ವಿಶೇಷವಾಗಿ ಒಂದೆಡೆಗೆ ದೊರಕುತ್ತವೆ. ಅವುಗಳ ಮಾರಾಟ ಮತ್ತು ಖರೀದಿಗಾಗಿ ಅನೇಕರು ಅಲ್ಲಿ ಒಟ್ಟುಗೂಡಿರುತ್ತಾರೆ. ಅಂತಹ ಸಂತೆಗಳನ್ನು ಧಾನ್ಯಗಳ ಸಂತೆ ಎಂದು ಕರೆಯುತ್ತೇವೆ. ಧಾನ್ಯಗಳ ಸಂತೆಗಳಲ್ಲಿ ರೈತರು ತಾವು ಬೆಳೆದ ದವಸಧಾನ್ಯಗಳನ್ನು ತಾವೇ ಬೆಳೆದು ನೇರವಾಗಿ ಸಂತೆಗೆ ಬಂದು ಮಾರಾಟವನ್ನು ಮಾಡುತ್ತಾರೆ. ಇನ್ನು ಕೆಲವು ರೈತರು ಇಂತಹ ಸಂತೆಗಳಿಗೆ ಹೋಗದೆ ತಮ್ಮ ಸಮೀಪದ ಪಟ್ಟಣ ಅಥವಾ ಗ್ರಾಮಗಳಲ್ಲಿ ಮಾರಾಟವನ್ನು ಮಾಡುತ್ತಾರೆ. ಮಾರಾಟವಾದ ದವಸ-ಧಾನ್ಯಗಳನ್ನು ಖರೀದಿಸಿದ ದಲ್ಲಾಳಿಗಳು ಇವುಗಳನ್ನು ಸಂತೆಗೆ ತೆಗೆದುಕೊಂಡು ಹೋಗಿ ಮಾರಾಟಮಾಡಿ ಲಾಭವನ್ನು ಪಡೆಯುತ್ತಾರೆ. ಈ ದಲ್ಲಾಳಿಗಳು ಸಣ್ಣ ಪ್ರಮಾಣದಲ್ಲಿ ಇಲ್ಲವೇ ಹೆಚ್ಚಿನ ಪ್ರಮಾಣದಲ್ಲಿ ಬಂಡವಾಳವನ್ನು ತೊಡಗಿಸಿರುವುದು ಸಹ ಉಂಟು. ಹೆಚ್ಚಿನ ಬಂಡವಾಳವನ್ನು ತೊಡಗಿಸಿದರೆ ಅಧಿಕ ಲಾಭಾಂಶವು ಇದೆ. ಆದರೆ ಈ ದವಸ-ಧಾನ್ಯಗಳ ವ್ಯಾಪಾರದಲ್ಲಿ ನಷ್ಟ ಸಂಭವನೀಯತೆಯೂ ಸಹ ಇರುತ್ತದೆ. ಇನ್ನು ಕೆಲವರು ಅದರಲ್ಲೂ ರೈತರು ತಮ್ಮ ಧವಸಧಾನ್ಯಗಳನ್ನು ಸಂತೆಗೆ ತೆಗೆದುಕೊಂಡು ಹೋಗಿ ನೇರವಾಗಿ ತಾವೇ ಮಾರಾಟವನ್ನು ಮಾಡುತ್ತಾರೆ. ಇಂತಹ ಸಂತೆಗಳಿಗೆ ಮಧ್ಯಮ ವರ್ಗದ ಜನತೆಯು ಹೋಗುವುದು ಹೆಚ್ಚಾಗಿ ಕಂಡುಬರುತ್ತದೆ.

ಮಧ್ಯಮ ವರ್ಗಕ್ಕೆ ಸೇರಿದ ನೌಕರರು ದಿನೋಪಯೋಗಿ ದವಸ-ಧಾನ್ಯಗಳ ಖರೀದಿಗೆ ಇಂತಹ ಸ್ಥಳಗಳಿಗೆ ಹೋಗುವುದು ಕಂಡುಬರುತ್ತದೆ. ಏಕೆಂದರೆ ಅವರಿಗೆ ಈ ದವಸ-ಧಾನ್ಯಗಳ ಸಂತೆಗಳು ಕಡಿಮೆ ದರದಲ್ಲಿ ದೊರಕುತ್ತವೆ. ಅಂಗಡಿ ಮುಂಗಟ್ಟುಗಳಲ್ಲಿ ದರ ಹೆಚ್ಚಿಗೆ ಇರುತ್ತದೆ. ದವಸ-ಧಾನ್ಯಗಳ ಸಂತೆಗಳಲ್ಲಿ ವಿವಿಧ ಗುಣಮಟ್ಟದ, ವಿವಿಧ ರೀತಿಯ ದವಸ ಧಾನ್ಯಗಳು ದೊರಕುತ್ತವೆ. ತಮಗೆ ಒಪ್ಪುವುದನ್ನು ಆಯ್ಕೆ ಮಾಡಿ, ಗುಣಮಟ್ಟವನ್ನು ನೋಡಿ ಖರೀದಿಸುತ್ತಾರೆ. ಒಂದೇ ಕಡೆಗೆ ಎಲ್ಲಾ ರೀತಿಯ ದವಸ-ಧಾನ್ಯಗಳು ಸಿಗುವುದರಿಂದ ಇಂತಹ ಸಂತೆಗಳು ತುಂಬಾ ಅನುಕೂಲಕರ. ಈ ಸಂತೆಯಲ್ಲಿ ದವಸ-ಧಾನ್ಯಗಳು ಮಾತ್ರವೇ

ದೊರಕುವುದರಿಂದ ಇನ್ನಿತರ ಯಾವುದೇ ಬಗೆಯ ವಸ್ತುಗಳು ಸಿಗುವುದಿಲ್ಲ. ಅದಕ್ಕಾಗಿಯೇ ಇವುಗಳಿಗೆ ದವಸ-ಧಾನ್ಯಗಳ ಸಂತೆ ಎಂದು ಕರೆಯುತ್ತಾರೆ. ಈ ದವಸ-ಧಾನ್ಯಗಳ ಸಂತೆಗಳಲ್ಲಿ ದಲ್ಲಾಳಿ ವರ್ತಕರು ದವಸ-ಧಾನ್ಯಗಳಿಗೆ ಕಲಬೆರಕೆ ಮಾಡುವುದು ಸಹ ಉಂಟು. ಹೆಚ್ಚಿನ ಲಾಭಕ್ಕಾಗಿ ಈ ಕೃತ್ಯಕ್ಕೆ ಅವರು ಇಳಿಯುವುದು ಸಹಜ ಸಾಮಾನ್ಯ. ದವಸ-ಧಾನ್ಯಗಳು ಜೀವನಾವಶ್ಯಕ ಪದಾರ್ಥಗಳಾಗಿರುವುದರಿಂದ ಜನಸಾಮಾನ್ಯರು ಈ ಸಂತೆಗಳನ್ನು ಹೆಚ್ಚಾಗಿ ಆಶ್ರಯಿಸಿದ್ದಾರೆ. ಕರ್ನಾಟಕದ ನಗರ, ಹೋಬಳಿ, ತಾಲೂಕು, ಗ್ರಾಮೀಣ ಮಟ್ಟದಲ್ಲಿ ನಿರ್ದಿಷ್ಟ ಸ್ಥಳಗಳಲ್ಲಿ ವಾರಕ್ಕೊಮ್ಮೆ ಇಂತಹ ಸಂತೆಗಳು ನಡೆಯುತ್ತಿರುತ್ತವೆ.

### ೩:೨:೧:೩ ತರಕಾರಿ ಸಂತೆಗಳು

ತರಕಾರಿ ಸಂತೆಗಳೆಂದರೆ, ಒಂದು ನಿಗದಿತವಾದ ಸ್ಥಳದಲ್ಲಿ ನಿರ್ದಿಷ್ಟವಾದ ದಿನದಂದು ತರಕಾರಿ ಮತ್ತು ಇತರೆ ವ್ಯವಹಾರದ ಚಟುವಟಿಕೆಗಳು ನಡೆಯಲ್ಪಡುವ ಸಂತೆಗಳೇ ತರಕಾರಿ ಸಂತೆಗಳಾಗಿವೆ. ಈ ತರಕಾರಿ ಎನ್ನುವ ಪದವು ಕಾಯಿಪಲ್ಲೆಗಳಿಗೆ ಸಂಬಂಧಿಸಿದುದಾಗಿದೆ. ಕಾಯಿಪಲ್ಲೆಗಳೊಂದಿಗೆ ಹಸಿರು ತರಕಾರಿಗಳು. ಇಂತಹ ಸಂತೆಗಳಲ್ಲಿ ಕಂಡುಬರುತ್ತವೆ. ರೈತರು, ಕೃಷಿಕರು ತಮ್ಮ ಹೊಲಗದ್ದೆ, ತೋಟಗಳಲ್ಲಿ ತರಕಾರಿ ಪದಾರ್ಥಗಳನ್ನು ಬೆಳೆದು ನೇರವಾಗಿ ಸಂತೆಗಳಿಗೆ ತಂದು ಮಾರಾಟ ಮಾಡುತ್ತಾರೆ. ಇನ್ನೂ ಕೆಲವರು ಮಧ್ಯವರ್ತಿಗಳಿಗೆ ನೀಡಿ ಲಾಭಾಂಶವನ್ನು ಪಡೆಯುತ್ತಾರೆ. ತರಕಾರಿ ಸಂತೆಗಳಲ್ಲಿ ಸವಾಲುಗಳು ನಡೆಯುವುದು ಸರ್ವೇಸಾಮಾನ್ಯ. ಬುಟ್ಟಿಗಳಲ್ಲಿ, ಚೀಲಗಳಲ್ಲಿ ತರಕಾರಿಗಳನ್ನು ಹರಾಜು ಮಾಡುವುದು ಕಂಡುಬರುತ್ತದೆ. ತರಕಾರಿಗಳು ಮುಂಜಾನೆಯ ಅವಧಿಯಲ್ಲಿ ಹರಾಜಾಗಿ ಅವುಗಳನ್ನು ಮಧ್ಯವರ್ತಿಗಳಿಂದ ಮಾರಲಾಗುತ್ತದೆ. ಇವುಗಳನ್ನು ಖರೀದಿ ಮಾಡಲು ಉನ್ನತವರ್ಗದ ಜನತೆ ಮುಂಜಾನೆಯ ಅವಧಿಯಲ್ಲಿದ್ದರೆ, ಮಧ್ಯಾಹ್ನ ಮಧ್ಯಮ ವರ್ಗದವರು, ಕೊನೆಗೆ ಸಾಯಂಕಾಲದ ಹೊತ್ತಿಗೆ ಬಡವರ್ಗದವರು ವ್ಯಾಪಾರ ಮಾಡುವುದು ಕಂಡುಬರುತ್ತದೆ. ಇದು ಚಿಲ್ಲರೆ ವ್ಯಾಪಾರಕ್ಕೆ ಸಂಬಂಧಿಸಿದುದಾದರೆ ಒಟ್ಟಾಗಿ ಚಿಲ್ಲರೆ ವ್ಯಾಪಾರವಲ್ಲದ ತರಕಾರಿ ಸಂತೆಗಳು ಸಹ ನಡೆಯುತ್ತವೆ. ಇವುಗಳು ದಲ್ಲಾಳಿಗಳ ಕೈಸೇರಿ ನಗರಗಳಿಗೆ, ಪಟ್ಟಣಗಳಿಗೆ ರವಾನಿಸಲ್ಪಡುತ್ತವೆ. ತರಕಾರಿ ಸಂತೆಗಳಿಗೂ ಸಹ ತೆರಿಗೆ ದರವನ್ನು ನಿರ್ದಿಷ್ಟಪಡಿಸಲಾಗಿರುತ್ತದೆ.

### ೩:೨:೧:೪ ಹಣ್ಣಿನ ಸಂತೆಗಳು

ಹಣ್ಣಿನ ಸಂತೆಗಳು ಎಂದರೆ, ನಿರ್ದಿಷ್ಟವಾದ ಋತುಮಾನಗಳಲ್ಲಿ ನಡೆಯುವಂತಹ ವಿವಿಧ ರೀತಿಯ ಹಣ್ಣುಗಳಿಗೆ ಸಂಬಂಧಿಸಿದ ಸಂತೆಗಳಾಗಿವೆ. ಈ ಹಣ್ಣಿನ ಸಂತೆಗಳು ಕೇವಲ ಹಣ್ಣುಗಳ ಮಾರಾಟವನ್ನು ಮತ್ತು ಶೇಖರಣೆಯ ಕಾರ್ಯವನ್ನು ಹೊಂದಿರುತ್ತವೆ. ಹಣ್ಣುಗಳು ಈ ಸಂತೆಯಿಂದ ಮಾರಾಟಗಾರರಿಗೆ ವರ್ಗಾವಣೆಯಾಗುತ್ತವೆ. ಉದಾಹರಣೆಗೆ ಮಾವಿನ ಹಣ್ಣಿನ ಸಂತೆಗಳು, ಸೀತಾಫಲ ಹಣ್ಣಿನ ಸಂತೆಗಳು, ಸಪೋಟ ಹಣ್ಣಿನ ಸಂತೆಗಳು, ಪೇರಲಹಣ್ಣಿನ ಸಂತೆಗಳು, ಹೀಗೆ ನಾನಾ ರೀತಿಯ ಹಣ್ಣಿನ ಸಂತೆಗಳು ಆಯಾ ಋತುಮಾನಗಳಲ್ಲಿ ಬರುವ ಹಣ್ಣುಗಳ ಸಂತೆಗಳಾಗಿ ಕಂಡುಬರುತ್ತವೆ. ಈ ಸಂತೆಗಳು ಹಣ್ಣುಗಳನ್ನು

ಬೆಳೆಗಾರರಿಂದ ಒಂದೆಡೆ ತರಿಸಲ್ಪಟ್ಟು ಅಲ್ಲಿ ಹರಾಜಾಗಿ ಇಲ್ಲವೇ ಸವಾಲಾಗಿ ವರ್ತಕರಿಗೆ ಮಾರಾಟವಾಗುತ್ತವೆ. ಹಣ್ಣುಗಳು ವಿಶೇಷವಾಗಿ ಕೆಲವೊಂದು ಸ್ಥಳಗಳಲ್ಲಿ ಮಾತ್ರ ಅಂದರೆ ಪ್ರಮುಖ ಪಟ್ಟಣ ಇಲ್ಲವೇ ತಾಲೂಕು ಕೇಂದ್ರಗಳಲ್ಲಿ ನಡೆಯುತ್ತವೆ. ಗ್ರಾಮೀಣ ಮಟ್ಟದಲ್ಲಿ ಇಂತಹ ಸಂತೆಗಳು ನಡೆಯುವುದು ಬಹಳ ವಿರಳವಾಗಿದೆ.

### ೩:೨:೧:೫ ಬಟ್ಟೆ ಸಂತೆಗಳು

ಬಟ್ಟೆಗಳನ್ನು ಮಾರುವ ಮತ್ತು ಕೊಳ್ಳುವ ಸಂತೆ ಇದಾಗಿದೆ. ಉದಾಹರಣೆಗೆ ಕೆಲವೊಂದು ಗ್ರಾಮ, ನಗರ, ತಾಲೂಕು ಕೇಂದ್ರಗಳಲ್ಲಿ ಬಟ್ಟೆಗಳ ಮಾರಾಟವೇ ಪ್ರಧಾನವಾದ ಸಂತೆಗಳು ಕಂಡುಬರುತ್ತವೆ. ಉಣ್ಣೆ ಬಟ್ಟೆಗಳು, ಬಳಸುವ ಸಾಮಾನ್ಯ ಬಟ್ಟೆಗಳು, ರಗ್ಗುಗಳು, ಚಾದರಗಳು, ಬೆಡ್‌ಶೀಟ್‌ಗಳು ಇನ್ನು ಮುಂತಾದ ರೀತಿಯ ವಿವಿಧ ಬಟ್ಟೆಗಳಿಗೆ ಸಂಬಂಧಪಟ್ಟ ಬಟ್ಟೆಗಳು ಇಂತಹ ಸಂತೆಗಳಲ್ಲಿ ವಿಶೇಷವಾಗಿ ಕಂಡುಬರುತ್ತವೆ. ಈ ಸಂತೆಗಳಲ್ಲಿ ಅನೇಕ ಭಾಗಗಳಿಂದ ಅಥವಾ ಅನೇಕ ಊರುಗಳಿಂದ ಜನರು ಖರೀದಿಗಾಗಿ ಮತ್ತು ಮಾರಾಟ ಮಾಡುವುದಕ್ಕಾಗಿ ಬಂದು ಸೇರಿರುತ್ತಾರೆ. ಇಲ್ಲಿ ಯಾವುದೇ ರೀತಿಯ ಮಧ್ಯವರ್ತಿಗಳಿರುವುದಿಲ್ಲ. ಏಕೆಂದರೆ ಬಟ್ಟೆ ವ್ಯಾಪಾರಿಗಳು ನೇರವಾಗಿ ಕಾರ್ಖಾನೆಗಳಿಂದ ಅಥವಾ ವೋಲ್‌ಸೇಲ್‌ನಲ್ಲಿ ಬಟ್ಟೆಗಳನ್ನು ಖರೀದಿಸಿ, ನೇರವಾಗಿ ಬಂದು ಇಂತಹ ಸಂತೆಗಳಲ್ಲಿ ಮಾರುತ್ತಾರೆ. ಈ ಬಟ್ಟೆ ಸಂತೆಗಳು ಸಾಮಾನ್ಯವಾಗಿ ವಿರಳವಾಗಿ (ಸಂಖ್ಯೆಯಲ್ಲಿ) ನಡೆಯುತ್ತವೆ. ಇಲ್ಲಿಯೂ ತೆರಿಗೆಯನ್ನು ಸ್ವೀಕರಿಸಲಾಗುತ್ತದೆ.

### ೩:೨:೧:೬ ಮೀನು ಮಾರುವ ಸಂತೆಗಳು

ಮೀನು ಮಾರಾಟ ಸಂತೆಗಳಲ್ಲಿ ಮಾಂಸಾಹಾರಿಗಳಿಗೆ ಮೀನು ಲಭ್ಯವಾಗುವುದು. ಕರಾವಳಿ ತೀರ ಪ್ರದೇಶಗಳಲ್ಲಿ, ಬಂದರು ಸ್ಥಳಗಳಲ್ಲಿ ಕಂಡುಬರುತ್ತವೆ. ಕೇವಲ ಮೀನುಗಳ ಮಾರಾಟವೇ ಇಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಮೀನುಗಾರಿಕೆ ಸಂತೆಗಳಲ್ಲಿ ಮೀನುಗಳನ್ನು ಖರೀದಿಸುವ ಗ್ರಾಹಕರು ತಮಗೆ ಬೇಕಾಗುವ ಸಮುದ್ರದ ಮೀನುಗಳನ್ನು ಖರೀದಿಸಲು ಬಂದಿರುವವರಾಗಿರುತ್ತಾರೆ. ಅಲ್ಲದೇ ಈ ಮೀನುಗಳ ಮಾರಾಟಗಾರರಿಗೆ ತೆರಿಗೆಯ ಸಂದಾಯವು ಸಹ ಇರುತ್ತದೆ. ಚಿಕ್ಕ ಪ್ರಮಾಣದ ಮೀನುಗಳಿಂದ ಹಿಡಿದು ಅತ್ಯಂತ ದೊಡ್ಡ ಪ್ರಮಾಣದ ಮೀನುಗಳವರೆಗೆ, ನಾನಾ ತೆರನಾದ ಮೀನುಗಳು ಈ ಸಂತೆಗಳಲ್ಲಿ ದೊರೆಯುತ್ತವೆ. ಮೀನುಗಳಲ್ಲಿ ಕೆಲವು ಚಿಕ್ಕ ಮೀನುಗಳನ್ನು ಖರೀದಿಸಿದ ವರ್ತಕ ವರ್ಗವು ಅವುಗಳಿಗೆ ಉಪ್ಪನ್ನು ಹಚ್ಚಿ ಒಣಗಿಸಿ ದೇಶದಾದ್ಯಂತ ಮಾರಾಟಕ್ಕಾಗಿ ಕಳುಹಿಸುತ್ತಾರೆ. ಅವು ಸಾಮಾನ್ಯ ಸಂತೆಯಲ್ಲಿ ಕಂಡುಬರುತ್ತವೆ. ಮೀನುಗಳ ಸಂತೆಗಳಲ್ಲಿ ಬಂಡವಾಳಶಾಹಿಗಳು ಅಧಿಕ ಪ್ರಮಾಣದಲ್ಲಿ ಲಾರಿಗಟ್ಟಲೇ ಮೀನುಗಳನ್ನು ಖರೀದಿಸಿ ಒಳನಾಡುಗಳಿಗೆ, ಪಟ್ಟಣ, ತಾಲೂಕು, ಜಿಲ್ಲಾ ಕೇಂದ್ರಗಳಿಗೆ ಮಾರಾಟ ಮಾಡಲು ಕಳುಹಿಸುತ್ತಾರೆ. ಮೀನುಗಳನ್ನು ರಾತ್ರಿಯ ಅವಧಿಯಲ್ಲಿ ಅವುಗಳನ್ನು ಹರಾಜಿಗಿಟ್ಟು, ಹಣವನ್ನು ಪಡೆಯುತ್ತಾರೆ. ಈ ಸಂತೆಗಳಲ್ಲಿಯೂ ದಲ್ಲಾಳಿ ಅಥವಾ ಮಧ್ಯವರ್ತಿಗಳು ಸಹ ಹೆಚ್ಚಾಗಿ ಕಂಡುಬರುತ್ತಾರೆ.

### ೩:೨:೧:೭ ದ್ವಿದರ್ಜೆಯ ವಸ್ತುಗಳು (Second Sale) ಸಂತೆಗಳು

Second Sales ಸಂತೆಗಳು ಎಂಬುದು ಕೇವಲ ತಾಲೂಕು, ಜಿಲ್ಲಾ, ಪಟ್ಟಣಗಳಲ್ಲಿ ನಡೆಯುವಂತಹ ಸಂತೆಗಳಾಗಿವೆ. ಈ Second Sales ಸಂತೆಗಳು ಹೆಚ್ಚಾಗಿ ಹಳೆಯ ಸಾಮಾನುಗಳ ಖರೀದಿ ಮತ್ತು ಮಾರಾಟಗಳ ವ್ಯವಸ್ಥೆಯನ್ನು ಒಳಗೊಂಡಿರುತ್ತದೆ. ಮೊದಲು ಹೊಸ ಸಾಮಾನುಗಳಾಗಿದ್ದ ವಸ್ತುಗಳು ಜನರಿಂದ ಉಪಯೋಗಿಸಲ್ಪಟ್ಟು, ಇಂತಹ ಸಂತೆಗಳಲ್ಲಿ ದ್ವಿತೀಯ ಮಾರಾಟಕ್ಕಾಗಿ ಬಂದಿರುತ್ತವೆ. ಉದಾಹರಣಗೆ ದ್ವಿಚಕ್ರ ವಾಹನಗಳು, ಕಾರುಗಳು, ಸೈಕಲ್‌ಗಳು, ಫ್ರಿಜ್‌ಗಳು ಇತ್ಯಾದಿ ಸಾಮಾನುಗಳು ಈ Second Sale ಸಂತೆಗಳಿಗೆ ಬಂದಿರುತ್ತವೆ. ಇವುಗಳನ್ನು ಖರೀದಿಸಲು ಅನೇಕರು ಬರುವುದುಂಟು. ಹೆಚ್ಚಾಗಿ ಮಧ್ಯಮ ವರ್ಗದವರು ಈ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುವರು. ಈ ಸಂತೆಗಳಲ್ಲಿ ಮಧ್ಯವರ್ತಿಗಳಿದ್ದು ಮಾರಾಟ ಮಾಡುವವರಿಂದ ಮತ್ತು ಗ್ರಾಹಕರಿಂದ ತಮ್ಮ ಕಮೀಷನನ್ನು ಪಡೆಯುತ್ತಾರೆ. ಇವರ ಬುದ್ಧಿವಂತಿಕೆಯಿಂದಲೇ ವಸ್ತುಗಳು ಮಾರಾಟವಾಗುತ್ತವೆ. ಈ ಸಂತೆಗಳಲ್ಲಿ ಬಡ ಜನತೆಯ ಪಾಲ್ಗೊಳ್ಳುವಿಕೆ ಅತ್ಯಂತ ಕಡಿಮೆ.



### ೩:೨:೧:೮ ಕಾಳಸಂತೆಗಳು

ಕಾಳಸಂತೆಗಳೆಂದರೆ ಕಳ್ಳತನದಿಂದ ಸಾಮಾನು/ಸಾಮಗ್ರಿ/ವಸ್ತುಗಳನ್ನು ತಂದು ಒಂದೆಡೆ ಮಾರಲ್ಪಡುವ ಸಂತೆಗಳಾಗಿವೆ. ಇದು ಅಪರಾಧವಾಗಿದ್ದರೂ, ಇಂದಿನ ದಿನಮಾನಗಳಲ್ಲಿ ಪ್ರಸ್ತುತ ಕಾಳಸಂತೆಗೆ ಅನೇಕ ರೀತಿಯ ವಸ್ತುಗಳು ಬರುತ್ತಿದ್ದು, ಕಡಿಮೆ ದರದಲ್ಲಿ ದೊರಕುತ್ತವೆ. ಈ ಕಾಳಸಂತೆಗಳು ಹೆಚ್ಚಾಗಿ ನಗರ/ರಾಜಧಾನಿ ಪ್ರದೇಶಗಳಲ್ಲಿ ಕಂಡುಬರುತ್ತವೆ. ಕಾಳಸಂತೆಯಲ್ಲಿನ ವಸ್ತುಗಳು ಕಳ್ಳತನದವುಗಳಾಗಿದ್ದು ಅವುಗಳ ಗುಣಮಟ್ಟದ ಬಗೆಗೆ ಯಾವುದೇ ಖಾತರಿ ಇರುವುದಿಲ್ಲ ಮತ್ತು ಯಾವುದೇ ಭರವಸೆಯನ್ನು ಮಾರಾಟ ಮಾಡುವವರು ಕೊಡುವುದಿಲ್ಲ. ಕಾಳಸಂತೆಯಲ್ಲಿ ವಿದೇಶೀಯ ವಸ್ತುಗಳು, ದೇಶೀಯ ವಸ್ತುಗಳು ಸಿಗುತ್ತವೆ. ಸಾಮಾನ್ಯವರ್ಗ, ಮಧ್ಯಮವರ್ಗ ಮತ್ತು ಶ್ರೀಮಂತ ವರ್ಗಗಳು ಸಹ ಇಂತಹ ಕಾಳಸಂತೆಯಲ್ಲಿ ಖರೀದಿಸುವರು. ಕಾನೂನಿನ ಪ್ರಕಾರ ಇಂತಹ ಸಂತೆಗಳನ್ನು ನಿಷೇಧಿಸಲ್ಪಟ್ಟಿದ್ದರೂ, ಒಳಗೊಳಗೆ ನಡೆಯುವುದನ್ನು ನಾವು ಬೆಂಗಳೂರು, ಮುಂಬೈ, ಚೆನ್ನೈ, ಹೈದರಾಬಾದ್, ಕೊಲ್ಕತ್ತಾ ಪ್ರದೇಶಗಳಲ್ಲಿ ಕಾಣುತ್ತೇವೆ. ಕಾಳಸಂತೆಯಲ್ಲಿನ ಯಾವುದೇ ವಸ್ತುಗಳ ಮೇಲೆ ತೆರಿಗೆ ಇಲ್ಲದಿರುವುದು ಕಂಡುಬರುತ್ತದೆ. ತೆರಿಗೆಯ ಕಣ್ಣು ತಪ್ಪಿಸಿ ಇವುಗಳ ವ್ಯವಹಾರವು ನಡೆಯುತ್ತಿರುತ್ತದೆ. ಕಾಳಸಂತೆಯಲ್ಲಿ ಮಾರಾಟ ಮಾಡುವವರಿಗೆ ಶಿಕ್ಷೆಗಳಾದ ಉದಾಹರಣೆಗಳು ಸಹ ಇವೆ. ಪರೋಕ್ಷವಾಗಿ ಇಂತಹ ಸಂತೆಗಳಿಗೆ ಸಾರ್ವಜನಿಕರ ಸಹಕಾರವಿದೆ. ಆದಕಾರಣವೇ ಅವುಗಳನ್ನು ಖರೀದಿಸುವುದು.



### ೩:೨:೧:೯ ಸಾಮಾನ್ಯ ಸಂತೆಗಳು

ಸಾಮಾನ್ಯ ಸಂತೆಗಳು ದೇಶದಾದ್ಯಂತ ಕಂಡುಬರುವ ಸಂತೆಗಳಾಗಿವೆ. ಈ ಸಂತೆಗಳು ಗ್ರಾಮ, ಪಟ್ಟಣ, ತಾಲೂಕು, ಜಿಲ್ಲಾ ಕೇಂದ್ರಗಳಲ್ಲಿ ಕಂಡುಬರುವ ಸಾಮಾನ್ಯ ಸಂತೆಗಳಾಗಿವೆ. ಈ ಸಂತೆಗಳಲ್ಲಿ ಎಲ್ಲ ರೀತಿಯ

ವರ್ತಕರು, ದಲ್ಲಾಳಿಗಳು ಮತ್ತು ಗ್ರಾಹಕರಿರುವುದು ಕಂಡುಬರುತ್ತದೆ. ಸಾಮಾನ್ಯ ಸಂತೆಗಳು ಸಾಮಾನ್ಯವಾಗಿ ಗ್ರಾಮೀಣ ಮಟ್ಟದಲ್ಲಿ ಮಹತ್ವ ಉಳಿಸಿಕೊಂಡಿವೆ. ವಾರಕ್ಕೊಮ್ಮೆ ಈ ಸಂತೆಗಳು ಕಂಡು ಬರುತ್ತವೆ. ಸಾಮಾನ್ಯ ಸಂತೆಗಳಲ್ಲಿ ಬಟ್ಟೆ ವ್ಯಾಪಾರಿಗಳು, ಒಣಮೀನು ವ್ಯಾಪಾರಿಗಳು, ಒಣ ಮೆಣಸಿನ ಕಾಯಿ ವ್ಯಾಪಾರಿಗಳು, ತರಕಾರಿ ವ್ಯಾಪಾರಿಗಳು, ಹಣ್ಣುಗಳ ವ್ಯಾಪಾರಿಗಳು, ಕುಂಕುಮ ವ್ಯಾಪಾರಿಗಳು, ಧಾನ್ಯ ವ್ಯಾಪಾರಿಗಳು, ಕಿರಾಣಿ, ಮಿಠಾಯಿ ವ್ಯಾಪಾರಿಗಳು, ಸಿದ್ಧವಸ್ತು ವ್ಯಾಪಾರಿಗಳು, ಮಸಾಲೆ ಸಾಂಬಾರು ಪದಾರ್ಥಗಳ ವ್ಯಾಪಾರಿಗಳು ಹೀಗೆ ಎಲ್ಲ ರೀತಿಯ ವ್ಯಾಪಾರಿಗಳು ಕಂಡುಬರುತ್ತಾರೆ. ಈ ಸಾಮಾನ್ಯ ಸಂತೆಗಳಲ್ಲಿ ಅಲೆಮಾರಿ ವ್ಯಾಪಾರಿಗಳು, ಖಾಯಂ ವ್ಯಾಪಾರಿಗಳು ಸಹ ಕಂಡುಬರುತ್ತಾರೆ.

ಸಾಮಾನ್ಯ ಸಂತೆಗಳಿಗೂ ತೆರಿಗೆಯನ್ನು ಆಯಾ ಆಯಾ ಪ್ರದೇಶಕ್ಕೆ ಸಂಬಂಧಿಸಿದವರು ವರ್ಷಕ್ಕೊಮ್ಮೆ ಟೆಂಡರನ್ನು ಹಿಡಿದು ಶುಲ್ಕ ಅಥವಾ ತೆರಿಗೆಯನ್ನು ಸಂಗ್ರಹಿಸುತ್ತಾರೆ. ವ್ಯಾಪಾರದ ವಹಿವಾಟನ್ನು ನೋಡಿ, ವಸ್ತುಗಳನ್ನು ನೋಡಿ, ವ್ಯವಹಾರದ ಸ್ಥಳದ ವ್ಯಾಪ್ತಿಯನ್ನು ನೋಡಿ ತೆರಿಗೆಯನ್ನು ವಿಧಿಸಿ ಹಣವನ್ನು ಸಂಗ್ರಹಿಸುತ್ತಾರೆ. ಸಾಮಾನ್ಯ ಸಂತೆಗಳು ಇತರ ಸಂತೆಗಳಿಗಿಂತ ಹೆಚ್ಚಾಗಿ ಕಂಡುಬರುತ್ತಿದ್ದು, ಉಳಿದ ಸಂತೆಗಳಿಗಿಂತ ಮಹತ್ವದ್ದಾಗಿವೆ.

ಈ ಮೇಲೆ ತಿಳಿಸಲಾದ ಎಲ್ಲ ಸಂತೆಗಳು ತಮ್ಮದೇ ಆದ ಗುಣಲಕ್ಷಣಗಳನ್ನು ಹೊಂದಿ ನಡೆಯುತ್ತವೆ. ಆಯಾ ಸಂತೆಗಳಿಗೆ ಅವುಗಳದೇ ಆದ ವ್ಯವಸ್ಥೆ ಇದ್ದು ಸಂತೆಯ ಸ್ವರೂಪದ ಮೇಲೆ ಉತ್ತಮವಾದ ಬೆಳಕನ್ನು ಚೆಲ್ಲುತ್ತವೆ. ಈ ಸಂತೆಗಳಿರದೇ ಆರ್ಥಿಕ ಚಟುವಟಿಕೆ ನಡೆಯುವುದು ಕಷ್ಟಕರ ಎನ್ನಬಹುದು. ಸಂತೆಯ ಸ್ವರೂಪವನ್ನು ಇನ್ನೂ ಪರಿಪೂರ್ಣವಾಗಿ ಮತ್ತು ಸ್ಪಷ್ಟವಾಗಿ ತಿಳಿಯಬೇಕೆಂದರೆ ಸಂತೆಯಲ್ಲಿ ಪಾಲ್ಗೊಳ್ಳುವ ಗ್ರಾಹಕ, ವ್ಯಾಪಾರಿ, ಮಧ್ಯವರ್ತಿ, ಜನಸಮೂಹ ಇನ್ನು ಮುಂತಾದ ಅಂಶಗಳನ್ನು ಸರಿಯಾಗಿ ಗಮನಿಸಿದಾಗ ಮಾತ್ರ ನಮಗೆ ಸಂತೆಯ ನಿಜವಾದ ಸ್ವರೂಪದ ಕಲ್ಪನೆ ಸ್ಪಷ್ಟವಾಗಿ ಕಂಡುಬರುತ್ತದೆ. ಅದನ್ನು ಮುಂದಿನ ಹಂತಗಳಲ್ಲಿ ಸವಿವರವಾಗಿ ವಿವರಿಸಲಾಗಿದೆ.

### ೩:೨:೨ ಸಂತೆಯ ಪ್ರಾದೇಶಿಕ ನಿರ್ದಿಷ್ಟತೆ

ಸಂತೆಗಳ ಸ್ವರೂಪವನ್ನು ಸ್ಪಷ್ಟವಾಗಿ ಅರಿತುಕೊಳ್ಳಬೇಕಾದರೆ ಸಂತೆಗಳ ವ್ಯಾಪ್ತಿಯ ಬಗ್ಗೆ ಅಥವಾ ಸಂತೆಗಳ ಪ್ರಾದೇಶಿಕ ನಿರ್ದಿಷ್ಟತೆಯ ಬಗೆಗೆ ಸಂಬಂಧಿಸಿದಂತೆ ಮಾಹಿತಿ ಹೊಂದುವುದು ಅತ್ಯವಶ್ಯಕ. ಸಂತೆಗಳು ನಿರ್ದಿಷ್ಟವಾಗಿ ಒಂದು ಸ್ಥಳದಲ್ಲಿ ವಾರದ ಒಂದು ದಿನ ಸಂತೆಗಳು ನಡೆಯುವುದು ಸರ್ವೆ ಸಾಮಾನ್ಯ. ಆದರೆ ಸಂತೆಗಳಲ್ಲಿ ಪ್ರಾದೇಶಿಕ ನಿರ್ದಿಷ್ಟತೆ ಇರುವುದರ ಜೊತೆಗೆ ಅವರವರ ವ್ಯವಹಾರದ ನಿರ್ದಿಷ್ಟತೆ ಅಥವಾ ಪ್ರತ್ಯೇಕತೆಯೂ ಆ ಸಂತೆಗಳಲ್ಲಿರುವುದು ಕಂಡುಬರುತ್ತದೆ. ಉದಾಹರಣೆಗೆ ಕಾಯಿಪಲ್ಲೆ ಅಥವಾ ತರಕಾರಿ ಮಾರುವವರು ಪ್ರತ್ಯೇಕವಾಗಿ ಒಂದೆಡೆಗೆ ಇರುತ್ತಾರೆ. ಅದರಂತೆಯೇ ಕಿರಾಣಿ ಸಾಮಾನುಗಳನ್ನು ಮಾರುವವರು ಸಹ ಒಂದೆಡೆ ಇರುತ್ತಾರೆ. ಅಲ್ಲದೇ ಬಟ್ಟೆ, ಹಣ್ಣು, ಮಿಠಾಯಿ ಹೀಗೆ ಅನೇಕ ರೀತಿಯ ವಿವಿಧ ವ್ಯಾಪಾರಸ್ಥರು ಬೇರೆ ಬೇರೆಯಾಗಿ ನಿರ್ದಿಷ್ಟ ಸ್ಥಳದಲ್ಲಿರುವುದು ಸಾಮಾನ್ಯವಾಗಿ ಎಲ್ಲಾ ಸಂತೆಗಳಲ್ಲಿ ಕಂಡುಬರುತ್ತದೆ.

ಸಂತೆಗಳ ಗಾತ್ರ ಅಥವಾ ವ್ಯಾಪ್ತಿಯ ಬಗೆಗೆ ಹೇಳುವುದಾದರೆ ಊರಿನ ಕೇಂದ್ರ ಸ್ಥಾನದಲ್ಲಿ ಇಲ್ಲವೇ ಗ್ರಾಮದ ಜನತೆಗೆ ಅನುಕೂಲಕರವಾದ ಸ್ಥಳದಲ್ಲಿ ಸಂತೆಗಳು ನಡೆಯುತ್ತವೆ. ಈ ಸಂತೆಗಳಲ್ಲಿ ರಸ್ತೆಯುದ್ದಕ್ಕೂ ವ್ಯಾಪಾರಸ್ಥರು ತಮ್ಮ ಮಾರಾಟದ ವಸ್ತುಗಳನ್ನು ಮಾರುತ್ತಾರೆ. ಈ ಸಂತೆಗಳ ರಸ್ತೆಗಳು ಜನಜಂಗುಳಿಯಿಂದ ತುಂಬಿಕೊಂಡಿದ್ದು, ಪ್ರಾದೇಶಿಕವಾಗಿ ಕಡಿಮೆ ಎಂದರೆ, ೨೫೦ ಮೀಟರ್ ಸುತ್ತಳತೆಯಿಂದ ಹಿಡಿದು ಒಂದು ಕಿಲೋಮೀಟರ್‌ವರೆಗೂ ವಿಸ್ತೀರ್ಣವನ್ನು ಹೊಂದಿರುವ ಸಂತೆಗಳ ವ್ಯಾಪ್ತಿಯನ್ನು ಗುರುತಿಸಬಹುದು. ಸಂತೆಗಳ ಪ್ರಾದೇಶಿಕತೆಯನ್ನು ಗಮನಿಸಿ ಹೇಳುವುದಾದರೆ, ಗ್ರಾಮೀಣ ಮಟ್ಟದಲ್ಲಿನ ಸಂತೆಗಳು ಕಡಿಮೆ ವ್ಯಾಪ್ತಿಯನ್ನು ಹೊಂದಿದ್ದು, ತಾಲೂಕು ಮತ್ತು ನಗರ ಪ್ರದೇಶಗಳಲ್ಲಿನ ಸಂತೆಗೆ ಅತ್ಯಂತ ವಿಶಾಲವಾದ ಪ್ರದೇಶವನ್ನು ಹೊಂದಿರುತ್ತವೆ. ಜನನಿಬಿಡ ಸ್ಥಳಗಳಾದ ಸಂತೆಗಳು ಹೆಚ್ಚಾಗಿ ಮಾರುಕಟ್ಟೆಗಳನ್ನು ಗ್ರಾಮ ಮಟ್ಟದಲ್ಲಿ ಇಂದಿಗೂ ಹೊಂದಿಲ್ಲದಿರುವುದನ್ನು ನಾವು ಕಾಣುತ್ತೇವೆ. ಗ್ರಾಮೀಣ ಸಂತೆಗಳ ಸ್ಥಿತಿ ಶೋಚನೀಯ. ಆದರೆ ತಾಲೂಕು ಮತ್ತು ಜಿಲ್ಲಾ ಕೇಂದ್ರಗಳಲ್ಲಿನ ಸಂತೆಗಳಿಗೆ ಸರ್ಕಾರಗಳು ಮಾರುಕಟ್ಟೆಗಳನ್ನು ಕಟ್ಟಿಸಿಕೊಟ್ಟಿವೆ. ಗ್ರಾಮೀಣ ಸಂತೆಗಳು ಯಾವುದೇ ರೀತಿಯ ಮಾರುಕಟ್ಟೆಗಳನ್ನು ಹೊಂದಿರದೇ ಲಭ್ಯವಿರುವ ವಿಶಾಲ ಬೀದಿಗಳಲ್ಲಿ ಇಲ್ಲವೇ ವಿಶಾಲವಾದ ಸ್ಥಳದಲ್ಲಿ ಮಣ್ಣಿನ ಮೇಲೆ, ಇಲ್ಲವೇ ನಾಲ್ಕು ಗಾಲಿಯುಳ್ಳ ಚಕ್ರಗಳ ಬಂಡಿಯ ಮೇಲೆ ವ್ಯಾಪಾರ ಮಾಡುವುದನ್ನು ಸಂತೆಗಳಲ್ಲಿ ಕಾಣಲಾಗುತ್ತದೆ.

**೩:೨:೩ ಸಂತೆಗಳಲ್ಲಿನ ಒಟ್ಟು ವ್ಯವಹಾರದ ಪ್ರಮಾಣ**

ಕೃಷಿವಸ್ತುಗಳನ್ನು ಅಥವಾ ಇನ್ನಿತರ ವಸ್ತುಗಳನ್ನು ಉತ್ಪಾದಿಸಿ ವಸ್ತುಗಳನ್ನು ಪೇಟೆಗೆ ಅಥವಾ ಗ್ರಾಮೀಣ ಪ್ರದೇಶಗಳಿಗೆ ಸಾಗಿಸಿ ಅಲ್ಲಿ ಆ ವಸ್ತುಗಳನ್ನು ಕೊಳ್ಳಲು ಸಿದ್ಧರಾಗಿರುವವರಿಗೆ ಮಾರಾಟ ಮಾಡುವುದು, ಕೃಷಿ ಉತ್ಪನ್ನಗಳು ಉತ್ಪನ್ನವಾಗುವುದರಿಂದ ಹಿಡಿದು ಗ್ರಾಹಕರು ಅವುಗಳನ್ನು ಕೊಂಡುಕೊಳ್ಳುವವರೆಗಿನ ಎಲ್ಲಾ ಕಾರ್ಯಚಟುವಟಿಕೆಗಳು ಮಾರುಕಟ್ಟೆ ವ್ಯವಸ್ಥೆಯಲ್ಲಿ ಕಂಡುಬರುತ್ತವೆ. ಈ ಮಾರುಕಟ್ಟೆಗಳು ವಿವಿಧ ರೂಪದಲ್ಲಿ ಕಾಣಸಿಗುತ್ತವೆ. ೧. ಸಂತೆಗಳು, ೨. ಮಂಡಿಗಳು, ೩. ವ್ಯವಸ್ಥಿತ ಮಾರುಕಟ್ಟೆಗಳು. ಈ ೩ ತರಹದ ಮಾರುಕಟ್ಟೆಗಳಲ್ಲೂ ಮಾರುವ ಮತ್ತು ಕೊಳ್ಳುವ ವ್ಯವಹಾರಗಳು ನಡೆಯುತ್ತವೆ. ಆದರೆ ಸಂತೆಗಳಲ್ಲಿನ ಒಟ್ಟು ವ್ಯವಹಾರದ ಹಣದ ಪ್ರಮಾಣವನ್ನು ಅವಲೋಕಿಸಿದಾಗ ಪ್ರಸ್ತುತ ಸ್ಥಿತಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ನಡೆಯುವ ಗ್ರಾಮೀಣ ಮತ್ತು ನಗರ ಪ್ರದೇಶಗಳಿಗೆ ಸಂಬಂಧಪಟ್ಟ ೫೬ ಸಂತೆಗಳಲ್ಲಿ ೨೧ ಸಂತೆಗಳನ್ನು ಗಣನೆಗೆ ತೆಗೆದುಕೊಂಡಾಗ ಈ ಕೆಳಗಿನ ಹಣಕಾಸಿನ ವರ್ಗಾಂತರದಲ್ಲಿ ಹಣದ ವಹಿವಾಟಿನ ಅಂದಾಜು ಅಂಶ ಕಂಡುಬರುತ್ತದೆ.

ಕೋಷ್ಟಕ ೩.೧

ಬಳ್ಳಾರಿ ಜಿಲ್ಲೆಯ ಆಯ್ದ ಸಂತೆಗಳ ಒಟ್ಟು ವ್ಯವಹಾರದ ಪ್ರಮಾಣ

| ಕ್ರ.ಸಂ. | ತಾಲೂಕುಗಳು | ಸಂತೆ ನಡೆಯುವ ಸ್ಥಳ | ಒಟ್ಟು ವ್ಯವಹಾರದ ಪ್ರಮಾಣ (ಲಕ್ಷಗಳಲ್ಲಿ) |
|---|---|---|---|
| ೧. | ಬಳ್ಳಾರಿ | ೧. ಬಳ್ಳಾರಿ | ೪೦ ಕ್ಕೂ ಹೆಚ್ಚು |
| | | ೨. ಕುಡುತಿನಿ | ೧೦-೨೦ |
| | | ೩. ಕುರುಗೋಡು | ೧-೧೦ |
| ೨. | ಹೆಚ್.ಬಿ.ಹಳ್ಳಿ | ೪. ಹೆಚ್.ಬಿ. ಹಳ್ಳಿ | ೩೦-೪೦ |
| | | ೫. ಹನಸಿ | ೧-೧೦ |
| | | ೬. ಹಂಪಸಾಗರ | ೨೦-೩೦ |
| ೩. | ಹೊಸಪೇಟೆ | ೭. ಹೊಸಪೇಟೆ | ೪೦ ಕ್ಕೂ ಹೆಚ್ಚು |
| | | ೮. ಕಂಪ್ಲಿ | ೨೦-೩೦ |
| | | ೯. ಕಮಲಾಪುರ | ೧೦-೨೦ |
| ೪. | ಹೂ. ಹಡಗಲಿ | ೧೦. ಹೂ. ಹಡಗಲಿ | ೪೦ ಕ್ಕೂ ಹೆಚ್ಚು |
| | | ೧೧. ಹೊಳಗುಂದಿ | ೧೦-೨೦ |
| | | ೧೨. ಇಟಗಿ | ೧-೧೦ |
| ೫. | ಕೂಡ್ಲಿಗಿ | ೧೩. ಕೂಡ್ಲಿಗಿ | ೩೦-೪೦ |
| | | ೧೪. ಕೊಟ್ಟೂರು | ೨೦-೩೦ |
| | | ೧೫. ಚಿಕ್ಕ ಜೋಗಿಹಳ್ಳಿ | ೧-೧೦ |
| ೬. | ಸಂಡೂರು | ೧೬. ಸಂಡೂರು | ೪೦ಕ್ಕೂ ಹೆಚ್ಚು |
| | | ೧೭. ತೋರಣಗಲ್ಲು | ೨೦-೩೦ |
| | | ೧೮. ಬಂಡ್ರಿ | ೧೦-೨೦ |
| ೭. | ಸಿರುಗುಪ್ಪ | ೧೯. ಸಿರುಗುಪ್ಪ | ೩೦-೪೦ |
| | | ೨೦. ತೆಕ್ಕಲಕೋಟೆ | ೧೦-೨೦ |
| | | ೨೧. ಸಿರಿಗೇರಿ | ೧-೧೦ |

ವಿಶ್ಲೇಷಣೆ : ಬಳ್ಳಾರಿ ಜಿಲ್ಲೆಯಲ್ಲಿ ನಡೆಯುವ ಸಂತೆಗಳನ್ನು ಆಯ್ದು ಅವಲೋಕಿಸಿದಾಗ ಕಂಡುಬರುವ ಪ್ರಮುಖ ಅಂಶ ಅಥವಾ ಸಂತೆಗಳ ಸ್ವರೂಪವೇನೆಂದರೆ,

೧. ದೊಡ್ಡ ಮೊತ್ತದ ಹಣಕಾಸಿನ ವಹಿವಾಟು ಹೊದಿರುವ ಸಂತೆಗಳು.

೨. ಮಧ್ಯಮ ಮೊತ್ತದ ಹಣಕಾಸಿನ ವಹಿವಾಟು ಹೊದಿರುವ ಸಂತೆಗಳು.

೩. ಕಡಿಮೆ ಮೊತ್ತದ ಹಣಕಾಸಿನ ವಹಿವಾಟು ಹೊಂದಿರುವ ಸಂತೆಗಳು.

* ಇನ್ನುಳಿದಂತೆ ಬಳ್ಳಾರಿ ಜಿಲ್ಲೆಯ ಗ್ರಾಮೀಣ ಭಾಗದಲ್ಲಿ ನಡೆಯುವ ಸಂತೆಗಳು ಅತ್ಯಂತ ಕಡಿಮೆ ಮೊತ್ತದ ಹಣಕಾಸಿನ ವಹಿವಾಟವನ್ನು ಹೊಂದಿರುವ ಸಂತೆಗಳೆಂದು ಪರಿಗಣಿಸಲ್ಪಡುತ್ತವೆ.

ಸಮೀಕ್ಷೆಯ ಮುಖಾಂತರ ಸಂದರ್ಶನದ ಮುಖಾಂತರ ಕಂಡುಕೊಂಡ ಹಣಕಾಸಿನ ಮೊತ್ತದ ವಹಿವಾಟವನ್ನು ಈ ಕೆಳಗಿನ ವರ್ಗಾಂತರಗಳಲ್ಲಿ ಕಾಣುತ್ತೇವೆ.

೧. ೪೦ ಲಕ್ಷಕ್ಕೂ ಹೆಚ್ಚಿನ ಮೊತ್ತದ ವಹಿವಾಟು ನಡೆಸುವ ಸಂತೆಗಳು.

೨. ೩೦-೪೦ ಲಕ್ಷ ಮೊತ್ತದ ವಹಿವಾಟು ನಡೆಸುವ ಸಂತೆಗಳು.

೩. ೨೦-೩೦ ಲಕ್ಷ ಮೊತ್ತದ ವಹಿವಾಟು ನಡೆಸುವ ಸಂತೆಗಳು.

೪. ೧೦-೨೦ ಲಕ್ಷ ಮೊತ್ತದ ವಹಿವಾಟು ನಡೆಸುವ ಸಂತೆಗಳು.

೫. ೧-೧೦ ಲಕ್ಷ ಮೊತ್ತದ ವಹಿವಾಟು ನಡೆಸುವ ಸಂತೆಗಳು.

* ಈ ೧ರಿಂದ ೧೦ ಲಕ್ಷ ಮೊತ್ತದ ವಹಿವಾಟು ನಡೆಸುವ ಸಂತೆಗಳು ಗ್ರಾಮೀಣ ಮಟ್ಟದಲ್ಲಿರುವೆ. ಕುರುಗೋಡು, ಹನಸಿ, ಇಟಗಿ, ಚಿಕ್ಕಜೋಗಿಹಳ್ಳಿ, ಸಿರಿಗೇರಿ ಸಂತೆಗಳಾಗಿ ಕಂಡುಬರುತ್ತವೆ.

* ೧೦-೨೦ ಲಕ್ಷ ಮೊತ್ತದ ವಹಿವಾಟು ನಡೆಸುವ ಸಂತೆಗಳು ಗ್ರಾಮೀಣ ಪ್ರದೇಶಗಳಿಗಿಂತ ಸ್ವಲ್ಪ ಹೆಚ್ಚು ಮುಂದುವರಿದ ಜನಸಂದಣಿಯ ಸ್ಥಳವಾಗಿ ಕಂಡುಬರುತ್ತವೆ. ಅವುಗಳೆಂದರೆ, ಕುಡುತಿನಿ, ಕಮಲಾಪುರ, ಹೊಳಗುಂದಿ, ಬಂಡ್ರಿ, ತೆಕ್ಕಲಕೋಟೆ ಸಂತೆಗಳಾಗಿವೆ.

* ೨೦-೩೦ ಲಕ್ಷ ಮೊತ್ತದ ವಹಿವಾಟು ನಡೆಸುವ ಸಂತೆಗಳಾಗಿ ಕಂಡುಬರುವ ಸ್ಥಳ ಅಥವಾ ಊರುಗಳೆಂದರೆ, ಹಂಪಸಾಗರ, ಕಂಪ್ಲಿ, ಕೊಟ್ಟೂರು, ತೋರಣಗಲ್ಲು.

* ೩೦-೪೦ ಲಕ್ಷ ಮೊತ್ತದ ವಹಿವಾಟು ನಡೆಸುವ ಸಂತೆಗಳಾಗಿ ಕಂಡುಬರುವ ಸ್ಥಳಗಳಾಗಿ ತಾಲೂಕುಕೇಂದ್ರಗಳು ಕಂಡುಬರುತ್ತವೆ. ಅವುಗಳು ಹೆಚ್.ಬಿ.ಹಳ್ಳಿ, ಕೂಡ್ಲಿಗಿ, ಸಿರುಗುಪ್ಪಗಳಾಗಿವೆ.

* ೪೦ ಲಕ್ಷಕ್ಕೂ ಹೆಚ್ಚಿನ ಮೊತ್ತದ ವಹಿವಾಟು ನಡೆಸುವ ಸಂತೆಗಳಾಗಿ ಕಂಡುಬರುವ ಪ್ರದೇಶಗಳೆಂದರೆ ಬಳ್ಳಾರಿ, ಹೊಸಪೇಟೆ, ಹೂವಿನ ಹಡಗಲಿ, ಸಂಡೂರುಗಳು ಕಂಡುಬರುತ್ತವೆ.

ಈ ಮೇಲಿನ ವಿಶ್ಲೇಷಣೆಯಿಂದ ಕಂಡುಕೊಳ್ಳುವ ಪ್ರಮುಖ ಅಂಶವೆಂದರೆ ಜನಸಂಖ್ಯೆ ಜನಸಂಪರ್ಕವನ್ನು ಹೊಂದಿರುವ, ವಾಹನಸೌಲಭ್ಯ ಮತ್ತು ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ಪ್ರದೇಶಗಳಲ್ಲಿ ಸಂತೆಗಳ ವಹಿವಾಟಿನ ಮೊತ್ತ ಹೆಚ್ಚಿನ ಪ್ರಮಾಣದಲ್ಲಿರುವ ಸಂಗತಿ ಸ್ಪಷ್ಟವಾಗುತ್ತದೆ.

ಕೋಷ್ಟಕ - ೩.೨

ಬಳ್ಳಾರಿ ಜಿಲ್ಲೆಯ ಆಯ್ದ ಸಂತೆಗಳಲ್ಲಿನ ಸರಕು, ಸೇವೆ, ಸಾಂಸ್ಕೃತಿಕ ಸರಕುಗಳ ಪ್ರಮಾಣ (ಸಾವಿರಗಳಲ್ಲಿ)

| | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ | ೧೬ | ೧೭ |
|---|---|---|---|---|---|---|---|---|---|---|---|---|---|---|---|---|---|
| ನಡೆಯುವ ಸಂತೆಯ ಸ್ಥಳಗಳು | ತರಕಾರಿ | ಬಟ್ಟೆ | ಹೂಹಣ್ಣು | ಮಾಂಸ ಮೀನು | ಅಲಂಕಾರಿಕ ವಸ್ತುಗಳು | ಪ್ಲಾಸ್ಟಿಕ್ ಸಾಮಾನು | ಮಸಾಲೆ ದಿನಸಿ | ಧಾನ್ಯ | ತಂಬಾಕು | ಕೃಷಿ ಸಲಕರಣೆ | ಒಣ ಮೆಣಸಿನಕಾಯಿ | ತೆಂಗು ವ್ಯಾಪಾರ | ಚಾಪೆ/ಬುಟ್ಟಿ ವ್ಯಾಪಾರ | ಪಾದರಕ್ಷೆ ವ್ಯಾಪಾರ | ಮಿಠಾಯಿ ವ್ಯಾಪಾರ | ಇತರೆ | ಒಟ್ಟು |
| ೧. ಬಳ್ಳಾರಿ | ೫೦೦ | ೧೫೦ | ೧೦೦ | ೧೦೦ | ೩೦೦ | ೪೦೦ | ೨೫೦ | ೮೦೦ | ೧೦೦ | ೧೫೦ | ೧೦೦ | ೫೦ | ೧೦ | ೩೦ | ೨೦ | ೧೨೦೦ | ೪೨೫೦ |
| ೨. ಕುಡುತಿನಿ | ೨೦೦ | ೭೫ | ೭೫ | ೨೫ | ೭೫ | ೧೦೦ | ೧೦೦ | ೨೦೦ | ೨೫ | ೧೦೦ | ೨೫ | ೧೦ | ೦೩ | ೧೦ | ೧೫ | ೫೦೦ | ೧೪೪೮ |
| ೩. ಕುರುಗೋಡು | ೫೦ | ೧೦ | ೧೦ | ೧೦ | ೦೫ | ೧೦ | ೦೮ | ೩೦ | -- | ೦೫ | ೦೮ | ೦೨ | ೦೪ | ೦೨ | ೧೦ | ೧೦೦ | ೨೬೩ |
| ೪. ಹೆಚ್.ಬಿ.ಹಳ್ಳಿ | ೨೫೦ | ೫೦ | ೫೦ | ೭೫ | ೧೫೦ | ೩೦೦ | ೧೭೫ | ೬೫೦ | ೭೫ | ೧೨೫ | ೬೦ | ೪೦ | ೧೦ | ೨೦ | ೧೭ | ೧೦೦ | ೩೦೪೭ |
| ೫. ಹನಸಿ | ೬೦ | ೧೦ | ೧೦ | ೧೦ | ೧೦ | ೧೫ | ೧೨ | ೨೦ | ೦೨ | ೦೭ | ೦೬ | ೦೧.೫ | ೦೬ | ೦೪ | ೦೮ | ೭೫ | ೨೫೬.೫ |
| ೬. ಹಂಪಸಾಗರ | ೩೦೦ | ೯೦ | ೮೫ | ೪೦ | ೮೫ | ೧೫೦ | ೧೮೦ | ೨೩೦ | ೫೦ | ೯೦ | ೩೫ | ೩.೨ | ೦೫ | ೧೫ | ೨೨ | ೮೦೦ | ೨೨೦೯ |
| ೭. ಹೊಸಪೇಟೆ | ೫೦೦ | ೧೫೦ | ೧೩೨ | ೧೪೩ | ೨೬೫ | ೩೪೯ | ೨೩೪ | ೭೯೫ | ೧೫೦ | ೧೭೫ | ೧೨೨ | ೫೩ | ೧೧ | ೨೯.೫ | ೨೧.೨ | ೧೩೦೦ | ೪೪೬೮.೭ |
| ೮. ಕಂಪ್ಲಿ | ೩೩೭ | ೧೧೨ | ೮೭ | ೪೧ | ೯೦ | ೧೭೦ | ೧೯೫ | ೨೩೫ | ೭೦ | ೯೫ | ೩೨ | ೩೧ | ೦೬ | ೧೨ | ೨೩ | ೯೦೦ | ೨೪೩೬ |
| ೯. ಕಮಲಾಪುರ | ೨೨೦ | ೬೦ | ೭೭ | ೩೦ | ೮೦ | ೯೫ | ೧೦೦ | ೨೧೦ | ೧೦ | ೧೨೦ | ೩೦ | ೨೦ | ೦೨ | ೧೨ | ೧೫ | ೭೦೦ | ೧೭೦೦ |
| ೧೦. ಇಟಗಿ | ೬೫ | ೧೨ | ೧೩ | ೧೧ | ೦೪ | ೧೨ | ೧೦ | ೩೩ | ೦೨ | ೦೬ | ೦೭ | ೧೧.೨ | ೦೪.೮ | ೦೩.೧ | ೧೧.೨ | ೧೦೦ | ೩೦೫.೩ |
| ೧೧. ಹೋಳಗುಂದಿ | ೨೯೫ | ೯೫ | ೯೦ | ೪೫ | ೧೦೦ | ೧೫೦ | ೧೭೫ | ೨೨೫ | ೬೦ | ೯೫ | ೩೭ | ೩೩ | ೦೮ | ೧೮ | ೨೨ | ೭೦೦ | ೨೧೪೮ |
| ೧೨. ಹೂ.ಹಡಗಲಿ | ೬೦೦ | ೧೭೦ | ೧೨೦ | ೯೦ | ೩೧೦ | ೩೮೫ | ೩೦೦ | ೭೮೦ | ೯೬ | ೧೬೦ | ೧೧೦ | ೬೦ | ೧೨ | ೩೫ | ೨೧ | ೧೨೦೦ | ೪೪೪೯ |
| ೧೩. ಚಿಕ್ಕಜೋಗಿಹಳ್ಳಿ | ೬೨ | ೧೨ | ೧೧.೫ | ೦೯.೭ | ೦೬ | ೦೯.೯ | ೦೯ | ೩೨ | ೧೧ | ೦೫.೨ | ೦೮.೩ | ೧೧.೨ | ೦೩.೫ | ೦೩ | ೧೨ | ೮೦ | ೨೬೬.೩ |
| ೧೪. ಕೊಟ್ಟೂರು | ೩೧೧ | ೧೦೨ | ೯೮ | ೪೨ | ೯೩ | ೧೩೨ | ೨೦೦ | ೨೪೭ | ೭೮ | ೧೦೦ | ೩೯ | ೩೫ | ೦೯ | ೧೪ | ೨೨ | ೮೦೦ | ೨೩೨೨ |
| ೧೫. ಕೂಡ್ಲಿಗಿ | ೨೭೦ | ೬೦ | ೬೫ | ೭೮ | ೧೫೮ | ೩೨೦ | ೧೮೫ | ೬೭೫ | ೮೦ | ೧೩೫ | ೬೮ | ೪೨ | ೧೨ | ೨೩ | ೧೯ | ೧೧೦೦ | ೩೩೦೦ |
| ೧೬. ಬಂಡ್ರಿ | ೨೨೨ | ೮೦ | ೬೮ | ೨೩ | ೭೭ | ೧೧೦ | ೧೦೫ | ೧೮೫ | ೩೦ | ೧೨೨ | ೯೦ | ೧೧ | ೦೪ | ೧೧ | ೧೩ | ೬೦೦ | ೧೬೮೧ |
| ೧೭. ಸಂಡೂರು | ೫೫೦ | ೧೭೫.೫ | ೧೨೫.೨ | ೧೩.೨ | ೩೨೦ | ೪೧೦ | ೨೯೫ | ೭೯೮ | ೧೧೧ | ೧೬೫ | ೧೦೫ | ೬೫ | ೧೨ | ೩೩ | ೨೨ | ೧೧೦೦ | ೪೪೨೨ |
| ೧೮. ತೋರಣಗಲ್ಲು | ೨೨೯ | ೧೦೦ | ೯೨ | ೪೨ | ೯೦ | ೧೬೦ | ೧೮೦ | ೨೩೫ | ೬೦ | ೯೩ | ೩೩ | ೩೪ | ೦೬ | ೧೬ | ೧೦ | ೭೦೦ | ೨೧೪೦ |
| ೧೯. ಸಿರುಗುಪ್ಪ | ೨೬೦ | ೬೫ | ೬೦ | ೯೦ | ೧೬೦ | ೨೯೫ | ೧೮೨ | ೬೫೫ | ೭೨ | ೧೩೦ | ೬೨ | ೪೭ | ೧೧ | ೨೨ | ೧೯ | ೯೦೦ | ೩೦೩೦ |
| ೨೦. ಸಿರಗೇರಿ | ೬೦ | ೧೨ | ೧೧ | ೧೦.೫ | ೦೬ | ೧೦.೨ | ೦೯ | ೩೨ | ೧೧ | ೦೪.೫ | ೦೯ | ೧೧.೨ | ೦೪ | ೦೨ | ೧೧ | ೫೦ | ೩೩೩.೪ |
| ೨೧. ತೆಕ್ಕಲಕೋಟೆ | ೨೦೦ | ೬೦ | ೬೨ | ೨೮ | ೭೬ | ೯೮ | ೧೦೦ | ೧೯೦ | ೨೮ | ೧೨೨ | ೨೨ | ೧೧ | ೦೪ | ೧೨ | ೧೬ | ೩೦೦ | ೧೩೨೯ |
| ಒಟ್ಟು | ೫೫೯೧ | ೧೬೫೦.೫ | ೧೪೪೧.೭ | ೧೦೭೫.೨ | ೨೪೬೦ | ೩೭೨೧.೧ | ೩೦೦೪ | ೭೨೫೭ | ೧೧೦೦ | ೨೦೦೪.೭ | ೧೦೦೮.೩ | ೫೮೧.೧ | ೧೪೭.೩ | ೩೨೬.೬ | ೩೪೯.೪ | ೧೩೩೦೫ | ೪೫೮೦೪.೨ |

ಆಧಾರ : ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿಯನ್ನು ಆಧರಿಸಿದೆ.

**ಬಳ್ಳಾರಿ ಜಿಲ್ಲೆಯ ಕೆಲವು ಆಯ್ದು ಸಂತೆಗಳಲ್ಲಿನ ಸರಕು, ಸೇವೆ, ಸಾಂಸ್ಕೃತಿಕ ಸರಕುಗಳ ಪ್ರಮಾಣದ ಕೋಷ್ಟಕದ ವಿಶ್ಲೇಷಣೆ**

ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ ಸಂತೆಗಳು ನಡೆಯುವ ೫೬ ಸ್ಥಳಗಳಲ್ಲಿ ಪ್ರತಿ ತಾಲೂಕಿಗೆ ೩ರಂತೆ ಗ್ರಾಮೀಣ, ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿನ ಕೆಲವು ಆಯ್ದು ೨೧ ಸಂತೆಗಳ ಪೈಕಿ, ಆಯಾ ಸಂತೆಗಳಲ್ಲಿ ವಿವಿಧ ಸರಕು, ಸೇವೆ ಮತ್ತು ಸಾಂಸ್ಕೃತಿಕ ಸರಕುಗಳ ಪ್ರಮಾಣವನ್ನು ಅವಲೋಕಿಸಿದಾಗ, ಯಾವ ಯಾವ ಸರಕಗಳು ಯಾವ ಯಾವ ಪ್ರದೇಶದಲ್ಲಿ ಹೆಚ್ಚಾಗಿ ಮಾರಾಟವಾಗುತ್ತವೆ ಮತ್ತು ಯಾವ ಯಾವ ಸರಕುಗಳು ಯಾವ ಯಾವ ಸಂತೆಗಳಲ್ಲಿ ಹೆಚ್ಚಿನ ಬೇಡಿಕೆಯನ್ನು ಹೊಂದಿದೆ ಎಂಬುದರ ಪ್ರಸ್ತುತ ಚಿತ್ರಣವನ್ನು ಈ ಮೊದಲೇ ತಿಳಿಸಿದ ಕೋಷ್ಟಕದಿಂದ ತಿಳಿಯಬಹುದು. ಅದರ ವಿಶ್ಲೇಷಣೆಗೆ ಈ ಕೆಳಗಿನಂತಿದೆ.

* ಬಳ್ಳಾರಿಯ ಸಂತೆಯಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಧಾನ್ಯವು ೮ ಲಕ್ಷ ರೂಪಾಯಿಯ ವಹಿವಾಟು ನಡೆಸಿ ಪ್ರಥಮ ಸ್ಥಾನದಲ್ಲಿದ್ದರೆ, ನಂತರದ ಸ್ಥಾನದಲ್ಲಿ ತರಕಾರಿಯು ೫ ಲಕ್ಷ ರೂಪಾಯಿ ವಹಿವಾಟಿಗೆ ಒಳಪಟ್ಟಿದೆ. ಕೊನೆಯ ಸ್ಥಾನದಲ್ಲಿ ಚಾಪೆ ಮತ್ತು ಬಿದರು ವಹಿವಾಟಿಗೆ ಒಳಪಟ್ಟಿದೆ. ಇತರೆ ಸರಕುಗಳು ಸರಕು ೧೦ ಸಾವಿರ ರೂಪಾಯಿ ವಹಿವಾಟಿಗೆ ಒಳಪಟ್ಟು, ಇತರೆ ಸರಕುಗಳು ೧೨ ಲಕ್ಷ ರೂಪಾಯಿಯ ವಹಿವಾಟಿಗೆ ಒಳಪಟ್ಟು, ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ಕುಡುತಿನಿಯ ಸಂತೆಯಲ್ಲಿ ಧಾನ್ಯ ಮತ್ತು ತರಕಾರಿ ಪದಾರ್ಥಗಳು ತಲಾ ೨ ಲಕ್ಷ ರೂಪಾಯಿಗಳ ವಹಿವಾಟು ನಡೆಸಿ ಪ್ರಥಮ ಸ್ಥಾನದಲ್ಲಿದ್ದಾರೆ, ನಂತರದ ಸ್ಥಾನದಲ್ಲಿ ಪ್ಲಾಸ್ಟಿಕ್ ಪದಾರ್ಥಗಳು ೧ ಲಕ್ಷ ರೂಪಾಯಿ ವಹಿವಾಟು ನಡೆಸಿ, ಕೊನೆಯ ಸ್ಥಾನದಲ್ಲಿ ಚಾಪೆ ಬಿದಿರುಗಳು ೩ ಸಾವಿರ ರೂಪಾಯಿಯ ವಹಿವಾಟಿಗೆ ಒಳಪಟ್ಟು, ಇತರೆ ಪದಾರ್ಥಗಳು ೫ ಲಕ್ಷ ರೂಪಾಯಿ ವಹಿವಾಟಿಗೆ ಒಳಗಾಗಿ ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ಕುರುಗೋಡು ಸಂತೆಯಲ್ಲಿ ತರಕಾರಿಯು ೫೦ ಸಾವಿರ ರೂಪಾಯಿಗಳ ವಹಿವಾಟನ್ನು ಪಡೆದು ಪ್ರಥಮ ಸ್ಥಾನದಲ್ಲಿದ್ದಾರೆ. ನಂತರ ಸ್ಥಾನದಲ್ಲಿ ಧಾನ್ಯದ ವಹಿವಾಟು ೩೦ ಸಾವಿರ ರೂ.ಗೆ ಒಳಪಟ್ಟು, ಕೊನೆಯ ಸ್ಥಾನದಲ್ಲಿ ತೆಂಗಿನಕಾಯಿ ವ್ಯಾಪಾರ ಕೇವಲ ೨ ಸಾವಿರ ರೂ. ವಹಿವಾಟಿಗೆ ಒಳಪಟ್ಟಿದೆ. ಆದರೆ, ಎಲ್ಲಕ್ಕಿಂತ ಪ್ರಥಮ ಸ್ಥಾನದಲ್ಲಿ ಒಟ್ಟಾರೆ ಇತರೆ ಪದಾರ್ಥಗಳು ೧ ಲಕ್ಷ ರೂ. ವಹಿವಾಟಿಗೆ ಒಳಪಟ್ಟಿದೆ.

* ಹಗರಿಬೊಮ್ಮನಹಳ್ಳಿ ಸಂತೆಯಲ್ಲಿ ಧಾನ್ಯ ಪದಾರ್ಥವು ೬.೫ ಲಕ್ಷ ರೂ.ಗಳ ವಹಿವಾಟು ನಡೆಸಿ ಪ್ರಥಮ ಸ್ಥಾನದಲ್ಲಿದ್ದಾರೆ. ನಂತರದ ಸ್ಥಾನದಲ್ಲಿ ಪ್ಲಾಸ್ಟಿಕ್ ಸರಕುಗಳು ೩ ಲಕ್ಷ ರೂ. ವಹಿವಾಟು ನಡೆಸಿ ದ್ವಿತೀಯ ಸ್ಥಾನದಲ್ಲಿದ್ದು, ಕೊನೆಯ ಸ್ಥಾನದಲ್ಲಿ ಚಾಪೆ ಮತ್ತು ಬಿದಿರು ೧೦ ಸಾವಿರ ರೂ. ವಹಿವಾಟಿಗೆ ಒಳಪಟ್ಟು, ಕೊನೆಯ ಸ್ಥಾನದಲ್ಲಿದೆ.

* ಹನಸಿ ಸಂತೆಯಲ್ಲಿ ತರಕಾರಿ ಸರಕು ೬೦ ಸಾವಿರ ರೂ. ವಹಿವಾಟಿಗೆ ಒಳಪಟ್ಟು, ಪ್ರಥಮ ಸ್ಥಾನದಲ್ಲಿದ್ದರೆ, ತೆಂಗು ವ್ಯಾಪಾರವು ೧.೫ ಸಾವಿರ ರೂ. ವಹಿವಾಟಿಗೆ ಒಳಪಟ್ಟು ಕೊನೆಯ

ಸ್ಥಾನದಲ್ಲಿದೆ. ಒಟ್ಟಾರೆ ಇತರೆ ಪದಾರ್ಥಗಳು ೭೫ ಸಾವಿರ ರೂ.ಗಳ ವಹಿವಾಟಿಗೆ ಒಳಪಟ್ಟು, ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ಹಂಪಸಾಗರ ಸಂತೆಯಲ್ಲಿ ತರಕಾರಿ ಸರಕು ೩ ಲಕ್ಷ ರೂ.ಗಳ ವಹಿವಾಟಿಗೆ ಒಳಪಟ್ಟು, ದ್ವಿತೀಯ ಸ್ಥಾನದಲ್ಲಿದ್ದರೆ, ಚಾಪೆ ಬಿದಿರು, ಸರಕು ೫ ರೂ.ಗಳ ವಹಿವಾಟಿದ್ದು ಕೊನೆಯ ಸ್ಥಾನದಲ್ಲಿದೆ. ಆದರೆ, ಒಟ್ಟಾರೆ ಇತರ ಎಲ್ಲ ಪದಾರ್ಥಗಳು ೮ ಲಕ್ಷ ರೂ.ಗಳ ವಹಿವಾಟಿಗೆ ಒಳಗಾಗಿ ಪ್ರಥಮ ಸ್ಥಾನದಲ್ಲಿದೆ.

* ಕಂಪ್ಲಿ ಸಂತೆಯಲ್ಲಿ ತರಕಾರಿ ವಹಿವಾಟು ೩ ಲಕ್ಷ ೩೭ ಸಾವಿರ ರೂ.ಗಳ ವಹಿವಾಟಿದೆ. ಇದು ದ್ವಿತೀಯ ಸ್ಥಾನದಲ್ಲಿದ್ದು, ಚಾಪೆ, ಬಿದಿರು ಸರಕು ೬೦೦ ರೂ. ವಹಿವಾಟು ಕೊನೆಯ ಸ್ಥಾನದಲ್ಲಿದೆ. ಇತರೆ ಒಟ್ಟಾರೆ ಪದಾರ್ಥಗಳು ೯ ಲಕ್ಷ ರೂ. ವಹಿವಾಟಿಗೆ ಒಳಗಾಗಿ ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ಕಮಲಾಪುರ ಸಂತೆಯಲ್ಲಿ ತರಕಾರಿ ೨ ಲಕ್ಷ ೨೦ ಸಾವಿರಗಳ ವಹಿವಾಟಿಗೆ ಒಳಪಡುತ್ತದೆ. ಇದು ದ್ವಿತೀಯ ಸ್ಥಾನದಲ್ಲಿದ್ದು, ಚಾಪೆ, ಬಿದಿರು ವ್ಯಾಪಾರವು ೬ ಸಾವಿರ ರೂ. ವಹಿವಾಟಿಗೆ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ. ಇತರೆ ವಹಿವಾಟು ೯ ಲಕ್ಷ ರೂ.ಗಳಿಗೆ ಒಳಪಟ್ಟು ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ಇಟಗಿ ಸಂತೆಯಲ್ಲಿ ತರಕಾರಿ ೬೫ ಸಾವಿರ ರೂ.ಗಳ ವಹಿವಾಟಿಗೆ ಒಳಪಟ್ಟು ಪ್ರಥಮ ಸ್ಥಾನದಲ್ಲಿದ್ದರೆ, ತೆಂಗು ೧.೨ ಸಾವಿರ ರೂ.ಗಳ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ.

* ಹೊಳಗುಂದಿ ಸಂತೆಯಲ್ಲಿ ೨ ಲಕ್ಷ ೯೫ ರೂ. ತರಕಾರಿ ವಹಿವಾಟಿಗೆ ಒಳಪಟ್ಟು ಪ್ರಥಮ ಸ್ಥಾನದಲ್ಲಿದ್ದರೆ, ಚಾಪೆ, ಬಿದಿರು ೮ ಸಾವಿರ ರೂ. ವಹಿವಾಟಿಗೆ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ. ಇತರೆ ಸರಕು ವಹಿವಾಟು ೧ ಲಕ್ಷ ರೂ.ಗಳ ವಹಿವಾಟಿಗೆ ಒಳಪಟ್ಟು ದ್ವಿತೀಯ ಸ್ಥಾನದಲ್ಲಿದೆ.

* ಹೂ. ಹಡಗಲಿ ಸಂತೆಯಲ್ಲಿ ಧಾನ್ಯವು ೭ ಲಕ್ಷ ೮೦ ಸಾವಿರ ರೂ. ವಹಿವಾಟಿಗೆ ಒಳಪಟ್ಟು ಪ್ರಥಮ ಸ್ಥಾನದಲ್ಲಿದ್ದರೆ, ಚಾಪೆ, ಬಿದಿರು ೧೨ ಸಾವಿರ ರೂ.ಗಳ ವಹಿವಾಟಿಗೆ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ. ಇತರೆ ಪದಾರ್ಥಗಳ ವಹಿವಾಟು ೭ ಲಕ್ಷ ರೂ. ವಹಿವಾಟಿಗೆ ಒಳಪಟ್ಟು ದ್ವಿತೀಯ ಸ್ಥಾನದಲ್ಲಿದೆ.

* ಜೋಗಿಹಳ್ಳಿ ಸಂತೆಯಲ್ಲಿ ತರಕಾರಿ ೬೨ ಸಾವಿರ ರೂ.ಗಳ ವಹಿವಾಟಿಗೆ ಒಳಪಟ್ಟು ದ್ವಿತೀಯ ಸ್ಥಾನದಲ್ಲಿದ್ದರೆ, ತಂಬಾಕು ೧ ಸಾವಿರ ರೂ.ಗಳ ವಹಿವಾಟಿಗೆ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ. ಇತರೆ ಪದಾರ್ಥಗಳ ಒಟ್ಟಾರೆ ವಹಿವಾಟು ೮೦ ಸಾವಿರ ರೂ.ಗಳಿದ್ದು ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ಕೊಟ್ಟೂರು ಸಂತೆಯಲ್ಲಿ ತರಕಾರಿ ೩ ಲಕ್ಷ ೧೧ ಸಾವಿರ ರೂ.ಗಳ ವಹಿವಾಟಿಗೆ ಒಳಪಟ್ಟು, ದ್ವಿತೀಯ ಸ್ಥಾನದಲ್ಲಿದ್ದಾರೆ, ಚಾಪೆ, ಬಿದಿರು, ೯ ಸಾವಿರ ರೂ.ಗಳ ವಹಿವಾಟಿಗೆ ಒಳಪಟ್ಟು, ಕೊನೆಯ ಸ್ಥಾನದಲ್ಲಿದೆ. ಇತರೆ ಪದಾರ್ಥಗಳ ಒಟ್ಟಾರೆ ವಹಿವಾಟು ೮ ಲಕ್ಷ ರೂ.ಗಳಿದ್ದು ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ಕೂಡ್ಲಿಗಿ ಸಂತೆಯಲ್ಲಿ ಧಾನ್ಯವು ೬.೭೫ ಲಕ್ಷ ರೂ.ಗಳ ವಹಿವಾಟು ನಡೆದು ದ್ವಿತೀಯ ಸ್ಥಾನದಲ್ಲಿದ್ದರೆ, ಮಿಠಾಯಿ ವಹಿವಾಟು ೧೯ ಸಾವಿರ ರೂ.ಗಳ ವಹಿವಾಟು ನಡೆಸದು ಕೊನೆಯ ಸ್ಥಾನದಲ್ಲಿದೆ. ಇತರ ಪದಾರ್ಥ ೧೧ ಲಕ್ಷ ರೂ. ವಹಿವಾಟಿನಿದ ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ಬಂಡ್ರಿ ಸಂತೆಯಲ್ಲಿ ಧಾನ್ಯವು ೨ ಲಕ್ಷ ರೂ. ವಹಿವಾಟಿಗೆ ಒಳಪಟ್ಟು ದ್ವಿತೀಯ ಸ್ಥಾನದಲ್ಲಿದ್ದರೆ. ಚಾಪೆ, ಬಿದಿರು ೪ ಸಾವಿರ ರೂ. ವಹಿವಾಟಿಗೆ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ. ಇತರೆ ವಹಿವಾಟು ೬ ಲಕ್ಷ ರೂ.ಗೆ ಒಳಪಟ್ಟು ಎಲ್ಲದಕ್ಕಿಂತಲೂ ಪ್ರಥಮ ಸ್ಥಾನದಲ್ಲಿದೆ.

* ಸಂಡೂರು ಸಂತೆಯಲ್ಲಿ ತರಕಾರಿ ೫.೫೦ ಲಕ್ಷ ರೂ. ವಹಿವಾಟಿಗೆ ಒಳಪಟ್ಟ ದ್ವಿತೀಯ ಸ್ಥಾನದಲ್ಲಿದ್ದರೆ, ಚಾಪೆ, ಬಿದಿರು, ಸರಕು ೧೨ ಸಾವಿರ ರೂ.ಗೆ ವಹಿವಾಟಿಗೆ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ. ಇತರೆ ವಹಿವಾಟು ೧೧ ಲಕ್ಷ ರೂ. ವಹಿವಾಟಿಗೆ ಒಳಪಟ್ಟು ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ತೋರಣಗಲ್ಲು ಸಂತೆಯಲ್ಲಿ ತರಕಾರಿ ೨.೭೯ ಲಕ್ಷ ರೂ. ವಹಿವಾಟಿಗೆ ಒಳಪಟ್ಟು ದ್ವಿತೀಯ ಸ್ಥಾನದಲ್ಲಿದ್ದರೆ, ಚಾಪೆ, ಬಿದಿರು ಪದಾರ್ಥವು ೬ ಸಾವಿರ ವಹಿವಾಟಿಗೆ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ. ಇತರೆ ವಹಿವಾಟು ೭ ಲಕ್ಷ ರೂ. ಒಳಪಟ್ಟು ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ಸಿರುಗುಪ್ಪ ಸಂತೆಯಲ್ಲಿ ಧಾನ್ಯ ೬.೫೫ ಲಕ್ಷ ವಹಿವಾಟಿಗೆ ಒಳಪಟ್ಟು ದ್ವಿತೀಯ ಸ್ಥಾನದಲ್ಲಿದ್ದರೆ, ಬಚಾಪೆ, ಬಿದಿರು ೧೧ ಸಾವಿರ ರೂ.ಗೆ ವಹಿವಾಟಿಗೆ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ. ಇತರೆ ವಹಿವಾಟು ೯ ಲಕ್ಷ ರೂ. ಒಳಪಟ್ಟು ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ಸಿರಗೇರಿ ಸಂತೆಯಲ್ಲಿ ತರಕಾರಿ ೬೦ ಸಾವಿರ ರೂ. ವಹಿವಾಟಿಗೆ ಒಳಪಟ್ಟು ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದ್ದರೆ, ತಂಬಾಕು ೧ ಸಾವಿರ ರೂ. ವಹಿವಾಟಿಗೆ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ.

* ತೆಕ್ಕಲಕೋಟೆ ಸಂತೆಯಲ್ಲಿ ತರಕಾರಿ ೨ ಲಕ್ಷ ರೂ. ವಹಿವಾಟಿಗೆ ಒಳಪಟ್ಟು ದ್ವಿತೀಯ ಸ್ಥಾನದಲ್ಲಿದ್ದರೆ, ಚಾಪೆ, ಬಿದಿರು ೪ ಸಾವಿರ ರೂ.ಗಳ ವಹಿವಾಟಿಗೆ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ. ಇತರೆ ವಹಿವಾಟು ೩ ಲಕ್ಷ ರೂ.ಗಳಿಗೆ ಒಳಪಟ್ಟು ಎಲ್ಲದಕ್ಕಿಂತ ಪ್ರಥಮ ಸ್ಥಾನದಲ್ಲಿದೆ.

* ಒಟ್ಟಾರೆಯಾಗಿ ನೋಡುವುದಾದರೆ, ಬಳ್ಳಾರಿಯ ಜಿಲ್ಲೆಯ ಸಂತೆಗಳಲ್ಲಿ ಧಾನ್ಯವು ೭೨.೫೭ ಲಕ್ಷ ರೂ.ಗಳ ವಹಿವಾಟಿಗೆ ಒಳಪಟ್ಟು ಪ್ರಥಮ ಸ್ಥಾನದಲ್ಲಿದ್ದರೆ, ಚಾಪೆ, ಬಿದಿರು, ೧೪೩.೩ ಸಾವಿರ ರೂ.ಗಳ ವಹಿವಾಟಿಗೆ ಒಳಪಟ್ಟು ಕೊನೆಯ ಸ್ಥಾನದಲ್ಲಿದೆ.

* ಮೇಲಿನ ಮಾಹಿತಿಯನ್ನು ನೋಡಿದರೆ ಬಳ್ಳಾರಿ ಜಿಲ್ಲೆಯಲ್ಲಿ ಧಾನ್ಯವು ಪ್ರಮುಖವಾಗಿ ಬೇಡಿಕೆಯಿರುವ ಪದಾರ್ಥವಾಗಿದ್ದು, ತರಕಾರಿ ದ್ವಿತೀಯ ಸ್ಥಾನದ ಬೇಡಿಕೆಯಿರುವ ಸರಕು / ಪದಾರ್ಥವಾಗಿದೆ.

- ಈ ಮೇಲಿನ ಎಲ್ಲ ಸರಕುಗಳ / ಪದಾರ್ಥಗಳ ಮಾಹಿತಿಯಲ್ಲಿ ಸ್ವತಃ ಸಂದರ್ಶನ ಮಾಡಿ, ಅವಲೋಕಿಸಿ, ಸಮೀಕ್ಷಿಸಿ, ಸ್ಥಳೀಯ ಸಂಸ್ಥೆಗಳಾದ ಗ್ರಾಮಪಂಚಾಯಿತಿ, ಪಟ್ಟಣ ಪಂಚಾಯಿತಿ,

ಮುನ್ಸಿಪಾಲಿಟಿಗಳನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸಿ ಕ್ರೋಢೀಕರಣ ಮಾಡಿ ಕೋಷ್ಟಕದಲ್ಲಿ ಪ್ರಸ್ತುತಪಡಿಸಲಾಗಿದೆ.

**೩.೨.೪. ಸರಕು ಸೇವೆ ಸಾಂಸ್ಕೃತಿಕ ಸರಕು ಇತ್ಯಾದಿಗಳು ಮತ್ತು ಅವುಗಳನ್ನು ಪೂರೈಕೆ ಮಾಡುವುದರ ಹಿನ್ನೆಲೆ:**

ನಾವು ಅನೇಕ ಸಂತೆಗಳನ್ನು ನೋಡಲಾಗಿ ಇವು ವರ್ಷಕ್ಕೊಮ್ಮೆ, ವಾರಕ್ಕೊಮ್ಮೆ ಅಥವಾ ವಾರಕ್ಕೆ ಎರಡು ಸಲ ನಡೆಯುವ ಪ್ರಮುಖ ಮಾರಾಟ ಕೇಂದ್ರಗಳಾಗಿರುತ್ತವೆ. ಜಾತ್ರೆಗಳು ಸೇರುವ ಸಂದರ್ಭದಲ್ಲಿ ಕೊಳ್ಳುವ ಮತ್ತು ಮಾರಾಟದ ವಹಿವಾಟುಗಳು ನಡೆಯುತ್ತವೆ. ಇವು ಗೊತ್ತಾದ ಸ್ಥಳ ಮತ್ತು ನಿರ್ದಿಷ್ಟ ಕಾಲದಲ್ಲಿ ಜರುಗುತ್ತವೆ. ಇವುಗಳನ್ನು ಸ್ಥಳೀಯ ಸಂಸ್ಥೆಗಳು ವ್ಯವಸ್ಥೆಗೊಳಿಸುತ್ತದೆ. ಇಲ್ಲಿ ದವಸ-ಧಾನ್ಯ ಕಚ್ಚಾ ಸರಕು, ದಿನಬಳಕೆಯ ವಸ್ತುಗಳು ಮತ್ತು ಜಾನುವಾರುಗಳನ್ನು ಕೊಳ್ಳುವ ಮತ್ತು ಮಾರುವ ಚಟುವಟಿಕೆಗಳು (ಸರ್ವೆ ಸಾಮಾನ್ಯವಾಗಿ) ಕಂಡುಬರುತ್ತವೆ. ಸರಕು ಉತ್ಪಾದಕರು ಮತ್ತು ಸಣ್ಣ ರೈತರು ತಮ್ಮ ಹೆಚ್ಚುವರಿ ದವಸ-ಧಾನ್ಯ ಮತ್ತಿತರ ಕಚ್ಚಾವಸ್ತುಗಳನ್ನು ಇಲ್ಲಿ ಮಾರುತ್ತಾರೆ. ತಮಗೆ ಅಗತ್ಯವಾದ ಇತರ ಪದಾರ್ಥಗಳನ್ನು ಇಲ್ಲಿಯೇ ಕೊಳ್ಳುತ್ತಾರೆ. ಇದರ ಜೊತೆಗೆ ರೈತರು ತಮ್ಮ ಗ್ರಾಮಗಳಿಗೆ ಆಗಾಗ ಬರುವ ಸಂಚಾರಿ ಮಧ್ಯವರ್ತಿಗಳಿಗೆ ದವಸಧಾನ್ಯ ಮತ್ತು ಜಾನುವಾರುಗಳನ್ನು ಮಾರುತ್ತಾರೆ. ಇದರಿಂದ ವ್ಯಾಪಾರ ಆಯಾ ಸ್ಥಳಗಳಲ್ಲಿಯೇ ನಡೆಯುತ್ತದೆ. ಈ ವ್ಯವಹಾರ ಮಧ್ಯವರ್ತಿಗಳಿಗೆ ಸಾಕಷ್ಟು ಲಾಭವನ್ನು ತಂದುಕೊಡುವುದಾಗಿದೆ. ಇಂತಹ ಮಾರಾಟ ವ್ಯವಸ್ಥೆಯಲ್ಲಿ ಹೇಳಿಕೊಳ್ಳುವಂತಹ ನಿಯಮಗಳೇನೂ ಇಲ್ಲದಿದ್ದರೂ ಕೆಲವು ಸಾಂಪ್ರದಾಯಿಕ ಪದ್ಧತಿ, ಸಾಧನಗಳನ್ನುಸರಿಸಿಯೇ ವ್ಯಾಪಾರ ನಡೆಯುತ್ತಿರುತ್ತದೆ. ಇವು ಸಹ ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸವಾಗಿರುತ್ತವೆ. ಹೀಗಾಗಿ ಸಂತೆಗಳಲ್ಲಿ ನಡೆಯುವ ವ್ಯಾಪಾರ ಆಯಾ ಪ್ರಾದೇಶಿಕ ಪರಿಸ್ಥಿತಿಗಳಿಗೆ ಅನುಗುಣವಾಗಿರುತ್ತದೆ. ಆದುದರಿಂದ ರಾಜ್ಯಾದ್ಯಂತ ಏಕರೂಪತೆ ಬರುವುದು ಸಾಧ್ಯವಿಲ್ಲದ ಮಾತಾಗಿದೆ.

ಗ್ರಾಮಾಂತರ ಪ್ರದೇಶಗಳಲ್ಲಿ ಈ ಮೇಲಿನ ಪರಿಸ್ಥಿತಿಯಲ್ಲಿ ನಡೆಯುವ ವ್ಯಾಪಾರದ ಮುಖ್ಯ ಲಕ್ಷಣಗಳು ಕೆಲವಿದೆ. ಸರಕುಗಳ ಮಾರಾಟ ರೈತನು ವರ್ಷದಲ್ಲಿ ಉತ್ಪಾದಿಸುವ ದವಸ-ಧಾನ್ಯಗಳ ಪ್ರಮಾಣವನ್ನು ಅವಲಂಬಿಸಿರುತ್ತದೆ. ಆಹಾರ ಧಾನ್ಯಗಳಿಗಿಂತ ವಾಣಿಜ್ಯ ಬೆಳೆಗಳನ್ನು ವಿಲೇವಾರಿ ಮಾಡುವುದೇ ಹೆಚ್ಚು. ಪ್ರಗತಿಪರ ರೈತರು ಹೆಚ್ಚುವರಿ ಉತ್ಪನ್ನಗಳನ್ನು ಸುರಕ್ಷಿತವಾಗಿ ಸಂಗ್ರಹಿಸಿಟ್ಟಿದ್ದು, ಒಳ್ಳೆಯ ಬೆಲೆ ಬಂದಾಗ ಅದನ್ನು ಮಾರಿ ತುಂಬಾ ಕಡಿಮೆ ಬೆಲೆಗೆ ಬಹುಭಾಗದ ಆಹಾರ ಧಾನ್ಯಗಳನ್ನು ಮಾರಿಬಿಡುತ್ತಾರೆ. ಇದಕ್ಕೆ ಸಾಕಷ್ಟು ಕಾರಣಗಳೂ ಇವೆ. ರೈತರು ಸರಕಾರಕ್ಕೆ ಸಂದಾಯ ಮಾಡಬೇಕಾದ ಕಂದಾಯ, ಸಾಹುಕಾರರಿಂದ ತೆಗೆದುಕೊಂಡಿರುವ ಹಣದ ಬಡ್ಡಿ, ತನ್ನ ಕುಟುಂಬದ ಬಟ್ಟೆಬರೆ ಮೊದಲಾದ ಖರ್ಚಿಗಾಗಿ ಅಗತ್ಯವಾದ ಹಣಕ್ಕಾಗಿ ಅನಿವಾರ್ಯವಾಗಿ ಮಾರಿಬಿಡುತ್ತಾರೆ.

ಸಂತೆಗಳಲ್ಲಿ ಸರಕು, ಸೇವೆ, ಸಾಂಸ್ಕೃತಿಕ ಸರಕುಗಳು ಇತ್ಯಾದಿಗಳು ಅವುಗಳನ್ನು ಪೂರೈಕೆ ಮಾಡುವುದರ ಹಿನ್ನೆಲೆಯಲ್ಲಿ ಮೊದಲಿನ ಅಂಶಗಳಲ್ಲದೇ ಇನ್ನೂ ಅನೇಕಾನೇಕ ಅಂಶಗಳನ್ನು ಮನಗಾಣಬಹುದು.

- ಯಾವ ಸಂಸ್ಥೆಯಲ್ಲಿ ಯಾವ ಪದಾರ್ಥವು ಹೆಚ್ಚಿನ ಬೆಲೆಗೆ ಹೋಗಬಹುದು. ಯಾವ ಪದಾರ್ಥವು ಗ್ರಾಹಕರಿಗೆ ಅತ್ಯವಶ್ಯಕವಾಗಿ, ಯಾವುದರ ಬೇಡಿಕೆ ಹೆಚ್ಚಾಗಿದೆ ಎಂಬುದನ್ನು ಮಧ್ಯವರ್ತಿಗಳು ಮನಗಂಡು ಅದನ್ನು ಇತರೆ ಪ್ರದೇಶಗಳಿಂದ ಕೊಂಡು ಬೇಡಿಕೆ ಇರುವ ಪ್ರದೇಶದಲ್ಲಿ ಮಾರಾಟ ಮಾಡುತ್ತಾರೆ. ಇದರಿಂದ ಲಾಭಾಂಶವನ್ನು ಪಡೆಯುವುದನ್ನು ಕಂಡುಕೊಳ್ಳಬಹುದು.

- ದಲ್ಲಾಳಿಗಳು ಯಾವುದಾದರೊಂದರ ಬೇಡಿಕೆ ಕಡಿಮೆಯಾಗುವುದರ ಸಂದರ್ಭದಲ್ಲಿ ಅದನ್ನು ಸ್ಟಾಕ್ ಆಗಿ ಇಟ್ಟು ಅದರ ಬೆಲೆ ಏರುವ ತನಕ ಕಾಯ್ದು ಮಾರಾಟವಾಗುವ ವ್ಯವಸ್ಥೆಗೆ ಕಾರಣೀಭೂತರಾಗುತ್ತಾರೆ. ಇದು ಬೇಗ ನಾಶವಾಗುವ ವಸ್ತುಗಳಿಗೆ ಅನ್ವಯಿಸುವುದಿಲ್ಲ.

- ಸರಕುಗಳನ್ನು ಮಾರಾಟ ಮಾಡುವ ವ್ಯವಸ್ಥೆಯಲ್ಲಿ ಮಧ್ಯವರ್ತಿಗಳೇ ಪ್ರಧಾನಪಾತ್ರ ವಹಿಸುತ್ತಿದ್ದು, ಯಾವ ಯಾವ ಪ್ರದೇಶದ ಸಂತೆಗಳಿಗೆ ಯಾವ ಯಾವ ಕಾಲಮಾನಕ್ಕೆ ಯಾವ ಪದಾರ್ಥ ಉಪಯುಕ್ತ ಎಂಬುದನ್ನು ತಿಳಿದು ಅದನ್ನು ಸರಿದೂಗಿಸಿಕೊಂಡು ಹೋಗುತ್ತಾರೆ.

- ಸಂತೆಗಳು ಮುಖ್ಯವಾಗಿ ನಗರ ಮತ್ತು ಪಟ್ಟಣ ಪ್ರದೇಶದಲ್ಲಿ ಅಷ್ಟೊಂದು ಪ್ರಮುಖವಾದ ಪಾತ್ರವನ್ನು ನಿರ್ವಹಿಸಲಾರವಾದರೂ ಗ್ರಾಮೀಣ ಮಟ್ಟದಲ್ಲಿರುವ ಪ್ರದೇಶಗಳಲ್ಲಿ ಅತ್ಯಂತ ಪ್ರಮುಖವಾದ ಪಾತ್ರವನ್ನು ನಿರ್ವಹಿಸುತ್ತವೆ. ಅವುಗಳನ್ನು ತಿಳಿದ ವ್ಯಾಪಾರಗಾರರು ಮತ್ತು ದಲ್ಲಾಳಿಗಳು ಆಯಾ ಪ್ರದೇಶಗಳಿಗೆ ಸೂಕ್ತವಾದ ಅಥವಾ ಬೇಡಿಕೆಗೆ ಅರ್ಹವಾದ ಪದಾರ್ಥ ಸರಕುಗಳನ್ನು ಮಾರಾಟ ಮಾಡಿ/ಸೇವೆ ಸಲ್ಲಿಸಿ ಲಾಭಾಂಶವನ್ನು ಪಡೆದುಕೊಳ್ಳುತ್ತಾರೆ.

- ಕೆಲವೊಂದು ಪ್ರದೇಶಗಳಿಗೆ ಕೆಲವೊಂದು ಪದಾರ್ಥ ಅಥವಾ ಸರಕು, ಸೇವೆ, ಸಾಂಸ್ಕೃತಿಕ ಸರಕುಗಳು ಅತ್ಯವಶ್ಯಕವಾಗಿರುತ್ತವೆ. ಉದಾಹರಣೆಗೆ ಗ್ರಾಮೀಣ ಭಾಗಗಳಿಗೆ, ಕೃಷಿ ಸಲಕರಣೆಗಳು, ದನಗಳ ಮಾರಾಟ, ದಿನೋಪಯೋಗಿ ವಸ್ತುಗಳು ಬೇಕಾಗಿರುವುದರಿಂದ ಅಂತಹವುಗಳ ಸೇವೆ ಪೂರೈಕೆ ಗ್ರಾಮೀಣ ಸಂಸ್ಥೆಗಳಲ್ಲಿ ಕಂಡುಬರುತ್ತದೆ. ಅಂತೆಯೇ ಪಟ್ಟಣ ಅಥವಾ ನಗರ ಪ್ರದೇಶಗಳಲ್ಲಿ ಸಾಂಸ್ಕೃತಿಕ ಸರಕುಗಳು ಮತ್ತು ಸೇವೆಗಳು ಬೇಕಾಗಿರುವುದರಿಂದ ನಗರ ಪ್ರದೇಶದ ಸಂತೆಗಳಲ್ಲಿ ಅವುಗಳ ಪೂರೈಕೆ ಜಾಸ್ತಿಯಾಗಿರುತ್ತದೆ. ತರಕಾರಿ ಪದಾರ್ಥವು ಸಹ ನಗರಗಳ ಸಂಸ್ಥೆಯಲ್ಲಿ ಹೆಚ್ಚಾಗಿ ಮಾರಾಟವಾಗುತ್ತದೆ.

- ಜನಸಂಪರ್ಕ ಇರುವ ಪ್ರದೇಶ, ಜನಸಂದಣಿಯನ್ನು ಹೊಂದಿರುವ ಪ್ರದೇಶ, ನಗರ ಪ್ರದೇಶ, ಪಟ್ಟಣ ಪ್ರದೇಶಗಳಲ್ಲಿ ಜನಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ಮತ್ತು ಆಯಾ ಭಾಗಕ್ಕೆ ಬೇಕಾಗುವ ಸರಕುಗಳನ್ನು ತಂದು ಮಾರಾಟ ಮಾಡುವ ಪರಿಪಾಟ ದಲ್ಲಾಳಿಗಳಲ್ಲಿ ಅಥವಾ ಸೇವೆ ಸಲ್ಲಿಸುವ ವ್ಯಾಪಾರಗಾರರಲ್ಲಿ ಕಂಡುಬರುವ ವಿಷಯ ಸರ್ವೇಸಾಮಾನ್ಯ. ಆದರೆ ಈ ಅಂಶದ ಹಿನ್ನೆಲೆಯಲ್ಲಿ ಅನೇಕ ಸಂತೆಗಳನ್ನು ಸಂದರ್ಶಿಸಿದಾಗ ಧಾನ್ಯಗಳ ವ್ಯಾಪಾರ ಮತ್ತು ತರಕಾರಿ ವ್ಯಾಪಾರವು ಅತೀ ಹೆಚ್ಚಿನ ಪ್ರಮಾಣದಲ್ಲಿ ನಡೆಯುವುದನ್ನು ಕಾಣಬಹುದು.

- ಸಂತೆಗಳಲ್ಲಿ ಸರಕು, ಸೇವೆ, ಸಾಂಸ್ಕೃತಿಕ ಸರಕು ಇತ್ಯಾದಿಗಳು ಜನರ ಬೇಡಿಕೆಯ ವಸ್ತುಗಳಾಗಿದ್ದರೂ, ಸಾಂಸ್ಕೃತಿಕ ಸರಕುಗಳು ಮೂಲತಃ ಶ್ರೀಮಂತ ವರ್ಗಕ್ಕೆ ಉತ್ಪಾದಿಸಲ್ಪಟ್ಟ ಸರಕುಗಳಾಗಿವೆ. ಅವು ಸಾಂಸ್ಕೃತಿಕ ಸೇವೆಯನ್ನು ನೀಡಿ ಬೇಡಿಕೆಯನ್ನು ಪೂರೈಸುವ ಹಿನ್ನೆಲೆಯಲ್ಲಿ ಉತ್ಪಾದನೆಗೊಂಡಂತಹವುಗಳಾಗಿವೆ. ಇನ್ನಿತರ ಸರಕುಗಳು ಅತ್ಯವಶ್ಯಕತೆಯನ್ನು ಹೊಂದಿರುವ ಬೇಡಿಕೆಯ ಹಿನ್ನೆಲೆಯಲ್ಲಿ ಉತ್ಪಾದಿಸಲ್ಪಟ್ಟವುಗಳಾಗಿವೆ. ಇವುಗಳು ಮಾರುಕಟ್ಟೆಯ ವ್ಯವಸ್ಥೆಯಲ್ಲಿ ಉತ್ಪಾದಕರ ದಲ್ಲಾಳಿಗಳ ಮತ್ತು ವ್ಯಾಪಾರಸ್ಥರ ಕೈಗೆ ಸೇರಿ ಕೊನೆಗೆ ಗ್ರಾಹಕರಲ್ಲಿ ಅನುಭೋಗಿಸಲ್ಪಡುತ್ತವೆ.
- ಒಟ್ಟಾರೆ ಯಾವುದೇ ಸರಕು ಮತ್ತು ಸೇವೆಗಳು ಉತ್ಪಾದಕತೆಯಿಂದ ಗ್ರಾಹಕರು ಕೊಂಡುಕೊಳ್ಳುವ ಹಂತದವರೆಗೆ 'ಬೇಡಿಕೆ' ಪೂರೈಕೆ, ನಿಯಮದ ಮೇಲೆ ನಡೆಯುತ್ತಿರುತ್ತದೆ ಎಂಬುದನ್ನು ಮರೆಯುವಂತಿಲ್ಲ.
- ಸರಕುಗಳನ್ನು ತಂದು ಸಂತೆಗಳಲ್ಲಿ ಮಾರಾಟಮಾಡುವ ವ್ಯಾಪಾರಗಾರರು ತನ್ನ ಲಾಭದ ಅಂಶವನ್ನು ಗಣನೆಗೆ ತೆಗೆದುಕೊಂಡುದಲ್ಲದೇ, ಯಾವ ಸರಕು ಯಾವ ದಿನಮಾನಗಳಲ್ಲಿ, ಯಾವ ಸ್ಥಳಗಳಿಗೆ ಸೂಕ್ತ ಯಾವುದು ಅಂದಿನ ಬೇಡಿಕೆಯುಕ್ತ ಸರಕು ಎಂತಹ ಪ್ರದೇಶದಲ್ಲಿ ಯಾವುದು ಮಾರಲ್ಪಡುತ್ತದೆ. ಯಾವುದು ಲಾಭವನ್ನು ತಂದುಕೊಡುತ್ತದೆ ಎಂಬೆಲ್ಲಾ ಅಂಶಗಳನ್ನು ತಿಳಿದು ಅವುಗಳ ಹಿನ್ನೆಲೆಯಲ್ಲಿ ಸೇವೆಯನ್ನು ಸಲ್ಲಿಸುವ ಅಥವಾ ಮಾರಾಟ/ವ್ಯಾಪಾರ ಮಾಡುವ ವ್ಯವಸ್ಥೆ ಸಂತೆಗಳಿಂದ ತಿಳಿದುಕೊಳ್ಳಬಹುದಾಗಿದೆ.

### ೩.೨.೫. ವಿವಿಧ ಸಮುದಾಯಗಳು ಸಂತೆಯಲ್ಲಿ ತಮ್ಮದಾಗಿಸಿಕೊಳ್ಳುವ ಜಾಗ

ಸಂತೆ ಎಂದಾಕ್ಷಣ ನಮ್ಮ ಕಣ್ಣೆದುರಿಗೆ ಕಂಡುಬರುವ ಮುಖ್ಯ ಅಂಶ, ಪರಿಕಲ್ಪನೆ ಎಂದರೆ, ಜನಸಂದಣಿ, ಅದರ ಮಧ್ಯೆ, ವ್ಯಾಪಾರ ವಹಿವಾಟು, ಕೊಡುಕೊಳ್ಳುವಿಕೆ ಮುಂತಾದ ಅನೇಕ ಸಂಗತಿಗಳನ್ನು ಗುರ್ತಿಸಿಕೊಳ್ಳುತ್ತೇವೆ. ಆದರೆ ಆ ಸಂತೆಯ ಪರಿಕಲ್ಪನೆಯಲ್ಲಿ ವಿಶೇಷವಾಗಿ ಸಂತೆಗಳಿಗೆ ಭೇಟಿ ನೀಡಿದಾಗ ಅವರವರ ವಹಿವಾಟಿಗೆ ಸಂಬಂಧಪಟ್ಟ ಜಾಗ ಪ್ರದೇಶಗಳು ಕಂಡುಬರುತ್ತವೆ. ಉದಾಹರಣೆಗೆ ತರಕಾರಿ ಮಾರಾಟ ಮಾಡುವವರು ಒಂದು ನಿರ್ದಿಷ್ಟ ಪ್ರದೇಶದಲ್ಲಿದ್ದಾರೆ. ಬಟ್ಟೆ ಬರೆಗಳನ್ನು ಮಾರಾಟ ಮಾಡುವವರು ಒಂದೆಡೆ ಇರುತ್ತಾರೆ, ಧವಸ-ಧಾನ್ಯ, ಕಿರಾಣಿ ಸಾಮಾನುಗಳನ್ನು ಮಾರಾಟ ಮಾಡುವವರು ಮತ್ತೊಂದೆಡೆ ಕಾಣಸಿಗುತ್ತಾರೆ. ಕೃಷಿ ಸಲಕರಣೆ ಮಾರಾಟ, ಮೀನು-ಮಾಂಸ ಮಾರಾಟ, ಬುಟ್ಟಿ, ಬಿದಿರು ಸಾಮಾನು ಮಾರಾಟ, ಪಾದರಕ್ಷೆ ಮಾರಾಟ, ದನಗಳ ಅಥವಾ ಸಾಕುಪ್ರಾಣಿಗಳ ಮಾರಾಟ, ಪ್ಲಾಸ್ಟಿಕ್ ಸಾಮಾನುಗಳ ಮಾರಾಟ, ಹೂಹಣ್ಣುಗಳ ಮಾರಾಟ. ಹೀಗೆ ಸಂತೆಯಲ್ಲಿ ಬೇರೆ ಬೇರೆ ಜಾಗದಲ್ಲಿ ಒಂದೇ ಬಗೆಯ ಸರಕುಗಳನ್ನು ಮಾರಾಟ ಮಾಡುವ ಅನೇಕ ವ್ಯಾಪಾರಗಾರರನ್ನು ಕಾಣಬಹುದು. ಆದರೆ ಈ ವ್ಯಾಪಾರ ವಹಿವಾಟಿನಲ್ಲಿ ವ್ಯವಸ್ಥಿತ ಮಾರಾಟ ಮಳಿಗೆಗಳು, ಅವ್ಯವಸ್ಥಿತ ಮಾರಾಟ ಮಳಿಗೆಗಳನ್ನು ಸಹ ಗುರುತಿಸಬಹುದು. ಉದಾಹರಣೆಗೆ ತರಕಾರಿ ಮಾಡುವವರು ವಿಶಾಲವಾದ ಜಾಗವನ್ನು ಸ್ಥಳವನ್ನು ಅಲಂಕರಿಸಿ ವ್ಯವಹರಿಸುತ್ತಾರೆ. ಒಣಮೆಣಸಿನ ಕಾಯಿ ಮಾರುವವರು ಮತ್ತೊಂದೆಡೆಗಿದ್ದು ವ್ಯವಹರಿಸುತ್ತಿರುತ್ತಾರೆ. ಕಿರಾಣಿ

ವಿನಸಿಯವರು ಟೆಂಟ್‌ಗಳನ್ನು ಹಾಕಿಕೊಂಡು ವ್ಯವಹರಿಸುತ್ತಿರುತ್ತಾರೆ. ಇವರು ಸ್ಥಳವನ್ನು ಹೆಚ್ಚಾಗಿಯೇ ಗುತ್ತಾರ ಹೊಂದಿರುತ್ತಾರೆ. ಆದರೆ ಇನ್ನುಳಿದಂತೆ ಸ್ಥಳದ ಕುರಿತು ಹೇಳಬೇಕೆಂದರೆ ವ್ಯಾಪಾರಸ್ಥರು ವ್ಯಾಪಾರಕ್ಕಾಗಿ ಹಾಕಿರುವ ಬಂಡವಾಳದ ಆಧಾರದ ಮೇಲೆ ಜಾಗದ ವ್ಯಾಪ್ತಿಯೂ ವಿಶಾಲವಾಗುತ್ತದೆ. ಕಡಿಮೆ ಬಂಡವಾಳ ತೊಡಗಿಸಿದವರು ಕಡಿಮೆ ಪ್ರಮಾಣದ ಜಾಗವನ್ನು ಅಲಂಕರಿಸಿರುತ್ತಾರೆ.

ಜನರ ಅನುಕೂಲತೆಯ ದೃಷ್ಟಿಯಿಂದ ಕೆಲವೊಂದು ವ್ಯವಹಾರಗಳು ಸಂತೆಯ ವ್ಯಾಪ್ತಿಯ ಕೊನೆಯಲ್ಲಿ ನಡೆಯುತ್ತಿರುತ್ತವೆ. ಅವು ಮೀನುಮಾಂಸಗಳ ಮಾರಾಟ, ದನಗಳ ಮಾರಾಟ ಮುಂತಾದವು. ಸಂತೆಗಳಿಗೆ ಪ್ರಾರಂಭದಲ್ಲಿ ವ್ಯಾಪಾರಸ್ಥರು ಉತ್ತಮ ಜಾಗದಲ್ಲಿ ವ್ಯಾಪಾರ ಮಾಡುವ ಕೇಂದ್ರವನ್ನಾಗಿ ಮಾಡಿಕೊಂಡರೆ, ಮಧ್ಯದಲ್ಲಿ, ಕೊನೆಯಲ್ಲಿ ಬಂದ ವ್ಯಾಪಾರಸ್ಥರು ಎಲ್ಲೋ ಒಂದೆಡೆ, ವ್ಯಾಪಾರವನ್ನು ಮಾಡುತ್ತಾರೆ. ಪ್ರಾರಂಭದಲ್ಲಿ ಎಂದರೆ, ಮೊದಲಿನಿಂದ ಪ್ರತಿಸಂತೆಗೆ ಹಾಜರಾಗುವವರು ಎಂದರ್ಥ. ಇದಲ್ಲದೇ ಅಲೆಮಾರಿ ವ್ಯಾಪಾರಸ್ಥರು ತಿರುಗಾಡುತ್ತಾ ವ್ಯವಹರಿಸುವುದನ್ನು ಸಹ ಕಾಣಬಹುದು.

### ೩.೨.೬. ಸಂತೆಗಳಲ್ಲಿನ ವಿವಿಧ ಸಮುದಾಯಗಳು ಹೊಂದುವ ಆದಾಯ

ಸಂತೆಗಳಲ್ಲಿ ಉತ್ಪಾದಕರು, ದಲ್ಲಾಳಿ / ಮಧ್ಯವರ್ತಿಗಳು, ವಿತರಣೆಗಾರರು, ಸಗಟು ವ್ಯಾಪಾರಗಾರರು, ಕಿರಾಣಿ ವ್ಯಾಪಾರಗಾರರು / ಕೊಂಡುಕೊಳ್ಳುವ / ಗ್ರಾಹಕರು. ಹೀಗೆ ಅನೇಕ ವ್ಯವಸ್ಥೆಗೆ ಸಂಬಂಧಪಟ್ಟ ಜನರುಗಳನ್ನು ಕಾಣುತ್ತೇವೆ. ಈ ಸಂತೆಗಳಲ್ಲಿ ಪ್ರಮುಖವಾಗಿ ಮಾರಾಟ ಮಾಡುವುದರ ಸಮುದಾಯ ಮತ್ತು ಕೊಂಡುಕೊಳ್ಳುವವರ ಸಮುದಾಯ ಎಂಬೆರಡು ವ್ಯವಸ್ಥೆಗಳನ್ನು ಮಾಡಿದಾಗ ಮಾರಾಟ ಮಾಡುವವರು ಮಾರಾಟ ಮಾಡಿದ ಸರಕುಗಳಿಗೆ ಸೇವೆಗಳಿಗೆ ಲಾಭವನ್ನು, ಆದಾಯವನ್ನು ಪಡೆದರೆ, ಸರಕನ್ನು ಖರೀದಿಸಿದವರು ಅನುಭೋಗವನ್ನು ಹೊಂದುತ್ತಾರೆ. ಇದು ಸರ್ವೇಸಾಮಾನ್ಯವಾದ ಸಂಗತಿ. ಆದರೆ, ಮಾರಾಟ ಮಾಡುವವರಲ್ಲಿ ವರ್ಗೀಕರಣ ವ್ಯವಸ್ಥೆ ಇರುವಂತೆ, ಕೊಂಡುಕೊಳ್ಳುವವರಲ್ಲಿಯೂ ವರ್ಣ ವ್ಯವಸ್ಥೆಗಳನ್ನು ಕಾಣುತ್ತೇವೆ. ಮಾರಾಟಗಾರರು ಸ್ವತಃ ಬಂಡವಾಳಗಾರರಾಗಿದ್ದಾರೆ. ಸ್ವತಃ ಪಡೆದ ಅಧಿಕ ಆದಾಯವನ್ನು ಹೊಂದುತ್ತಾರೆ. ಇಲ್ಲವೇ ದಲ್ಲಾಳಿ ಮತ್ತು ಮಧ್ಯವರ್ತಿಗಳಿಂದ ಸರಕನ್ನು ಖರೀದಿಸಿ ಗ್ರಾಹಕರಿಗೆ ಮಾರಾಟ ಮಾಡುವವರಾಗಿದ್ದಾರೆ. ಸ್ವತಃ ಬಂಡವಾಳ ತೊಡಗಿಸುವವರಿಗಿಂತ ಕಡಿಮೆ ಆದಾಯವನ್ನು ಹೊಂದುತ್ತಾರೆ.

ವ್ಯವಹಾರದಲ್ಲಿ ನಿಪುಣತೆ, ಶೈಕ್ಷಣಿಕ ಸ್ಥಾನ, ಆರ್ಥಿಕವಾಗಿ ಸದೃಢರಾಗಿರುವ ಮತ್ತು ಬಂಡವಾಳವನ್ನು ಹೆಚ್ಚಾಗಿ ವಿನಿಯೋಗಿಸುವವರಾಗಿದ್ದಾರೆ. ಇತರರಿಗಿಂತ ಹೆಚ್ಚಿನ ಆದಾಯವನ್ನು ಹೊಂದುತ್ತಾರೆ. ಇದು ಮುಂದುವರೆದ / ಮುಖ್ಯವಾಹಿನಿಯಲ್ಲಿರುವ ಸಮುದಾಯಗಳಲ್ಲಿನ ಜನರಲ್ಲಿ / ವ್ಯಾಪಾರಗಾರರಲ್ಲಿ ಕಂಡುಬರುವ ಸಂಗತಿಯಾಗಿದೆ. ಅಲ್ಲದೆ, ತರಕಾರಿ ಮಾರಾಟ ಮಾಡುವವರಿಗಿಂತ ಸಾಂಸ್ಕೃತಿಕ ಸರಕುಗಳನ್ನು ಮಾರಾಟ ಮಾಡುವವರೇ ಹೆಚ್ಚಿನ ಆದಾಯವನ್ನು ಹೊಂದುತ್ತಾರೆ. ಬೇಡಿಕೆಯ ನಿಯಮದ ಆಧಾರದ ಮೇಲೆ,

ಪೇಡಿಕೆಯುಕ್ತ ಪದಾರ್ಥದ ಮೇಲೆ ಆದಾಯವನ್ನು ಹೊಂದುತ್ತಾರೆ. ಬಳ್ಳಾರಿ ಜಿಲ್ಲೆಯ ಸಂತೆಗಳನ್ನು ಸಮೀಕ್ಷಿಸಲಾಗಿ, ವ್ಯಾಪಾರಸ್ಥರ ಹೇಳಿಕೆಯಂತೆ ಕೇವಲ ೧೫ರಷ್ಟು, ಇಲ್ಲವೆ ೧೦ರಷ್ಟು ಲಾಭವನ್ನೇ ಹೇಳುವವರ ಪ್ರಮಾಣ ಜಾಸ್ತಿಯಾಗಿ ಕಂಡುಬರುತ್ತದೆ. ಆದರೆ, ಲಾಭದಲ್ಲಿ ಮಾರಾಟ ಸ್ಥಾನ ಸುಂಕ, ಸಂಪರ್ಕ ಸಾಧನದ ಬಾಡಿಗೆ, ತಮ್ಮ ದಿನನಿತ್ಯದ ಖರ್ಚು ಮುಂತಾದವುಗಳ ಹಿನ್ನೆಲೆಯಿಂದ ಕೇವಲ ೪ ಅಥವಾ ೫ ಮಾತ್ರ ಲಾಭವಿದೆ ಎಂಬ ಅಭಿಪ್ರಾಯ ಸರ್ವೇಸಾಮಾನ್ಯ. ಆದರೆ, ದಲ್ಲಾಳಿ ಸಮುದಾಯವು ತಮ್ಮ ಪಹಿವಾಟಿನಿಂದ ಹೆಚ್ಚಿನ ಮಟ್ಟದಲ್ಲಿ ಆದಾಯವನ್ನು ಪಡೆಯುತ್ತಿರುತ್ತಾರೆ. ಆದರೆ ಅವರೂ ಸಹ ಲಾಭನಷ್ಟದ ಮುಷ್ಟಿಯಿಂದ ಹೊರತಾಗಿಲ್ಲ ಎಂಬ ವಿಷಯ ಮರೆಯತಕ್ಕದಲ್ಲ.

ಸಂತೆಯೊಂದರಲ್ಲಿಯೇ ಆದಾಯವನ್ನು ಪಡೆಯುವವರು ದಲ್ಲಾಳಿಗಳು. ಅವರು ಕೆಲವೊಮ್ಮೆ ಬೇಡಿಕೆ ಕುಸಿದಾಗ ನಷ್ಟಗೊಂಡಿರುವ ಅನೇಕ ಸಂಗತಿಗಳನ್ನು ಕಾಣಬಹುದು. ಆದರೆ ದಲ್ಲಾಳಿಗಳ ಕಡೆಯಿಂದ ಖರೀದಿಸಿ ಮಾರಾಟಮಾಡುವ ವ್ಯಾಪಾರಸ್ಥರು ಕಡಿಮೆ ಪ್ರಮಾಣದಲ್ಲಿ ಲಾಭ / ಆದಾಯವನ್ನು ಹೊಂದಿದರೂ ನಷ್ಟಕ್ಕೆ ಈಡಾಗುವ ಸಾಧ್ಯತೆ ಅತ್ಯಂತ ಕಡಿಮೆ.

ಹೂ, ಹಣ್ಣು, ಹಸಿ ಪದಾರ್ಥಗಳು, ತರಕಾರಿ ಮಾರಾಟ ಮಾಡುವವರು ತಮ್ಮ ಸರಕುಗಳು ಬೇಗನೆ ನಷ್ಟಕ್ಕೆ ಒಳಗಾಗುವುದರಿಂದ ಅವುಗಳು ಮಾರಾಟವಾಗಲೇ ಬೇಕು ಇಲ್ಲದಿದ್ದರೇ ಅವುಗಳು ಕೊಳೆತು ಹೋಗುತ್ತವೆ. ಆದರೆ ಬಟ್ಟೆ ಬರೆ, ಕೃಷಿ ಸಲಕರಣೆ, ದಿನಸಿ ಸಾಮಾನು, ಧಾನ್ಯಗಳು, ಒಣ ಪದಾರ್ಥಗಳು, ಪಾದರಕ್ಷೆ, ಬುಟ್ಟಿ, ಬಿದಿರು ಪದಾರ್ಥ, ಮಾರಾಟ ಮಾಡುವವರು, ವ್ಯಾಪಾರವಾಗದಿದ್ದರೂ ಚಿಂತಿಸದೇ ನಿಗದಿತ ಬೆಲೆಗೆ ತಮ್ಮ ಸರಕುಗಳನ್ನು ಮಾರಾಟಮಾಡಿ ಹೆಚ್ಚಿನ ಲಾಭ ಅಥವಾ ಆದಾಯವನ್ನು ಪಡೆಯುತ್ತಾರೆ. ಈ ಒಣ ಪದಾರ್ಥ ಅಥವಾ ಸರಕುಗಳನ್ನು ಮಾರುವವರು ಹೆಚ್ಚಿನ ಆದಾಯವನ್ನು ಹೊಂದುವಂತಿದ್ದಾರೆ, ಹಸಿ ಸರಕು ಪದಾರ್ಥಗಳನ್ನು ಮಾರುವವರು ಕಡಿಮೆ ಆದಾಯವನ್ನು ಹೊಂದುವುದು ಕಂಡುಬರುತ್ತದೆ.

ಆದಾಯದ ಬಗೆಗೆ ನಿರ್ದಿಷ್ಟ ಮಾಹಿತಿಯು ಸ್ಪಷ್ಟವಾಗಿ ವ್ಯಾಪಾರಗಾರರಿಂದ ಸಿಗದೇ ಇದ್ದುದರಿಂದ ನಿರ್ದಿಷ್ಟ ಆದಾಯದ ಮೊತ್ತವನ್ನು ಹೇಳಲಿಕ್ಕಾಗದು. ಆದರೂ ಅವರ ಕೆಲವೊಂದು ಹೇಳಿಕೆಯಿಂದ ಈ ಮೇಲಿನ ತೀರ್ಮಾನಕ್ಕೆ ಬರಬಹುದಾಗಿದೆ. ಅಲ್ಲದೆ, ಸಂತೆಗಳಲ್ಲಿ ವ್ಯವಹರಿಸುವ ಸಮುದಾಯಗಳನ್ನು ಅವಲೋಕಿಸಿ ಸಂದರ್ಶಿಸಿದಾಗ ಸಿಗುವ ಉತ್ತರವೆಂದರೆ, ಉತ್ಪಾದಕರ ಸಮುದಾಯ, ಮಧ್ಯವರ್ತಿಗಳ ಸಮುದಾಯ, ಬಂಡವಾಳಗಾರರ ಸಮುದಾಯ, ವ್ಯಾಪಾರಸ್ಥ ಸಮುದಾಯ, ಗ್ರಾಹಕ ಸಮುದಾಯ ಹೀಗೆ ನಾನಾ ವಿವಿಧ ಸಮುದಾಯಗಳು ಗುರ್ತಿಸಬಹುದು.

ಒಟ್ಟಾರೆಯಾಗಿ ಹೇಳುವುದಾದರೆ, ಬಂಡವಾಳದಾರರು, ಮಧ್ಯವರ್ತಿಗಳು ಹೆಚ್ಚಿನ ಪ್ರಮಾಣದಲ್ಲಿ ಆದಾಯವನ್ನು ಹೊಂದುತ್ತಾರೆ, ಮಧ್ಯವರ್ತಿಗಳಿಂದ ಖರೀದಿಸಿ ವ್ಯಾಪಾರಮಾಡುವವರು ಕಡಿಮೆ ಮಟ್ಟದಲ್ಲಿ ಆದಾಯವನ್ನು ಹೊಂದುತ್ತಾರೆ ಎಂಬ ಸ್ಪಷ್ಟ ಚಿತ್ರಣ ಸಿಗುವುದಂತೂ ಸ್ಪಷ್ಟ

### ೩:೨:೭ ಸಂತೆಯಲ್ಲಿನ ವ್ಯಾಪಾರಸ್ಥರು ಮತ್ತು ಗ್ರಾಹಕರ ಮನೋವೃತ್ತಿ

ಸಂತೆ ಎಂದರೆ ವ್ಯಾಪಾರಸ್ಥರು ಹಾಗೂ ಗ್ರಾಹಕರು ಒಂದು ನಿರ್ದಿಷ್ಟವಾದ ಸ್ಥಳದಲ್ಲಿ ಒಂದು ನಿರ್ದಿಷ್ಟಪಡಿಸಿದ ದಿನದಂದು ಒಂದೆಡೆಗೆ ಸೇರಿ ವ್ಯಾಪಾರ ವಹಿವಾಟು ಮಾಡುವುದು ಎಂದು ಹೇಳಬಹುದು. ಸಂತೆಯಲ್ಲಿ ಹಲವಾರು ರೀತಿಯ ವ್ಯಾಪಾರಿಗಳನ್ನು ಕಾಣುತ್ತೇವೆ. ಅವುಗಳಲ್ಲಿ ಖಾಯಂ ವ್ಯಾಪಾರಿಗಳು, ಅಲೆಮಾರಿ ವ್ಯಾಪಾರಿಗಳು, ಚಿಲ್ಲರೆ ವ್ಯಾಪಾರಿಗಳನ್ನು ಕಾಣುತ್ತೇವೆ. ಆದರೆ ಅವರ ಮನೋಭಾವನೆಯು ಒಬ್ಬರಿಂದ ಒಬ್ಬರಿಗೆ ಭಿನ್ನವಾಗುತ್ತ ಹೋಗುತ್ತದೆ. ಖಾಯಂ ವ್ಯಾಪಾರಿಗಳ ಮನೋಭಾವ ವ್ಯಾಪಾರದ ಬಗೆಗಾಗಲೀ, ಅಥವಾ ತಮ್ಮ ಮಾರಾಟ ವಸ್ತುಗಳ ಬಗೆಗೆ ಒಂದೇ ರೀತಿಯ ಧೋರಣೆಯನ್ನು ಹೊಂದಿರುತ್ತಾರೆ. ದರದಲ್ಲಿ ಯಾವುದೇ ರೀತಿಯ ಬದಲಾವಣೆಯನ್ನು ಮಾಡದೇ ಸ್ಥಿರವಾದ ಮನೋಭಾವ ಹೊಂದಿರುತ್ತಾರೆ. ಏಕೆಂದರೆ ಅವರು ಖಾಯಂ ಆಗಿ ಒಂದೆಡೆಗೆ ಇರುವುದರಿಂದ ಇವರಿಗೆ ಖಾಯಂ ಗ್ರಾಹಕರು ಇರುತ್ತಾರೆ. ಆದರೆ ಅಲೆಮಾರಿ ವ್ಯಾಪಾರಿಗಳು ಹಾಗಲ್ಲ. ತಮ್ಮ ವಸ್ತುಗಳ ಮಾರಾಟದ ಬಗೆಗೆ ಸಡಿಲವಾದ ಮನೋಭಾವವನ್ನು ಹೊಂದಿರುತ್ತಾರೆ. ವ್ಯಾಪಾರದಲ್ಲಿ ನಿಶ್ಚಿತವಾದ ನಿಲುವನ್ನು ತಾಳದೇ ತಮಗೆ ಅನುಕೂಲವಾಗುವ ಹಾಗೆ, ಇಲ್ಲವೆ ತಮಗೆ ಅಲ್ಪ ಲಾಭವಾಗುವುದಾದರೂ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಏಕೆಂದರೆ ಅವರು ಅಲೆಮಾರಿಗಳಾಗಿದ್ದು, ತಮ್ಮ ವಸ್ತುಗಳನ್ನು ಒಂದು ಸಂತೆಯಿಂದ ಇನ್ನೊಂದು ಸಂತೆಗೆ ಹೋಗುವುದಕ್ಕೆ ಹೊರೆಯಾಗುವ ಸಾಧ್ಯತೆ ಇರುತ್ತದೆ. ಇನ್ನು ಚಿಲ್ಲರೆ ವ್ಯಾಪಾರಿಗಳು ಕಡಿಮೆ ಬಂಡವಾಳವನ್ನು ಹಾಕಿ ಕಡಿಮೆಮಟ್ಟದ ಲಾಭಾಂಶವನ್ನು ಹೊಂದುವ ಮನೋಭಾವದವರಾಗಿ ಕಂಡುಬರುತ್ತಾರೆ.

ಸಂತೆಯಲ್ಲಿರುವ ವ್ಯಾಪರಸ್ಥರು ತಮ್ಮ ವಸ್ತುಗಳು ಹೆಚ್ಚಿನ ದರದಲ್ಲಿ ಮಾರಾಟವಾಗಬೇಕೆಂಬ ಮನೋಭಾವ ಹೊಂದಿದವರಾಗಿದ್ದು, ಸಂತೆಯಲ್ಲಿನ ಅಥವಾ ಮಾರುಕಟ್ಟೆಯಲ್ಲಿನ ದರವನ್ನು ಗಮನಿಸಿ ತಮ್ಮ ಮನೋಭಾವವನ್ನು ಬದಲಾಯಿಸಿಕೊಳ್ಳುತ್ತಾರೆ. ಗ್ರಾಹಕರಿಗೆ ಮೋಸ ಮಾಡಿ ಅಧಿಕ ಲಾಭ ಪಡೆಯುವ ಮನೋಭಾವ ಹೊಂದಿರುವುದು ಸರ್ವೇಸಾಮಾನ್ಯ. ವ್ಯಾಪಾರ ಚಟುವಟಿಕೆಯಲ್ಲಿ ನುರಿತ, ಹಿರಿಯ ಶ್ರೇಣಿಯ ವ್ಯಾಪಾರಸ್ಥ ಹೆಚ್ಚಿನ ಅನುಭವವನ್ನು ಹೊಂದಿದವರಾಗಿದ್ದು, ಜನರ ವ್ಯಾಪಾರದ ಚಾಕಚಕ್ಯತೆಯನ್ನು ಗಮನಿಸಿ ವ್ಯವಹರಿಸುತ್ತಾರೆ. ಅವರ ಚಾಣಾಕ್ಷತನವೇ ಅವರ ಬಂಡವಾಳವಾಗಿರುತ್ತದೆ. ವ್ಯಾಪಾರಸ್ಥರ ಮನೋಭಾವ ಹೆಚ್ಚಾಗಿ ಅಧಿಕ ಹಣವನ್ನು ಗ್ರಾಹಕರಿಂದ ತೆಗೆದುಕೊಳ್ಳುವುದೇ ಆಗಿದ್ದು, ತಮ್ಮ ವಸ್ತುಗಳ ಬಗೆಗೆ ಕೌಶಲ್ಯಯುತವಾಗಿ ಮಾತಿನ ಮೂಲಕ ವ್ಯವಹರಿಸುತ್ತಾರೆ.

ಸಂತೆಯಲ್ಲಿ ವಸ್ತುಗಳನ್ನು ವ್ಯಾಪಾರ ಮಾಡುವವರಿಗೆ ವ್ಯಾಪರಸ್ಥರೆಂದು ಆ ವಸ್ತುಗಳನ್ನು ಕೊಂಡುಕೊಳ್ಳುವವರನ್ನು ಗ್ರಾಹಕರೆಂದು ಕರೆಯುತ್ತಾರೆ. ವ್ಯಾಪಾರಸ್ಥರು ಲಾಭ ಪಡೆಯುವ ಉದ್ದೇಶವನ್ನು ಹೊಂದಿದ್ದರೆ, ಗ್ರಾಹಕರು ಉಳಿತಾಯ ಮಾಡುವ ಮನೋಭಾವದವರಾಗಿರುತ್ತಾರೆ. ವ್ಯಾಪಾರಿಗಳು ತಮ್ಮ ವಸ್ತುಗಳನ್ನು ಒಳ್ಳೆಯ ದರದಲ್ಲಿ ಮಾರಾಟ ಮಾಡಿ ಒಳ್ಳೆಯ ಲಾಭ ಪಡೆಯಬೇಕೆಂಬ ಉದ್ದೇಶದಿಂದ ಬಂದವರಾಗಿರುತ್ತಾರೆ. ಆದರೆ ಗ್ರಾಹಕರು ಒಳ್ಳೆಯ ಗುಣಮಟ್ಟದ ವಸ್ತುಗಳನ್ನು ಪಡೆಯುವ ಹಾಗೂ ಕಡಿಮೆ

ದರದಲ್ಲಿ ವಸ್ತುಗಳನ್ನು ಕೊಂಡುಕೊಳ್ಳುವ ಚೌಕಾಸಿ ಮನೋಭಾವದವರು. ವ್ಯಾಪಾರಿಗಳು ಗ್ರಾಹಕರನ್ನು ಪರಿಚಯ ಮಾಡಿಕೊಂಡು ಅವರ ಜೊತೆ ಸ್ನೇಹದಿಂದ ವರ್ತಿಸುವ ಮನೋಭಾವದವರಾಗಿದ್ದಾರೆ. ಗ್ರಾಹಕರಲ್ಲಿಯೂ ಕೆಲವರು ಹೀಗೆ ಮಾತನಾಡುವವರ ಹತ್ತಿರ ಹೆಚ್ಚು ಹೋಗುವವರಿರುತ್ತಾರೆ. ವ್ಯಾಪಾರಸ್ಥರಿಂದ ಹೆಚ್ಚಿನ ಮಾತಿನ ಸವಿಯನ್ನು ಇಚ್ಛಿಸುವ ಮನೋಭಾವ ಗ್ರಾಹಕರದಾಗಿರುತ್ತದೆ./ ಸಂತೆಗಳಲ್ಲಿ ಗ್ರಾಹಕರು ತಮ್ಮ ಇಚ್ಛೆಗೆ ಒಪ್ಪಿಗೆಯಾಗುವ ಪದಾರ್ಥಗಳನ್ನು ಮಾತ್ರ ಖರೀದಿಸುವ ಮನೋಭಾವ ಹೊಂದಿದ್ದು, ವ್ಯಾಪಾರಸ್ಥರ ಮೋಸಕ್ಕೆ ಒಳಗಾಗದಂತೆ ಪ್ರತಿ ಕ್ಷಣದಲ್ಲೂ ಎಚ್ಚರಿಕೆಯನ್ನು ಹೊಂದಿರುತ್ತಾರೆ ಮತ್ತು ಅಂತಹ ಮನೋಭಾವ ಅವರದಾಗಿರುತ್ತದೆ. ಗ್ರಾಹಕರಲ್ಲಿ ವಿವಿಧ ವರ್ಗಗಳಿದ್ದು ಶ್ರೀಮಂತರು, ಮಧ್ಯಮವರ್ಗದವರು ಮತ್ತು ಬಡವರ್ಗದವರಿರುತ್ತಾರೆ. ಶ್ರೀಮಂತ ಗ್ರಾಹಕರು ಮುಂಜಾನೆಯ ಹೊತ್ತಿನಲ್ಲಿ ವ್ಯಾಪಾರವನ್ನು ಸಂತೆಗಳಲ್ಲಿ ಮಾಡುವ ಮನೋಭಾವ ಕಂಡುಬಂದರೆ, ಮಧ್ಯಮ ವರ್ಗದ ಮತ್ತು ಬಡವರ್ಗದ ಗ್ರಾಹಕರು ಮಧ್ಯಾಹ್ನ ಮತ್ತು ಸಾಯಂಕಾಲದ ವೇಳೆಗೆ ವ್ಯಾಪಾರ ಮಾಡಬೇಕೆಂಬ ಮನೋಭಾವ ಹೊಂದಿದ್ದಾರೆ.

ಹೀಗೆ ಸಂತೆಗಳಲ್ಲಿ ಗ್ರಾಹಕರು ಮತ್ತು ವ್ಯಾಪಾರಸ್ಥರಿಗೂ ನಡುವೆ ವಿವಿಧ ರೀತಿಯ ಮನೋಭಾವಗಳಿರುವುದು ಕಂಡುಬರುತ್ತದೆ. ಸಂತೆಯಲ್ಲಿ ನಡೆಯುವ ವಿವಿಧ ರೀತಿಯ ಚಟುವಟಿಕೆಗಳಲ್ಲಿ ಅವರವರ ಮನೋಭಾವಗಳು ಅವರವರ ಚಟುವಟಿಕೆಯ ಮೇಲೆ ಮಹತ್ವಪೂರ್ಣವಾದ ಮತ್ತು ಪರಿಣಾಮಕಾರಿಯಾದ ಪ್ರಭಾವವನ್ನು ಬೀರುತ್ತದೆ. ಈ ಮನೋಭಾವ ಎನ್ನುವುದು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿದ್ದು, ಅವರವರ ವಿವೇಚನೆಗೆ ತಕ್ಕಂತಿರುತ್ತದೆ. ಒಟ್ಟಾರೆಯಾಗಿ ಜನಜಂಗುಳಿ ಯಿಂದೊಡಗೂಡಿರುವ ಸಂತೆಗಳಲ್ಲಿ ಮನೋಭಾವ ಎನ್ನುವ ಪದ ಅಥವಾ ಅಂಶವು ಪರಿಣಾಮಕಾರಿಯಾಗಿ ತನ್ನ ಕಾರ್ಯನಿರ್ವಹಿಸುತ್ತಿರುತ್ತದೆ ಎಂಬುದು ಮಹತ್ವದ ಸಂಗತಿಯಾಗಿದೆ.

### ೩:೩ ಸಂತೆಯ ಲಕ್ಷಣಗಳು

ಸಂತೆಯ ಲಕ್ಷಣಗಳನ್ನು ಪರಿಪೂರ್ಣವಾಗಿ ತಿಳಿದುಕೊಳ್ಳಬೇಕಾದರೆ ಸಂತೆಯಲ್ಲಿ ಅಪ್ರತ್ಯಕ್ಷವಾಗಿ ಕಂಡುಬರುವ ಆರ್ಥಿಕ ಅಂಶಗಳು, ಸಾಮಾಜಿಕ ಅಂಶಗಳು, ರಾಜಕೀಯ ಅಂಶಗಳು, ಮನರಂಜನಾತ್ಮಕ ಅಂಶಗಳು ಮತ್ತು ಧಾರ್ಮಿಕ ಅಂಶಗಳನ್ನು ಸರಿಯಾಗಿ ವಿಶ್ಲೇಷಿಸಿ ವಿವೇಚಿಸಬೇಕಾಗುತ್ತದೆ. ಅವುಗಳನ್ನು ಈ ಕೆಳಗಿನಂತೆ ಸವಿವರವಾಗಿ ವಿವೇಚಿಸಲಾಗಿದೆ.

### ೩:೩:೧ ಆರ್ಥಿಕ ಅಂಶಗಳು

೧. **ಕೂಲಿಕಾರ್ಮಿಕರಿಗೆ ಮತ್ತು ವರ್ತಕರಿಗೆ ಆದಾಯದ ಮೂಲವಾಗಿದೆ :** ಕೂಲಿ ಮಾಡಿಕೊಂಡು ದಿನನಿತ್ಯದ ಜೀವನ ನಡೆಸುವ ಕೂಲಿಕಾರ್ಮಿಕ ವರ್ಗದವರು ಸಂತೆಯಲ್ಲಿ ಬಹಳಷ್ಟು ಜನ ಕಂಡುಬರುತ್ತಾರೆ. ಈ ವರ್ಗದ ಜನರು ವಾರಕ್ಕೆ, ಒಂದು ಬಾರಿ ನಡೆಯುವ ಸಂತೆಯನ್ನೇ ಅವಲಂಬಿಸಿ ಜೀವನ ನಡೆಸುತ್ತಾರೆ.

ಈ ವರ್ಗದಲ್ಲಿ ಹಮಾಲಿ ಮಾಡುವವರು, ರಿಕ್ಷಾದವರು, ಬಂಡಿಯಿಂದ ಹಮಾಲಿ ಮಾಡುವವರು ಮುಂತಾದವರು ಕಂಡುಬರುತ್ತಾರೆ. ಅದೇ ರೀತಿಯಲ್ಲಿ ಬಹಳ ಪ್ರಭಾವ ಬೀರುವವರೆಂದರೆ ವರ್ತಕರು. ಇವರು ತಮ್ಮ ದಿನನಿತ್ಯದ ಜೀವನಕ್ಕಾಗಿ ಸಂತೆಯನ್ನೇ ಅವಲಂಬಿಸಿರುತ್ತಾರೆ. ಇವರಿಗೆ ಸಂತೆಯಲ್ಲಿ ನಡೆಯುವ ವ್ಯವಹಾರದ ಚಟುವಟಿಕೆಗಳೇ ಅವರ ಆದಾಯದ ಮೂಲಗಳಾಗಿವೆ.

**೨. ಸಂತೆಯ ವ್ಯವಹಾರ ಚಟುವಟಿಕೆಯ ಆದಾಯದ ಹೆಚ್ಚಳ ಮಳೆ ಬೆಳೆಯನ್ನು ಅವಲಂಬಿಸಿರುತ್ತದೆ:** ಹಳ್ಳಿಯಾಗಲಿ, ಪಟ್ಟಣ ಪ್ರದೇಶವಾಗಲಿ ಆಯಾ ಪ್ರದೇಶದಲ್ಲಿ ನಡೆಯುವ ಸಂತೆಗಳು ಮಳೆ-ಬೆಳೆಯನ್ನು ಅವಲಂಬಿಸಿ ಆದಾಯದ ಹೆಚ್ಚಳವನ್ನು ಹೊಂದಿರುತ್ತವೆ. ಆಯಾ ಕಾಲಕ್ಕೆ ಉತ್ತಮ ಮಳೆಯಾಗಿ ಬೆಳೆ ಬಂದರೆ ಸಂತೆಯ ವ್ಯವಹಾರವು ಉತ್ತಮವಾಗಿರುತ್ತದೆ. ಬರಗಾಲ ಪೀಡಿತ ಪ್ರದೇಶಗಳಲ್ಲಿ ಸಂತೆಯ ವ್ಯವಹಾರ ಚಟುವಟಿಕೆಗಳು ಕಡಿಮೆಯಾಗಿರುತ್ತವೆ. ಆದಾಯವು ಹೆಚ್ಚಿ ಕೃಷಿಕರ ಜೀವನ ಉತ್ತಮವಾಗಿರುವುದಾದರೆ ಅದಕ್ಕೆ ಮಳೆ-ಬೆಳೆಯೇ ಕಾರಣ. ಅದಕ್ಕಾಗಿ ಸುಗ್ಗಿಯ ಕಾಲದಲ್ಲಿ ಸಂತೆಗಳು ಉತ್ತಮ ಸ್ಥಿತಿಯಲ್ಲಿ ಕಂಡುಬರುತ್ತವೆ. ಒಟ್ಟಾರೆಯಾಗಿ ಹೇಳುವುದಾದರೆ ಸಂತೆಗಳ ಆದಾಯ ಹೆಚ್ಚಲು ಇಲ್ಲವೆ ಕೃಷಿಕರ ಆದಾಯ ಹೆಚ್ಚಲು ಮಳೆ ಬೆಳೆಯ ಉತ್ತಮ ಸ್ಥಿತಿ ಅತ್ಯಗತ್ಯ.

**೩. ಆದಾಯಕ್ಕನುಗುಣವಾಗಿ ತೆರಿಗೆ ಸಂಗ್ರಹ :** ಸರ್ಕಾರದಿಂದ ಅನುಮತಿಯನ್ನು ಪಡೆದ ಅಥವಾ ಗ್ರಾಮಮಟ್ಟದಲ್ಲಿ ಗ್ರಾಮಪಂಚಾಯತಿಗಳಿಂದ ಅನುಮತಿಯ ಪಡೆದು ಟೆಂಡರ್ ಮೂಲಕ ವಾರ್ಷಿಕ ತೆರಿಗೆಯ ಹಣವನ್ನು ಮುಂಚಿತವಾಗಿಯೆ ಕೊಟ್ಟು, ತಾವು ಸಂತೆಯ ದಿನದಂದು ಮಾತ್ರ ತೆರಿಗೆ ಸಂಗ್ರಹ ಮಾಡುವ ಪ್ರಕ್ರಿಯೆಯನ್ನು ಸಂತೆಯಲ್ಲಿ ಕಾಣಬಹುದು. ತೆರಿಗೆ ಸಂಗ್ರಹಕಾರರು ಸಂತೆಯಲ್ಲಿ ಸಣ್ಣ ಅಂಗಡಿ, ದೊಡ್ಡ ಅಂಗಡಿಗಳು, ಚಿಲ್ಲರೆ ವ್ಯಾಪಾರಿಗಳು, ಬಂಡವಾಳಶಾಹಿ ವ್ಯಾಪಾರಿಗಳು ಹೀಗೆ ನಾನಾ ರೀತಿಯ ವ್ಯಾಪಾರಿಗಳಿಂದ ತೆರಿಗೆಯನ್ನು ಸಂಗ್ರಹಿಸುವ ವ್ಯವಸ್ಥೆಯು ಸಂತೆಯಲ್ಲಿ ಕಂಡುಬರುತ್ತವೆ. ಇದು ಅಲ್ಲಿನ ಗ್ರಾಮ ಪಂಚಾಯಿತಿಗೆ, ಊರಿಗೆ, ಸರ್ಕಾರಕ್ಕೆ ಆರ್ಥಿಕ ಸಹಾಯವಾಗುತ್ತದೆ. ಅದಕ್ಕಾಗಿಯೇ ಸಂತೆಗಳು ಆರ್ಥಿಕ ಅಂಶಗಳನ್ನು ಹೊಂದಿರುವ ಲಕ್ಷಣವನ್ನು ಒಳಗೊಂಡಿದೆ.

**೪. ಭಿಕ್ಷುಕರಿಗೆ, ವೃದ್ಧರಿಗೆ, ಅನಾಥರಿಗೆ ಆದಾಯ ಮೂಲ :** ಸಂತೆಯಲ್ಲಿ ಸರ್ವೇಸಾಮಾನ್ಯವಾಗಿ ಕಂಡುಬರುವ ಜನರಲ್ಲಿ ಭಿಕ್ಷುಕರು, ವೃದ್ಧರು ಅನಾಥರು ಉಂಟು. ಇವರು ತಮ್ಮ ಬದುಕಿಗೆ ಜನಸಂದಣೀಯ ಸ್ಥಳವನ್ನು ಆಯ್ಕೆ ಮಾಡಿಕೊಂಡಿರುತ್ತಾರೆ. ಅಂತವುಗಳಲ್ಲಿ ಸಂತೆಗಳು ಸಹ ಒಂದು. ಈ ಸಂತೆಯಲ್ಲಿ ಇವರುಗಳು ಭಿಕ್ಷೆಯನ್ನು ಬೇಡುವುದರಿಂದ ಅವರಿಗೆ ಹೆಚ್ಚು ಹಣ ಸಂಗ್ರಹವಾಗುವುದು. ಇದರಿಂದ ಅವರ ಜೀವನ ನಿರ್ವಹಣೆಗೆ ಸಂತೆಗಳು ಆದಾಯದ ಮೂಲವಾಗಿದೆ.

**೫. ಸಾರಿಗೆ ವ್ಯವಸ್ಥೆಯ ಆದಾಯಕ್ಕೆ ಸಂತೆಗಳು ಸ್ವಲ್ಪಮಟ್ಟಿಗೆ ಆಧಾರ :** ಭಾರತದ ಅರ್ಥವ್ಯವಸ್ಥೆಯಲ್ಲಿ ಕೃಷಿ ಮನುಷ್ಯನ ಅಸ್ಥಿಪಂಜರ, ಸಾರಿಗೆ ಮನುಷ್ಯನ ನರನಾಡಿಗಳು ಎಂದು ಹೋಲಿಸಲಾಗುತ್ತದೆ. ಇಂತಹ ಸಾರಿಗೆಗೆ ಆದಾಯದ ಕೇಂದ್ರಬಿಂದುವಾಗಿ ಸಂತೆಗಳು ಕಂಡುಬರುತ್ತವೆ. ಸಂತೆಯಲ್ಲಿ ನಾನಾ ವಸ್ತುಗಳನ್ನು

ವರ್ತಕರು ಮಾರಾಟ ಮಾಡಲು ಬೇರೊಂದು ಊರಿನಿಂದ ತರುತ್ತಾರೆ, ತಂದು ಮಾರುತ್ತಾರೆ. ಅವರು ಸಾಮಗ್ರಿಗಳನ್ನು ಹೊತ್ತು ತರುವ ಕಾರ್ಯವನ್ನು ಸಾರಿಗೆ ವ್ಯವಸ್ಥೆ ಮಾಡುತ್ತದೆ. ಅದಕ್ಕಾಗಿ ಸಾರಿಗೆಗೆ ಆದಾಯವು ಸಂತೆಗಳಿಂದಲೂ ಆಗುತ್ತದೆ. ಇದರಿಂದ ಸಂತೆಗಳು ಸ್ವಲ್ಪಮಟ್ಟಿಗೆ ಸಾರಿಗೆಯ ಆರ್ಥಿಕತೆಗೆ ಅನುಕೂಲಕರವಾಗಿವೆ. ಅದೇ ರೀತಿಯಲ್ಲಿ ವರ್ತಕರಿಗೂ, ಗ್ರಾಹಕರು ಇದರಿಂದ ಅನುಕೂಲವಿದೆ. ಸಾರಿಗೆ ವ್ಯವಸ್ಥೆ ಇರದಿದ್ದರೇ ಸಂತೆಗಳಿಗೂ ತುಂಬಾ ಅನನುಕೂಲವಾಗುತ್ತದೆ.

**೬. ರಾಷ್ಟ್ರೀಯ ಆದಾಯದಲ್ಲಿ ಹೆಚ್ಚಳ :** ಸಂತೆಗಳು ಆರ್ಥಿಕ ಚಟುವಟಿಕೆಯ ಕೇಂದ್ರಬಿಂದುಗಳು. ಸಾಮಾನ್ಯವಾಗಿ ಸಾರಿಗೆಯಿಂದ ಬರುವ ಆದಾಯವು ನೇರವಾಗಿ ಸರ್ಕಾರದ ಬೊಕ್ಕಸಕ್ಕೆ ಸೇರುವುದರಿಂದ ಸರಳವಾಗಿ ರಾಷ್ಟ್ರೀಯ ಆದಾಯದಲ್ಲಿ ಹೆಚ್ಚಳವಾಗುತ್ತದೆ. ರಾಷ್ಟ್ರೀಯ ಆದಾಯ ಹೆಚ್ಚಳ ವಾಗುವುದರಿಂದ ರಾಷ್ಟ್ರವು ತನ್ನ ಇತರ ಕ್ಷೇತ್ರಗಳಾದ ಶಿಕ್ಷಣ, ಕೈಗಾರಿಕೆ, ಸಂಪರ್ಕ ವ್ಯವಸ್ಥೆ ಮತ್ತು ಆರೋಗ್ಯ ಕ್ಷೇತ್ರಗಳಲ್ಲಿ ಗಣನೀಯವಾದ ಸುಧಾರಣೆಗೆ ಸಹಾಯಕವಾಗುತ್ತದೆ. ಇದಕ್ಕೆ ಸಂತೆಯ ಆರ್ಥಿಕ ಚಟುವಟಿಕೆ ತೆರಿಗೆಯನ್ನು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ನೀಡುವುದರಿಂದ ರಾಷ್ಟ್ರೀಯ ಆದಾಯದಲ್ಲಿ ಹೆಚ್ಚಳ ಕಂಡುಬರುತ್ತದೆ.

**೭. ಬ್ಯಾಂಕಿಂಗ್ ವಹಿವಾಟಿಗೆ ಸಂತೆ ಪರೋಕ್ಷವಾಗಿ ಸಹಕಾರಿ :** ಸಂತೆಯಲ್ಲಿ ವ್ಯಾಪಾರ ಮಾಡುವ ವರ್ತಕರು ವ್ಯಾಪಾರ ಆರಂಭ ಮಾಡಲು ಒಂದೇ ಬಾರಿಗೆ ಬಂಡವಾಳವನ್ನು ಹಾಕಲು ಸಾಧ್ಯವಾಗುವುದಿಲ್ಲ. ಆಗ ವರ್ತಕರು ಸಾಮಾನ್ಯವಾಗಿ ಬ್ಯಾಂಕಿನ ಮೊರೆ ಹೋಗುತ್ತಾರೆ. ಬ್ಯಾಂಕಿನಲ್ಲಿ ಸಾಲ ಪಡೆದು ಸಂತೆಯಲ್ಲಿ ವ್ಯಾಪಾರ ಮಾಡುವ ಮೂಲಕ ಸಂತೆ-ಸಂತೆಗೂ ಸ್ವಲ್ಪ-ಸ್ವಲ್ಪ ಹಣವನ್ನು ಕಟ್ಟುವ ಪ್ರಕ್ರಿಯೆಯನ್ನು ಹೊಂದಿರುತ್ತಾರೆ. ಈ ರೀತಿಯಲ್ಲಿಯೂ ಸಹ ಬ್ಯಾಂಕಿಂಗ್ ವಹಿವಾಟಿಗೆ ಮತ್ತು ಬ್ಯಾಂಕಿನ ಆದಾಯ ಹೆಚ್ಚಿಸುವ ಸಂತೆಯು ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ.

**೮. ತಲಾ ವರಮಾನದಲ್ಲಿ ಹೆಚ್ಚಳ :** ಒಂದು ವರ್ಷದಲ್ಲಿ ಆದ ಲಾಭದ ಪ್ರಮಾಣದಲ್ಲಿ ಒಬ್ಬ ವ್ಯಕ್ತಿಗೆ ಬರುವ ವರಮಾನಕ್ಕೆ ತಲಾ ವರಮಾನ ಎನ್ನುವರು. ಸಂತೆಯಲ್ಲಿ ವ್ಯಾಪಾರಿಗಳು ತಮ್ಮ ಚಾಣಾಕ್ಷತನದಿಂದ ಗ್ರಾಹಕರ ಮನ ಸೆಳೆದು ಆದಷ್ಟು ಲಾಭವನ್ನು ತರುವಲ್ಲಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸಿ ತಮ್ಮ ವಾರ್ಷಿಕ ವರಮಾನವನ್ನು ಹೆಚ್ಚಿಸಿಕೊಳ್ಳುತ್ತಾರೆ.

ಈ ಮೇಲಿನ ಎಲ್ಲ ಅಂಶಗಳು ಸಂತೆಯ ಬಗೆಗೆ ಸಂಬಂಧಿಸಿವೆ. ಇವುಗಳಲ್ಲಿ ಆರ್ಥಿಕ ಅಂಶಗಳು ಪ್ರಮುಖವಾಗಿರುವುದು ಕಂಡುಬರುತ್ತದೆ.

### ೩:೩:೨ ಸಾಮಾಜಿಕ ಅಂಶಗಳು

**೧. ಸಾಮಾಜಿಕ ಐಕ್ಯತೆಯನ್ನು ಮೂಡಿಸುವಲ್ಲಿ ಸಹಾಯಕಾರಿಯಾಗಿದೆ :** ಸಂತೆಯ ವ್ಯಾಪಾರಿಗಳ ಮತ್ತು ಗ್ರಾಹಕರ ಮನೋಭಾವ ಬೇರೆ ಬೇರೆಯಾಗಿರುತ್ತದೆ. ಏಕೆಂದರೆ ಗ್ರಾಹಕರು ಕಡಿಮೆ ದರದಲ್ಲಿ ವಸ್ತುಗಳನ್ನು ಖರೀದಿಸುವ ಮನೋಭಾವವಿದ್ದರೆ, ಲಾಭಾಂಶ ಪಡೆಯಬೇಕೆಂಬ ಮನೋವೃತ್ತಿ ವರ್ತಕರಲ್ಲಿರುತ್ತದೆ. ಈ ಒಂದು ಮನೋಭಾವ ಬೇರೆಯಾಗಿದ್ದರೂ, ಜಾತಿಯ ಅಸಮಾನತೆ ಅಥವಾ ಸಾಮಾಜಿಕ ಅಸಮಾನತೆ

ಸಂತೆಗಳಲ್ಲಿ ಕಂಡುಬರುವುದಿಲ್ಲ. ಭಾರತೀಯ ಸಮಾಜದಲ್ಲಿ ವರ್ಣವ್ಯವಸ್ಥೆಯಿದ್ದು, ಅದು ಸಾರ್ವಜನಿಕ ಸ್ಥಳವಾದ ಸಂತೆಗಳಲ್ಲಿ ಗೌಣ್ಯವಾಗಿರುತ್ತದೆ. ಎಲ್ಲರೂ ಕೂಡಿ ವ್ಯವಹರಿಸುವ, ಇತರರಲ್ಲಿ ಕೊಂಡುಕೊಳ್ಳುವಿಕೆ ವಿವಿಧ ಜಾತಿ ವರ್ಗದವರಲ್ಲಿ ಕಂಡುಬರುತ್ತದೆ. ಆದ್ದರಿಂದ ಈ ಸಂತೆಯೆಂಬ ವ್ಯವಸ್ಥೆಯು ಸಾಮಾಜಿಕ ಐಕ್ಯತೆಯನ್ನು ಮೂಡಿಸುವಲ್ಲಿ ಸಹಕಾರಿಯಾಗಿರುತ್ತದೆ ಮತ್ತು ಪರೋಕ್ಷವಾಗಿ ಪರಿಣಾಮವನ್ನು ಬೀರುತ್ತಿರುತ್ತದೆ.

**೨. ಜಾತ್ಯತೀತ :** ಸಂತೆಗಳಲ್ಲಿ ಜಾತಿಯ ಪ್ರಸ್ತಾಪವೇ ಇಲ್ಲವೆಂದ ಮೇಲೆ ಅಲ್ಲಿ ಸಮಾನತೆಗೆ ಅವಕಾಶವಿದೆ. ಏಕೆಂದರೆ ಜಾತಿಯಲ್ಲಿ ಸಮಾಂತರ ಚಲನೆಗೆ ಅವಕಾಶವಿಲ್ಲ. ಸಮಾಂತರ ಚಲನೆ ಎಂದರೆ ಕೆಳವರ್ಗದ ಜನರು ತಮಗೆ ಇಷ್ಟಬಂದ ವೃತ್ತಿ ಅಥವಾ ವ್ಯವಹಾರಗಳನ್ನು ಸ್ವತಂತ್ರವಾಗಿ ನಡೆಸುವುದಾಗಿದೆ. ಇಲ್ಲವೇ ತಮ್ಮ ವೃತ್ತಿಯನ್ನೇ ಮುಂದುವರೆಸಿಕೊಂಡು ಹೋಗಬಹುದು. ಈ ರೀತಿಯ ಪ್ರಕ್ರಿಯೆಯಿಂದ ಸಮಾಂತರ ಚಲನೆಗೆ ಸಂತೆಯಲ್ಲಿ ಅವಕಾಶವಿದೆ. ಜಾತಿಯ ವಿಷ ಬೀಜವನ್ನು ಕಿತ್ತು ಹಾಕಬಹುದೆಂದು ಸಂತೆಯನ್ನು ಉದಾಹರಣೆಯಾಗಿಟ್ಟುಕೊಂಡು ಹೇಳಬಹುದು. ಅದಕ್ಕಾಗಿ ಸಂತೆಯ ಈ ರೀತಿಯ ಸಾಮಾಜಿಕ ಅಂಶವನ್ನು ಒಳಗೊಂಡಿದೆ.

**೩. ಸಾಮಾಜಿಕ ಬದಲಾವಣೆಗೆ ಅವಕಾಶ :** ಸಮಾಜವು ನಿಂತ ನೀರಲ್ಲ. ಅದು ಬದಲಾವಣೆ ಹೊಂದುವ ಗುಣ ಲಕ್ಷಣಗಳನ್ನು ಒಳಗೊಂಡಿದೆ. ಭಾರತದಂತಹ ಸಂಕೀರ್ಣ ಸಮಾಜದಲ್ಲಿ ಬದಲಾವಣೆ ಯಾಗುತ್ತಿರುವುದಕ್ಕೆ ಸಂತೆಯು ಪರೋಕ್ಷವಾಗಿ ಕಾರಣವಾಗಿದೆ. ಸಂತೆಯಲ್ಲಿ ಅನೇಕ ವಯೋಮಾನದವರು, ಅನೇಕ ಜಾತಿ ಸಮೂಹಗಳಿಗೆ ಸೇರಿದವರು ಇರುವುದರಿಂದ ಅವರು ವ್ಯವಹಾರವನ್ನೇ ಪ್ರಧಾನವಾಗಿ ಪರಿಗಣಿಸುತ್ತಾರೆ. ಮತ್ತು ಯಾವುದೇ ರೀತಿಯ ಅಸಮಾನತೆಗೆ ಬೆಲೆ ಕೊಡುವ ಮನೋಭಾವದವರಾಗಿರುವುದಿಲ್ಲ. ಈ ನಿಟ್ಟಿನಲ್ಲಿ ಸಂತೆಯಲ್ಲಿನ ಆಧುನಿಕ, ನಾಗರಿಕ ಬದುಕು ಸಾಮಾಜಿಕ ಬದಲಾವಣೆ ಬುನಾದಿಯನ್ನು ಒದಗಿಸುತ್ತದೆ.

**೪. ಸಹಕಾರ ಮತ್ತು ಶ್ರಮ ವಿಭಜನೆ :** ವ್ಯಕ್ತಿಗಳ ನಡುವಿನ ಹೋಲಿಕೆ ವ್ಯತ್ಯಾಸಗಳು ಶ್ರಮ ವಿಭಜನೆಗೆ ಕಾರಣವಾಗಿದೆ. ಸಾಮಾನ್ಯ ಕಾರ್ಯವೊಂದನ್ನು ಜನರು ತಮ್ಮ ಆಸಕ್ತಿ, ಅಭಿರುಚಿ, ಕ್ಷಮತೆ ಸಾಮರ್ಥ್ಯ, ವಯೋಮಾನ ಹಾಗೂ ಲಿಂಗ ಭೇದ ಇವುಗಳ ಆಧಾರದ ಮೇಲೆ ತಮ್ಮೊಳಗೆ ಹಂಚಿಕೊಂಡು ಮಾಡುವುದನ್ನು ಶ್ರಮ ವಿಭಜನೆ ಎನ್ನಬಹುದು. ಇಂತಹ ಅಂಶಗಳು ಸಂತೆಯಲ್ಲಿ ಕಂಡುಬರುತ್ತವೆ. ಸಂತೆಯಲ್ಲಿನ ವ್ಯಾಪಾರಸ್ಥರು ತಮಗೆ ಅನುಕೂಲವಾಗುವ ಹಾಗೆ ಶ್ರಮವನ್ನು ನಿರ್ವಹಿಸುತ್ತಿರುತ್ತಾರೆ. ಮತ್ತು ಅವರೊಳಗೆ ಸಹಕಾರ ಉಂಟಾಗುತ್ತದೆ. ಏಕೆಂದರೆ ಸಂತೆಗಳಿಂದ ಸಂತೆಗಳಿಗೆ ಅವರು ವ್ಯವಹರಿಸುವುದರಿಂದ ಸಾಮಾಜಿಕ ಅಂಶವಾದ ಸಹಕಾರ ಭಾವನೆ ಅವರಲ್ಲಿ ಬೆಳೆದುಬರುವುದು.

**೫. ಸಾಮಾಜಿಕ ಸಂಘ ಸಂಸ್ಥೆಗಳ ಹುಟ್ಟಿಗೆ, ಸಂಘಟನಾ ವ್ಯವಸ್ಥೆಗೆ ಉತ್ತೇಜನಕಾರಿ :** ಸಂತೆಗಳು ಸಂಘಸಂಸ್ಥೆಗಳ ಹುಟ್ಟಿಗೆ ಉತ್ತೇಜನಕಾರಿಯಾಗಿರುತ್ತದೆ. ಏಕೆಂದರೆ ಸಂತೆಗಳು ನಿರ್ದಿಷ್ಟವಾಗಿ ಮತ್ತು ಸ್ಪಷ್ಟವಾಗಿ ಕಣ್ಣಿಗೆ ಗೋಚರಿಸುವುದರಿಂದ ಸಂತೆಯಲ್ಲಿ ಅನೇಕ ಜನಸಮೂಹಗಳು ಇರುವುದು ಕಂಡುಬರುತ್ತದೆ. ಸಂತೆಯಲ್ಲಿ ಬದುಕು ಸಾಗಿಸುವ ತರಕಾರಿ ವ್ಯಾಪಾರಸ್ಥರು, ಹಮಾಲಿಗಳು, ಮಧ್ಯವರ್ತಿಗಳು, ವರ್ತಕರು

ಹೀಗೆ ಹತ್ತು ಹಲವಾರು ಜನ ಸಮೂಹಗಳಿರುವುದರಿಂದ ಅವರಲ್ಲಿ ಸಂಘಸಂಸ್ಥೆಗಳ ಹುಟ್ಟಿಗೆ ಸಹಜವಾಗಿಯೇ ಸಂತೆಗಳು ಕಾರಣವಾಗಿವೆ. ಉದಾಹರಣೆಗೆ ತರಕಾರಿ ವರ್ತಕರ ಸಂಘ, ಹಮಾಲಿಗಳ ಸಂಘ, ದಲ್ಲಾಳಿಗಳ ಸಂಘ ಹೀಗೆ ಹಲವಾರು ಸಂಘಗಳು ಹುಟ್ಟಿ ಸಾಮಾಜಿಕ ಸುವ್ಯವಸ್ಥೆಗೆ ಸಮೂಹ ಜೀವನಕ್ಕೆ ಸಾಮಾಜಿಕ ಐಕ್ಯತೆಗೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಂತೆ ಕಾರಣವಾಗಿದೆ.

೬. **ವಿಭಿನ್ನ ಸಮಾಜಗಳ ಮತ್ತು ಸಂಸ್ಕೃತಿಗಳ ಆಗರ :** ಸಂತೆಗಳು ವಿಭಿನ್ನ ಸಮಾಜಗಳ ಮತ್ತು ಸಂಸ್ಕೃತಿಗಳ ಆಗರವಾಗಿ ಕಂಡುಬರುತ್ತವೆ. ಏಕೆಂದರೆ ಸಂತೆಯಲ್ಲಿ ವಿವಿಧ ಧರ್ಮದ ಅನುಯಾಯಿಗಳಾದ ಹಿಂದೂ, ಕ್ರೈಸ್ತ, ಮುಸ್ಲಿಂ, ಸಿಖ್, ಜೈನ ಹೀಗೆ ಅನೇಕ ಸಮಾಜಗಳ ಮತ್ತು ಅವರ ವೇಷಭೂಷಣಗಳಿಂದ ಒಡಗೂಡಿದ ಸಾಂಸ್ಕೃತಿಕ ಅಂಶಗಳು, ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ಆಚರಣೆ ಕ್ರಿಯೆಗಳು ಸಂತೆಯಲ್ಲಿ ಕಂಡುಬರುತ್ತವೆ. ಅದಕ್ಕಾಗಿ ಸಂತೆಗಳು ವಿಭಿನ್ನ ಸಮಾಜಗಳ ಮತ್ತು ಸಂಸ್ಕೃತಿಗಳ ಆಗರ ಎನ್ನಬಹುದು. ಅವುಗಳ ಬೆರೆಯುವಿಕೆಗೆ ಈ ಸಂತೆಗಳು ಪೂರಕವಾಗಿರುವುದು. ಪ್ರಸ್ತುತ ಈ ಎಲ್ಲಾ ಅಂಶಗಳು ಸಂತೆಯ ಸಾಮಾಜಿಕ ಅಂಶಗಳನ್ನು ಪ್ರತಿಬಿಂಬಿಸುತ್ತವೆ.

### ೩:೩:೩ ರಾಜಕೀಯ ಅಂಶಗಳು

೧. **ರಾಜಕೀಯ ಧುರೀಣರಿಗೆ ಸೂಕ್ತವಾದ ವೇದಿಕೆ :** ಸಾಂದರ್ಭಿಕವಾಗಿ ಸಂತೆಯಲ್ಲಿ ರಾಜಕೀಯ ಮಾಡುವ ಜನರೇ ಬಹಳಷ್ಟು. ಏಕೆಂದರೆ ಸಂತೆಯು ಜನ ಸಮೂಹವನ್ನು ಹೊಂದಿರುವಂತದ್ದು. ಅಲ್ಲಿ ಕಾರುಬಾರು ಜನರಿದ್ದಲ್ಲಿ ರಾಜಕೀಯ ವ್ಯಕ್ತಿಗಳು ಹಾಜರ್. ಸಂತೆಯ ದಿನದಂದು ಗ್ರಾಮೀಣ ಜನತೆ ತಮ್ಮ ಜೀವನೋಪಾಯಕ್ಕಾಗಿ ಇಲ್ಲವೇ ದಿನೋಪಯೋಗಿ ವಸ್ತುಗಳ ಖರೀದಿಗಾಗಿ ಬರಲೇಬೇಕು. ಜನರಿದ್ದಲ್ಲಿ ರಾಜಕೀಯ ವ್ಯಕ್ತಿಗಳು ಬರುವುದು ಸಹಜ. ಜನಸಂದಣಿಯನ್ನು ತಮ್ಮ ರಾಜಕೀಯಕ್ಕಾಗಿ ಇಲ್ಲವೇ ರಾಜಕೀಯ ಪಕ್ಷದ ಲಾಭಗಾಗಿ ಬಳಸಿಕೊಳ್ಳುವುದು ಉಂಟು. ಇಂತಹ ಸ್ಥಳಗಳನ್ನೇ ರಾಜಕೀಯ ಧುರೀಣರು ಬಳಸಿಕೊಂಡಿರುವ ಉದಾಹರಣೆಗಳನ್ನು ಸಹ ಕಾಣುತ್ತೇವೆ. ಇಂತಹ ಪ್ರಕ್ರಿಯೆ ಸದಾ ಅಲ್ಲದಿದ್ದರೂ ಚುನಾವಣೆ ಸಂದರ್ಭಗಳಲ್ಲಿ ಹೆಚ್ಚು.

೨. **ಪ್ರಜಾಪ್ರಭುತ್ವದ ಅಂಶಗಳನ್ನು ಪ್ರತಿಬಿಂಬಿಸುವಂತದ್ದು :** ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ, ಮತ್ತು ಜಾತ್ಯತೀತತೆಯ ಅಂಶಗಳು ರಾಜಕೀಯ ಅಂಶಗಳಾಗಿದ್ದು ಪ್ರಜಾಪ್ರಭುತ್ವದ ಅಡಿಯಲ್ಲಿ ಬರುವಂತವುಗಳಾಗಿದ್ದರಿಂದ ಸಂತೆಯಲ್ಲಿಯೂ ಸಹ ಇಂತಹ ಲಕ್ಷಣಗಳನ್ನು ಕಾಣುತ್ತೇವೆ. ಉದಾಹರಣೆಗೆ ಸ್ವತಂತ್ರವಾಗಿ ಜನರು/ವರ್ತಕರು ತಮಗೆ ಬೇಕಾದ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳಬಹುದು. ಸಮಾನತೆಯ, ಜಾತ್ಯತೀತತೆಯ ವಿಷಯಕ್ಕೆ ಸಂಬಂಧಿಸಿದದಂತೆ ಹೇಳುವುದಾದರೆ ಯಾವುದೇ ರೀತಿಯ ಭೇದ ಭಾವ ಮಾಡುವ ಅಂಶಗಳು ಸಂತೆಯಲ್ಲಿ ಕಂಡುಬರುವುದಿಲ್ಲ. ಅದಕ್ಕಾಗಿಯೇ ಸಂತೆಗಳು ರಾಜಕೀಯ ಕ್ಷೇತ್ರಕ್ಕೆ ಸಂಬಂಧಿಸಿದ ಅಂಶಗಳನ್ನು ಒಳಗೊಂಡಿವೆ.

೩. **ನಾಯಕತ್ವದ ಗುಣ ಲಕ್ಷಣಗಳ ಬೆಳವಣಿಗೆಗೆ ಸಹಾಯಕಾರಿ :** ಸಂತೆಯಲ್ಲಿ ಕೇವಲ ಜನ ಜಂಗುಳಿ ಮಾತ್ರವಿರದೇ ಅದರದೇ ಆದ ತರಕಾರಿ ವರ್ತಕರ ಸಂಘ, ಹಮಾಲಿಗಳ ಸಂಘ ಹೀಗೆ ಅನೇಕ ಸಂಘಸಂಸ್ಥೆಗಳ ಸಂಘಟನೆಗಳನ್ನು ಸಂತೆಗಳಲ್ಲಿ ಕಾಣುತ್ತೇವೆ. ಇವುಗಳಲ್ಲಿರುವ ವ್ಯಕ್ತಿಗಳಿಗೆ ಉತ್ತಮ ನಾಯಕತ್ವದ ಗುಣಗಳನ್ನು ಬೆಳೆಸಿಕೊಳ್ಳಲು, ನಾಯಕತ್ವದ ಪಟ್ಟವನ್ನು ನಿರ್ವಹಿಸಲು ಉತ್ತಮವಾದ ವೇದಿಕೆಯು ಸಂತೆಗಳಾಗಿದ್ದು, ಇದರಲ್ಲಿರುವ ವ್ಯಕ್ತಿಗಳು ಒಳ್ಳೆಯ ನಾಯಕತ್ವವನ್ನು ಹೊಂದಲು ಮತ್ತು ಅಭಿವೃದ್ಧಿ ಹೊಂದಲು ಸಹಾಯಕಾರಿಯಾಗಿ ಸಂತೆಗಳು ಕಂಡುಬರುತ್ತವೆ.

ಈ ಮೇಲಿನ ಮೂರು ಅಂಶಗಳಷ್ಟೇ, ಅಲ್ಲದೇ ಇನ್ನು ಅನೇಕ ರಾಜಕೀಯ ಅಂಶಗಳು ಸಂತೆಯಲ್ಲಿ ಕಂಡುಬರುತ್ತವೆ. ಈ ರಾಜಕೀಯ ಅಂಶಗಳಿಂದ ಸಂತೆಗಳ ಲಕ್ಷಣವನ್ನು ಸ್ಪಷ್ಟವಾಗಿ ಗುರುತಿಸಬಹುದು.

### ೩:೩:೪ ಧಾರ್ಮಿಕ ಆಚರಣಾ ಅಂಶಗಳು

ಸಂತೆಗಳ ಲಕ್ಷಣವನ್ನು ವಿವರಿಸಲು ಸಾಮಾಜಿಕ ಅಂಶಗಳು, ರಾಜಕೀಯ ಅಂಶಗಳು, ಆರ್ಥಿಕ ಅಂಶಗಳು, ಮನರಂಜನಾತ್ಮಕ ಅಂಶಗಳು ಸಹಾಯಕಾರಿಯಾಗುವ ಹಾಗೆ, ಧಾರ್ಮಿಕ ಅಂಶಗಳು ಸಹ ಸಹಕಾರಿಯಾಗುತ್ತವೆ. ಸಂತೆಯಲ್ಲಿ ಮುಖ್ಯವಾಗಿ ಜನರು ತಮ್ಮ ತಮ್ಮ ವ್ಯಾಪಾರ ವಹಿವಾಟಿಗೆ ಬಂದಿರುತ್ತಾರಾದರೂ ಅವರುಗಳಲ್ಲಿಯೇ ಅಂದರೆ ಸಂತೆಯ ಜನಜಂಗುಳಿಯಲ್ಲಿಯೇ ಧರ್ಮದ ಅನುಸರಣೆಗಾಗಿ ಅನೇಕರು ಭಾಗವಹಿಸುವುದು ಸಹ ಉಂಟು. ಉದಾಹರಣೆಗೆ ಹೇಳಬೇಕೆಂದರೆ ಜೋಗಪ್ಪ-ಜೋಗಮ್ಮನವರು ಅವರ ಸಾಂಪ್ರದಾಯಿಕತೆಯ ಪಾಲನೆಗಾಗಿ ಮತ್ತು ಧರ್ಮದ ಬಗೆಗೆ ಅವರು ಹೊಂದಿರುವ ಮನೋಭಾವಕ್ಕಾಗಿ ಇಂದಿಗೂ ಸಂತೆಗಳಲ್ಲಿ ಭಿಕ್ಷೆ ಬೇಡುವುದು ಕಂಡುಬರುತ್ತದೆ. ಧಾರ್ಮಿಕ ಅಂಶಗಳು ಸಂತೆಯಲ್ಲಿ ಕಂಡುಬರಲು ಪ್ರಮುಖವಾದ ಅಂಶವೆಂದರೆ ಜನರು ತಮ್ಮ ಧರ್ಮದ ಬಗೆಗೆ ಅವರು ಹೊಂದಿರುವ ಮನೋಭಾವವೇ ಪ್ರಮುಖವಾದ ಅಂಶವಾಗಿದೆ. ಸುಡುಗಾಡು ಸಿದ್ಧರು, ಸಂತೆಗಳಲ್ಲಿ ತಮ್ಮ ಮನೆದೇವರನ್ನು ನೆನೆಯುತ್ತಾ ಭಿಕ್ಷೆಯನ್ನು ಬೇಡುತ್ತಾರೆ. ಇದು ಸಹ ಅವರ ಧರ್ಮದ ಬಗೆಗಿನ ಬಲವನ್ನು ತಿಳಿಸಿಕೊಡುತ್ತದೆ. ಧಾರ್ಮಿಕ ಸಹಿಷ್ಣುತಾ ಮನೋಭಾವವು ಸಂತೆಗಳಲ್ಲಿ ಕಂಡುಬರುತ್ತದೆ. ಹಿಂದೂ, ಮುಸ್ಲಿಂ, ಕ್ರೈಸ್ತ, ಸಿಖ್, ಜೈನ ಹೀಗೆ ನಾನಾ ಧರ್ಮಗಳ ಜನತೆ ಸಂತೆಗಳಲ್ಲಿ ವ್ಯವಹರಿಸುವುದು ಕಂಡುಬರುತ್ತದೆ. ಅವರು ಬೇರೆ ಬೇರೆ ಧರ್ಮಕ್ಕೆ ಸೇರಿದವರಾದರೂ ಸಂತೆಗಳಲ್ಲಿ ಗ್ರಾಹಕರ ಮಧ್ಯೆ, ವರ್ತಕರ ಮಧ್ಯೆ, ಧರ್ಮವು ಅಡ್ಡಿ ಬರದೇ ಕೂಡಿ ವ್ಯವಹರಿಸುತ್ತಾರೆ ಮತ್ತು ಸಹಕಾರದಿಂದ ಸಂಘಟಿತಗೊಂಡಿರುತ್ತಾರೆ. ಇದೆಲ್ಲವನ್ನು ಗಮನಿಸಿದಾಗ ಸಂತೆಗಳಲ್ಲೂ ಸಹ ಧಾರ್ಮಿಕ ಸಹಿಷ್ಣುತಾ ಮನೋಭಾವ ಕಂಡುಬರುವುದು ತಿಳಿಯುತ್ತದೆ.

ಸಂತೆಗಳಲ್ಲಿ ತಮ್ಮ ತಮ್ಮ ವ್ಯಾಪಾರಗಳು ಸುಗಮವಾಗಿ ಸಾಗಲು ಸಹ ತಮ್ಮ ವಸ್ತುಗಳಿಗೆ, ಪದಾರ್ಥಗಳಿಗೆ ಪೂಜೆ ಮಾಡಿ, ಊದುಬತ್ತಿ ಹಚ್ಚಿ ದೇವರನ್ನು ನೆನೆದು ತಮ್ಮ ಅಂಗಡಿ ಮುಂಗಟ್ಟುಗಳನ್ನು ತೆರೆದು ವ್ಯವಹರಿಸುತ್ತಾರೆ. ಅಂದರೆ ವ್ಯವಹಾರದ ಚಟುವಟಿಕೆಯ ಕೇಂದ್ರಗಳಾದ ಸಂತೆಗಳಲ್ಲೂ ಸಹ ಧಾರ್ಮಿಕ ಅಂಶಗಳು ಕಂಡುಬರುವುದನ್ನು ಕಾಣುತ್ತೇವೆ.

೩:೩:೫ ಮನರಂಜನಾತ್ಮಕ ಅಂಶಗಳು

ಸಂತೆಯಲ್ಲಿ ವಿವಿಧ ಬಗೆಯ ಜನರು ಬಂದಿರುತ್ತಾರೆ ಎಂದು ನಾವು ಈಗಾಗಲೇ ತಿಳಿದಿದ್ದೇವೆ. ಅವರಲ್ಲಿ ನಾನಾ ಬಗೆಯ ಮನರಂಜನೆ ನೀಡುವ ಜನರು ಬರುವುದುಂಟು. ನೆರೆದ ಜನರಿಗೆ ಮನರಂಜನೆಯನ್ನು ನೀಡಿ ಅದಕ್ಕೆ ಪ್ರತಿಯಾಗಿ ಜನರಿಂದ ಕಾಸನ್ನು ಬೇಡುವರು. ಅದರಿಂದ ಬಂದ ಹಣದಿಂದ ಜೀವನ ನಡೆಸುವರು. ಹೊಟ್ಟೆಪಾಡಿಗಾಗಿ ಮನರಂಜನೆಯನ್ನು ನೀಡುವುದೇ ಅವರ ಕಾರ್ಯ. ತಮ್ಮ ತಮ್ಮ ಕೆಲಸದಲ್ಲಿ ಎಡಬಿಡದೆ ಕೆಲಸಮಾಡಿ ಬೇಸತ್ತ ಜನತೆಗೆ ಮನಸ್ಸು ಹಗುರ ಮಾಡಲು ಮನರಂಜನಾ ಕಾರ್ಯವನ್ನು ಕೈಗೊಂಡಿರುತ್ತಾರೆ. ಜನಸಾಮಾನ್ಯರು ತಮಗೆ ತಿಳಿದಷ್ಟು ಹಣವನ್ನು ಅವರಿಗೆ ನೀಡುತ್ತಾರೆ. "ಹನಿ ಹನಿಗೂಡಿದರೆ ಹಳ್ಳ, ತೆನಿ ತೆನಿಗೂಡಿದರೆ ಬಳ್ಳ" ಎಂಬಂತೆ ಬಂದಂಥ ಅಷ್ಟಿಷ್ಟು ಹಣವನ್ನು ಕೂಡಿಸಿಕೊಂಡು ಹೊಟ್ಟೆಪಾಡು ನಡೆಸುತ್ತಾರೆ. ಆದರೆ ಇಂತಹ ಮನರಂಜನೆಯ ವೈಶಿಷ್ಟ್ಯಗಳು ಇಂದು ಸಂತೆಗಳಲ್ಲಿ, ಇನ್ನಿತರ ಕಡೆಗಳಲ್ಲಿ ಕಣ್ಮರೆಯಾಗುತ್ತಿರುವುದು ಕಂಡುಬರುತ್ತದೆ. ಏಕೆಂದರೆ ಇಂದು ಸಿನಿಮಾ, ದೂರದರ್ಶನ ಮುಂತಾದ ಮಾಧ್ಯಮಗಳೇ ಹೆಚ್ಚಾಗಿವೆ. ಈ ಪ್ರವೃತ್ತಿ ಒಳ್ಳೆಯದೇನೂ ಅಲ್ಲ. ಆದ್ದರಿಂದ ಇಂತಹವರಿಗೆ ಸರ್ಕಾರ ಸ್ವಾವಲಂಬಿಗಳಾಗಿ ಬದುಕಲು ಸೂಕ್ತ ವ್ಯವಸ್ಥೆ ಮಾಡುವುದು ಅತ್ಯಗತ್ಯ.

ಮನರಂಜನಾತ್ಮಕ ಅಂಶಗಳು ಸಂತೆಗಳಲ್ಲಿ ಪ್ರಾಚೀನ ಕಾಲದಿಂದಲೂ ನಡೆದುಕೊಳ್ಳುತ್ತಾ ಬಂದಿವೆ. ಇಂದಿನ ಆಧುನಿಕ ಕಾಲದಲ್ಲಿ ಪಳೆಯುಳಿಕೆಗಳಂತೆ ಅಲ್ಲಲ್ಲಿ, ಆಗಾಗ ಮಾತ್ರ ಕಾಣಿಸಿಕೊಳ್ಳುತ್ತವೆ. ಇದಕ್ಕೆ ಕಾರಣ ಸರ್ಕಾರದ ಹಲವಾರು ಕಾನೂನುಗಳು ಎಂಬುದು ಒಂದು ವಿಷಯವಾದರೆ ಈ ಬುಡಕಟ್ಟುಗಳಿಗೆ ಸೇರಿದ ಜನರು ಇಂದು ಆಧುನಿಕತೆಯ ಬಣ್ಣದ ಬದುಕಿಗೆ ಮಾರುಹೋಗಿ ಅವರುಗಳು ಸಹ ಸಾಮಾಜಿಕ ಬದಲಾವಣೆಗೆ ಒಳಗಾಗಿದ್ದಾರೆ ಎಂಬುದು ಮತ್ತೊಂದು ವಿಷಯವಾಗಿದೆ. ಅಲ್ಲದೇ ಈ ಬುಡಕಟ್ಟುಗಳ ಜನತೆಯು ತಮ್ಮ ಮಕ್ಕಳಿಗೆ ಶಿಕ್ಷಣವನ್ನು ನೀಡಿ ಬದಲಾಗುವಂತೆ ಅವರೇ ಪ್ರೇರಿತರಾಗಿದ್ದಾರೆ.

ಹಾವಾಡಿಗರು, ಡೊಂಬರು, ಹಗಲುವೇಷಗಾರರು, ಕರಡಿ ಕುಣಿಸುವವರು ಮತ್ತು ಸುಡುಗಾಡು ಸಿದ್ಧರು ಇನ್ನು ಮುಂತಾದವರು ಸಂತೆಯಲ್ಲಿ ತಮ್ಮ ಉಪ ಜೀವನಕ್ಕಾಗಿ ಮನರಂಜನಾ ಕಾರ್ಯಕ್ರಮಗಳನ್ನು ನೀಡಿ ಬದುಕುತ್ತಿದ್ದರು. ಈ ಮೇಲೆ ಹೇಳಿದ ಹಾಗೆ ಹಾವಾಡಿಗರು, ಕರಡಿ ಕುಣಿಸುವವರು ಕಾನೂನಿನ ಪ್ರಕಾರ ಅವರು ಹಾವುಗಳನ್ನು ಹಿಡಿಯುವುದು, ಮುಂಗುಸಿಗೂ ಮತ್ತು ಹಾವುಗಳಿಗೂ ಕಚ್ಚಾಟ ಹಚ್ಚುವುದು, ಕರಡಿ ಕುಣಿಸುವುದು, ಕರಡಿಗಳನ್ನು ಹಿಡಿದುಕೊಂಡು ಬಂದು ಬಂಧನದಲ್ಲಿಟ್ಟು ಮಾತು ಕಲಿಸುವುದು ಹೀಗೆ ಈ ಮುಂತಾದ ಪ್ರಕ್ರಿಯೆಗಳನ್ನು ಸರ್ಕಾರವು ಕಾನೂನಿನ ಮೂಲಕ ನಿಷೇಧಿಸಲಾಗಿದೆ. ಹೀಗಾಗಿ ಈ ಬುಡಕಟ್ಟುಗಳ ವೃತ್ತಿಗಳು ಇಂದು ಕಣ್ಮರೆಯಾಗುತ್ತಿವೆ. ಬುಡಕಟ್ಟು ಸಮುದಾಯಗಳು ತಮ್ಮ ಆನುವಂಶಿಕ ವೃತ್ತಿಗಳನ್ನು ಪರಂಪರಾಗತವಾಗಿ ಅನುಸರಿಸಿಕೊಂಡು ಬಂದು ಇಂದು ಅಲ್ಲಲ್ಲಿ ಕಣ್ಣಿಗೆ ಸಂತೆಗಳಲ್ಲಿ ಕಾಣುತ್ತಾರೆ. ಅವರ ಮಕ್ಕಳಿಗೆ ಸರ್ಕಾರಗಳು ಇಂದು ಸೌಲಭ್ಯಗಳು ನೀಡಿ ಶಿಕ್ಷಣದ ಮುಖ್ಯವಾಹಿನಿಗೆ ತರುತ್ತಿದ್ದಾರೆ. ಅಂತಹ ಬುಡಕಟ್ಟುಗಳ ಬಗೆಗೆ ಸಂಬಂಧಿಸಿದಂತೆ ಕೆಲವೊಂದು ವಿವರಣೆಗಳನ್ನು ಈ ಕೆಳಗೆ ಕೊಡಲಾಗಿದೆ.

**ಡೊಂಬರು**

ಕರ್ನಾಟಕದಲ್ಲಿ ಎಲ್ಲಾ ಕಡೆ ಕಂಡುಬರುವ ಇವರು ಈ ರಾಜ್ಯದಲ್ಲಿ ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದಾರೆ. ಇವರು ತಮ್ಮ ಹೊಟ್ಟೆಪಾಡಿಗಾಗಿ ಒಂದು ರೀತಿ ಮನರಂಜನಾ ಕಾರ್ಯವನ್ನು ದೊಡ್ಡ ಪಟ್ಟಣ, ನಗರ, ತಾಲೂಕು ಕೇಂದ್ರಗಳಲ್ಲಿ ಗ್ರಾಮೀಣ ಮಟ್ಟದಲ್ಲಿ ಸಂತೆಗಳಲ್ಲಿ ಆಟವನ್ನು ಆಡಿಸಿ ತೋರಿಸುತ್ತಿದ್ದರು. ಇವರು ಮೊದಲು ಅಲೆಮಾರಿಗಳಾಗಿದ್ದು ಇಂದು ಇವರು ಸ್ಥಿರವಾಗಿ ಒಂದೆಡೆ ನೆಲೆಸಿದ್ದಾರೆ.

**ಹಗಲುವೇಷಗಾರರು**

ಇದು ಸಹ ಒಂದು ಬುಡಕಟ್ಟು ಸಮುದಾಯ. ಇವರು ಸಹ ವಂಶಪಾರಂಪರ್ಯವಾಗಿ ತಮ್ಮ ವೃತ್ತಿಯನ್ನು ನಿರ್ವಹಿಸಿಕೊಂಡು ಬಂದಿದ್ದು ಇಂದಿಗೂ ಕಾಣಸಿಗುತ್ತಾರೆ. ಇವರು ನಾಟಕ ರೂಪದಲ್ಲಿ ಸಂತೆಗಳಲ್ಲಿ, ಬೀದಿಗಳಲ್ಲಿ ನೀಡುತ್ತಾರೆ. ಭಾರತದ ಸ್ವಾತಂತ್ರ್ಯದ ಹೋರಾಟದಲ್ಲಿ ಇವರ ಪಾತ್ರವೂ ಮಹತ್ವದ್ದಾಗಿದೆ.

**ಹಾವಾಡಿಗರು ಮತ್ತು ಕರಡಿ ಕುಣಿಸುವವರು**

ಹಾವಾಡಿಗರು ಅರಣ್ಯದಲ್ಲಿ ಹಾವುಗಳನ್ನು ಹಿಡಿದು ತಂದು ಅವುಗಳ ಆಟವನ್ನು ಸಂತೆಗಳಲ್ಲಿ ನೀಡುತ್ತಿದ್ದರು. ಮೋಡಿ ಅಥವಾ ಜಾದು ವಿದ್ಯೆಯನ್ನು ಕಲಿತು ಚಾಣಾಕ್ಷತನದಿಂದ ಆಟವನ್ನು ಪ್ರಸ್ತುತಪಡಿಸುತ್ತಿದ್ದರು. ಈ ಸಮಯದಲ್ಲಿ ವಿಷಯುಕ್ತ ಹಾವುಗಳನ್ನು ಹಿಡಿಯುತ್ತಿದ್ದರಿಂದ ಒಮ್ಮೊಮ್ಮೆ ಪ್ರಾಣಾಪಾಯವು ಜರುಗುತ್ತಿತ್ತು. ಇದನ್ನು ಮಾಡುವುದು ಇವರ ಕಾಯಕವಾಗಿತ್ತು. ಆದರೆ ಕಾನೂನಿನ ಕ್ರಮದಿಂದ ಇದನ್ನು ಕೈಗೊಳ್ಳುವುದು ಅಪರಾಧವಾಗಿದೆ. ಕರಡಿ ಕುಣಿಸುವವರು, ಕರಡಿಗಳನ್ನು ಹಿಡಿದು ತಂದು ಅವುಗಳನ್ನು ಪಳಗಿಸಿ ಆಟವಾಡಿಸುತ್ತಿದ್ದರು. ಆದರೆ ಇದು ಕೂಡ ಅಪರಾಧವಾದ್ದರಿಂದ ಇದನ್ನು ಇಂದು ಕಾಣುವಂತಿಲ್ಲ.

ಹೀಗೆ ಮನರಂಜನಾತ್ಮಕ ಅಂಶಗಳು ಸಂತೆಗಳಲ್ಲಿ ಹೆಚ್ಚಾಗಿ ಹಿಂದಿನ ದಿನಮಾನಗಳಲ್ಲಿದ್ದು, ಇಂದು ನಶಿಸಿ ಹೋಗುತ್ತಿವೆ. ಈ ಒಂದು ಅಂಶವು ಸಹ ಸಂತೆಗಳ ಲಕ್ಷಣಗಳಲ್ಲೊಂದಾಗಿದೆ.

# ಅಧ್ಯಾಯ ೪

# ಸಂತೆಯಲ್ಲಿ ಬುಡಕಟ್ಟು ಸಮುದಾಯದ ಪಾತ್ರ

೪:೧ ಪೀಠಿಕೆ

೪:೨ ಸಂತೆಯಲ್ಲಿ ಬುಡಕಟ್ಟುಗಳ ಮೂಲ ಕಸುಬು ಮತ್ತು ಪರ್ಯಾಯ ಕಸುಬುಗಳು

೪:೨:೧ ಬೇಡ ಬುಡಕಟ್ಟು

೪:೨:೨ ಮೇದ ಬುಡಕಟ್ಟು

೪:೨:೩ ಹಕ್ಕಿಪಿಕ್ಕಿ ಬುಡಕಟ್ಟು

೪:೨:೪ ರಾಜಗೊಂಡ ಬುಡಕಟ್ಟು

೪:೨:೫ ಲಂಬಾಣಿ ಸಮುದಾಯ

೪:೨:೬ ಕೊರವ, ಕೊರಚ ಅಥವಾ ಕೊರಮ ಸಮುದಾಯ

೪:೨:೭ ಗೋಸಂಗಿ ಸಮುದಾಯ

೪:೨:೮ ಬಳ್ಳಾರಿ ಜಿಲ್ಲೆಯ ಆಯ್ದ ಸಂತೆಗಳಲ್ಲಿ ಆಯ್ದ ಬುಡಕಟ್ಟು ಸಮುದಾಯಗಳ ಸರಾಸರಿ ತಲಾ ಆದಾಯ/ಆರ್ಥಿಕ ಸ್ಥಿತಿಯ ಪ್ರಮಾಣ

೪:೩ ಸಂತೆಯಲ್ಲಿ ಬುಡಕಟ್ಟು ಸಮುದಾಯದ ಗ್ರಾಹಕರು

೪:೩:೧ ಕೃಷಿಕೂಲಿ ಕಾರ್ಮಿಕ ಗ್ರಾಹಕರು

೪:೩:೨ ಉದ್ಯೋಗಸ್ಥ ಗ್ರಾಹಕರು

೪:೩:೩ ಸಂಪ್ರದಾಯ ಆರಾಧಕರು

೪:೪ ಸಂತೆಯಲ್ಲಿ ಮನರಂಜಕರು

೪:೪:೧ ಡೊಂಬರು

೪:೪:೨ ಹಗಲುವೇಷಗಾರರು

೪:೪:೩ ಸುಡುಗಾಡು ಸಿದ್ಧರು

೪:೪:೪ ಕರಡಿ ಕುಣಿಸುವವರು ಮತ್ತು ಹಾವಾಡಿಗರು

೪:೫ ಸಂತೆಯಲ್ಲಿ ಬುಡಕಟ್ಟು ಭಿಕ್ಷುಕರು

೪:೫:೧ ಸಂತೆಯಲ್ಲಿ ಬುಡಕಟ್ಟು ಧಾರ್ಮಿಕ ಆಚರಣಾ ಭಿಕ್ಷುಕರು

೪:೫:೨ ಸಂತೆಯಲ್ಲಿ ಬುಡಕಟ್ಟು ಸಾಮಾನ್ಯ ಭಿಕ್ಷುಕರು

ಅಧ್ಯಾಯ ೪

# ಸಂತೆಯಲ್ಲಿ ಬುಡಕಟ್ಟು ಸಮುದಾಯದ ಪಾತ್ರ

## ೪:೧ ಪೀಠಿಕೆ

ಸಂತೆಯ ಲಕ್ಷಣ ಮತ್ತು ಮಹತ್ವವನ್ನು ಕುರಿತು ಮೊದಲಿನ ಅಧ್ಯಾಯದಲ್ಲಿ ತಿಳಿಸಲಾಗಿದೆ. ಸಂತೆಗಳು ಗ್ರಾಮಾಂತರ ಪ್ರದೇಶಗಳಾದ ಮಂಡಲ, ಹೋಬಳಿ ಮತ್ತು ತಾಲೂಕುಮಟ್ಟದಲ್ಲಿ ಕಂಡುಬರುತ್ತವೆ. ಸಾಮಾನ್ಯವಾಗಿ ಸಂತೆಯಲ್ಲಿ ಎಲ್ಲಾ ಸಮುದಾಯಗಳು ಭಾಗವಹಿಸುತ್ತವೆ. ಇದರಲ್ಲಿ ಕೆಲವು ಬುಡಕಟ್ಟು ಸಮುದಾಯಗಳ ಪಾತ್ರವು ಪ್ರಮುಖವಾದುದು. ಪ್ರತಿಯೊಂದು ಸಮುದಾಯಗಳು ಸಂತೆಯೆಂಬ ವ್ಯವಸ್ಥೆಯಲ್ಲಿ ತಮ್ಮ ಜೀವನ ನಿರ್ವಹಣೆಗಾಗಿ ಒಂದಿಲ್ಲಾ ಒಂದು ಮಾರ್ಗವನ್ನು ಕಂಡುಕೊಂಡಿವೆ. ಉದಾಹರಣೆಗೆ ವ್ಯಾಪಾರಗಾರರಾಗಿ, ಮನರಂಜಕರಾಗಿ, ದಲ್ಲಾಳಿಗಳಾಗಿ ಮತ್ತು ಗ್ರಾಹಕರಾಗಿ ಕೊನೆಗೆ ಭಿಕ್ಷುಕರಾಗಿ ಸಂತೆಯಲ್ಲಿ ಕಾಣಿಸಿಕೊಳ್ಳುವುದುಂಟು. ಪ್ರಸ್ತುತ ಅಧ್ಯಯನವನ್ನು ಬಳ್ಳಾರಿ ಜಿಲ್ಲೆಯ ಭೌಗೋಳಿಕ ವ್ಯಾಪ್ತಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ಪ್ರದೇಶದಲ್ಲಿ ಸಂತೆಗಳ ಸಂಖ್ಯೆ ಹಾಗೂ ಸಂತೆಯಲ್ಲಿ ಬುಡಕಟ್ಟು ಸಮುದಾಯಗಳ ಪಾಲ್ಗೊಳ್ಳುವಿಕೆ ಹೆಚ್ಚಾಗಿ ಕಂಡುಬರುತ್ತದೆ. ಇವರಲ್ಲಿ ಪ್ರಮುಖವಾದ ಕೆಲವು ಸಮುದಾಯಗಳೆಂದರೆ ಬೇಡರು, ಮೇದರು, ಹಕ್ಕಿಪಿಕ್ಕಿ (ಪಾರ್ಧಿ), ಸುಡುಗಾಡು ಸಿದ್ಧರು, ಅಡವಿಚೆಂಚರು. ಈ ಬುಡಕಟ್ಟು ಸಮೂದಾಯದವರು ಮಾತ್ರವಲ್ಲದೇ ಜೀವನೋಪಾಯಕ್ಕಾಗಿ ಊರಿಂದ ಊರಿಗೆ ಅಲೆಯುವ ಅಲೆಮಾರಿ ಮತ್ತು ಅರೆ ಅಲೆಮಾರಿಗಳಾದ ಹಗಲು ವೇಷಗಾರರು, ಸಿಂದೊಳ್ಳಿ (ದುರುಗ-ಮರುಗಿ), ಗೋಸಾಯಿಗಳು, ಕೊರಚರು (ಕೊರಮ), ಗೊಂದಲಿಗರು, ಹೆಳವರು, ಮೊಂಡರು, ಲಂಬಾಣಿಯವರು, ಕಲಾಯಿಗಳು, ದೊಂಬರು ಮೊದಲಾದ ಸಮುದಾಯಗಳು ತಮ್ಮ ಜೀವನ ನಿರ್ವಹಣೆಯ ಸಲುವಾಗಿ ಸಂತೆಯನ್ನು ಅವಲಂಬಿಸಿವೆ.

ಈ ಮೇಲ್ಕಂಡ ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳು ಯಾವ ಯಾವ ವೃತ್ತಿಗಳ ಹಿನ್ನೆಲೆಯಲ್ಲಿ ಸಂತೆಯನ್ನು ಅವಲಂಬಿಸಿದ್ದಾರೆ? ಈ ವೃತ್ತಿಗಳಿಂದ ಇವರ ಜೀವನ ಮಟ್ಟವು ಸುಧಾರಿಸಿದೆಯೇ? ಸಂತೆಯಲ್ಲಿ ಪಾಲ್ಗೊಳ್ಳಲು ವೃತ್ತಿಗಳನ್ನು ಆಧರಿಸಿ ಯಾವ ರೀತಿಯ ಪೂರ್ವಸಿದ್ಧತೆ ಮಾಡಿಕೊಳ್ಳುವರು? ಸಂತೆಗಳು ಇವರಿಗೆ ಎಷ್ಟು ಅವಶ್ಯಕ? ಎಂಬುದನ್ನು ಕ್ರಮಬದ್ಧವಾಗಿ ವಿವರಿಸಲಾಗುವುದು. ಸಂತೆಯಲ್ಲಿ ಅನೇಕ ಸಮುದಾಯಗಳು ಭಾಗವಹಿಸಿದರೂ ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳ ಬಗೆಗೆ ಮಾತ್ರ ಚರ್ಚೆಯನ್ನು ಸೀಮಿತಗೊಳಿಸಲಾಗಿದೆ.

## ೪:೨ ಸಂತೆಯಲ್ಲಿ ಬುಡಕಟ್ಟುಗಳ ಮೂಲ ಕಸುಬು ಮತ್ತು ಪರ್ಯಾಯ ಕಸುಬುಗಳು

ಬುಡಕಟ್ಟುಗಳು ಅನೇಕ ಇಕ್ಕಟ್ಟುಗಳ ನಡುವೆಯೇ ಆರ್ಥಿಕವಾಗಿ ಪರಾವಲಂಬಿಗಳಾಗಿ ರೂಪಾಂತರಗೊಳ್ಳುತ್ತಿವೆ. ಕಾಡಿನ ಉತ್ಪಾದನಾ ರೀತಿನೀತಿಗಳು ಕಾಡಿನ ಒಳಗೆ ಯಾರಿಗೆ ತಾನೆ ಬೇಕಿರುತ್ತವೆ. ಕೇವಲ ಕಳ್ಳದಂಧೆಗಳಿಗೆ ಅರಣ್ಯ ಸಂಪತ್ತಿನ ಲೂಟಿಗೆ ನಾಗರಿಕ ಜಗತ್ತು ಅದನ್ನು ಬಳಸಿಕೊಳ್ಳುತ್ತಿದೆ. ಇವತ್ತು ಬುಡಕಟ್ಟು ಸಮುದಾಯಗಳು ಅನಿವಾರ್ಯವಾಗಿ ವೃತ್ತಿಯೇ ಅಲ್ಲದ ಯಾವುದೋ ವೃತ್ತಿಗಳನ್ನು ಅವಲಂಬಿಸಬೇಕಾಗಿದೆ.[೧] ಸಂತೆಗಳು ಜನರ ಬದುಕಿನ ಅವಿಭಾಜ್ಯ ಅಂಗವೇ ಆಗಿವೆ. ಸಂತೆಯು ವಾರದಲ್ಲಿ ಒಂದು ದಿನ ನಡೆಯುತ್ತದೆ. ಹಿಂದು, ಮುಸ್ಲಿಂ, ಕ್ರೈಸ್ತ, ಜೈನ, ಸಿಖ್ ಹೀಗೆ ಅನೇಕ ಧರ್ಮಗಳ ಮತ್ತು ನಾನಾ ಜಾತಿಯ ಜನರು ಯಾವುದೇ ರೀತಿಯ ಧರ್ಮಭೇದ ಮತ್ತು ಜಾತಿ-ಭೇದವಿಲ್ಲದೇ ಸಂತೆಯಲ್ಲಿ ಸೇರುವುದನ್ನು ಕಾಣುತ್ತೇವೆ. ಸಮಾಜದಲ್ಲಿ ಉನ್ನತಜಾತಿ ಎನಿಸಿಕೊಂಡವರು ಕೀಳುಜಾತಿಯವರು ಎನಿಸಿಕೊಂಡವರ ಜೊತೆ ಸಂತೆಯಲ್ಲಿ ವ್ಯಾಪಾರ ವಹಿವಾಟನ್ನು ನಡೆಸುತ್ತಾರೆ. ಆದ್ದರಿಂದ ಸಂತೆಗಳು ಉಚ್ಚ-ನೀಚ ಎಂಬ ಮನೋಭಾವನೆಯನ್ನು ತೊಡೆದುಹಾಕುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಈ ಮೊದಲೇ ತಿಳಿಸಿದಂತೆ ಸಂತೆಯು ಅನೇಕ ಸಮುದಾಯಗಳನ್ನು ಒಳಗೊಂಡಿದೆ. ಇವುಗಳಲ್ಲಿ ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳು ಸೇರಿವೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳು ತಮ್ಮ ಮೂಲ ವೃತ್ತಿಗಳ ಜೊತೆಗೆ ಪರ್ಯಾಯ ವೃತ್ತಿಗಳನ್ನು ಯಾವ ರೀತಿ ಕೈಗೊಂಡಿವೆ ಎಂಬುದನ್ನು ಚರ್ಚಿಸಲಾಗುವುದು. ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳು ತಮ್ಮ ಮೂಲ ವೃತ್ತಿಗಳನ್ನು ತೊರೆದಿವೆ. ಇಂದು ಮೂಲವೃತ್ತಿಗಳನ್ನು ನಂಬಿ ಜೀವನ ನಿರ್ವಹಿಸುವುದು ಸಾಧ್ಯವಿಲ್ಲ. ಆದ್ದರಿಂದ ಇವರು ತಮ್ಮ ಜೀವನ ನಿರ್ವಹಣೆಗಾಗಿ ಪರ್ಯಾಯ ವೃತ್ತಿಗಳನ್ನು ಕಂಡುಕೊಂಡಿದ್ದಾರೆ. ಕೆಲವು ಬುಡಕಟ್ಟು ಸಮುದಾಯಗಳು ತಮ್ಮ ಮೂಲವೃತ್ತಿಯ ಜೊತೆಗೆ ಉಪಕಸುಬು ಅಥವಾ ಪರ್ಯಾಯ ವೃತ್ತಿಯನ್ನು ಅವಲಂಬಿಸಿದ್ದಾರೆ ಹಾಗೂ ವಿವಿಧ ಕಸುಬುಗಳಿಂದ ಸಂತೆಯಲ್ಲಿ ತಮ್ಮ ಬದುಕನ್ನು ಕಂಡುಕೊಂಡಿದ್ದಾರೆ.

ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳು ಸಂತೆಯಲ್ಲಿ ಯಾವ ವೃತ್ತಿ ಕಸುಬುಗಳನ್ನು ಮಾಡುತ್ತಿವೆ ಹಾಗೂ ಇದರ ಸಾಧಕ-ಬಾಧಕಗಳೇನು? ಎಂಬುದನ್ನು ಮುಂದೆ ಚರ್ಚಿಸಲಾಗಿದೆ.

### ೪:೨:೧ ಬೇಡ ಬುಡಕಟ್ಟು

**೪:೨:೧:೧ ಪರಿಚಯ :** ಕರ್ನಾಟಕದಲ್ಲಿ ಕಂಡುಬರುವ ಐವತ್ತು ಬುಡಕಟ್ಟುಗಳಲ್ಲಿ ಬೇಡ ಬುಡಕಟ್ಟು ಜನಸಂಖ್ಯಾ ದೃಷ್ಟಿಯಿಂದ ಅಗ್ರಸ್ಥಾನದಲ್ಲಿದ್ದಾರೆ. ೧೯೯೧ರ ಜನಗಣತಿಯ ಪ್ರಕಾರ ಬೇಡರ ಜನಸಂಖ್ಯೆ ೧೬,೭೦,೫೫೫ರಷ್ಟಿತ್ತು. ೧೯೯೬ರಲ್ಲಿ ನಾಯಕರ ಬುಡಕಟ್ಟಿನ ಪರ್ಯಾಯ ಪದಗಳಾದ ನಾಯಕ, ಬೇಡ, ಬೇಡರ ಮತ್ತು ವಾಲ್ಮೀಕಿ ಸಮೂಹಗಳು ಪರಿಶಿಷ್ಟ ಪಂಗಡ ಪಟ್ಟಿಗೆ (ಎಸ್.ಟಿ.)ಗೆ ಸೇರಿರುವುದರಿಂದ ೨೦೦೧ರ ಜನಗಣತಿಯಲ್ಲಿ ಬೇಡ ಬುಡಕಟ್ಟಿನ ಜನಸಂಖ್ಯೆ  ಗಣನೀಯವಾಗಿ ಹೆಚ್ಚಾಗಿದೆ.[೨] ಇವರಿಗೆ

ವಿಜಯನಗರ ಕಾಲದಲ್ಲಿ ರಾಜಾಶ್ರಯವಿತ್ತು. ಬೇಡರಲ್ಲಿ ಪುರುಷರು ಸೈನಿಕರಾಗಿ, ಕಾವಲುಗಾರರಾಗಿ, ಕುಸ್ತಿಪಟುಗಳಾಗಿ, ಅಂಗರಕ್ಷಕರಾಗಿ, ವ್ಯಾಪಾರಗಾರರಾಗಿ, ಸ್ತ್ರೀಯರು ರಾಣಿಯ ಅಂಗರಕ್ಷಕರಾಗಿ, ಪರಿಚಾರಿಕೆಯರಾಗಿ, ಹೂವು ಮಾರುವವರಾಗಿ ಮತ್ತು ಇತರ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದರು. ಆದರೆ ಇಂದು ರಾಜ ಮಹಾರಾಜರು ಇಲ್ಲ. ಬೇಡರು ನಿರ್ವಹಿಸುತ್ತಿದ್ದ ಯಾವ ಹುದ್ದೆಗಳೂ ಇಲ್ಲ. ಆದ್ದರಿಂದ ಬದುಕಿನ ನಿರ್ವಹಣೆಗಾಗಿ ತಮ್ಮ ಮೂಲ ಕಸುಬಾದ ಬೇಟೆ ಮತ್ತು ಪರ್ಯಾಯ ಕಸುಬುಗಳನ್ನು ಬಿಟ್ಟು ಬೇರೆ ಬೇರೆ ಕಸುಬನ್ನು ಅವಲಂಬಿಸಿ ಬದುಕುತ್ತಿದ್ದಾರೆ. ಬೇಡರು ವ್ಯಾಪಾರದಲ್ಲಿ ತೊಡಗಿಸಿಕೊಂಡಿರುವುದರಿಂದ ಸಂತೆಯಲ್ಲಿ ಇವರು ಅನೇಕ ಪರ್ಯಾಯ ವೃತ್ತಿಗಳನ್ನು ಅವಲಂಬಿಸಿ ಬದುಕುತ್ತಿದ್ದಾರೆ. ತರಕಾರಿ, ಹಣ್ಣು, ಮಸಾಲೆ, ಧಾನ್ಯ, ಚಾಪೆ ಹಗ್ಗ, ಕಟ್ಟಿಗೆ, ದನಗಳು, ಒಣ ಮೆಣಸಿನಕಾಯಿ ಮುಂತಾದ ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದಾರೆ. ಅಲ್ಲದೇ ಸಂತೆಯಲ್ಲಿ ಕೂಲಿಕಾರರಾಗಿಯೂ ದುಡಿಯುತ್ತಿದ್ದಾರೆ. ಪರ್ಯಾಯ ಕಸುಬುಗಳಾದ ವ್ಯಾಪಾರ ಹಾಗೂ ಸಂತೆಯನ್ನು ಕುರಿತು ಮುಂದೆ ಚರ್ಚಿಸಲಾಗಿದೆ.

**೪:೨:೧:೨ ತರಕಾರಿ ವ್ಯಾಪಾರ :** ಪ್ರಾಚೀನ ಕಾಲದಲ್ಲಿ ತರಕಾರಿ ವ್ಯಾಪಾರ ಇರಲಿಲ್ಲ. ಕಾರಣ ಅಂದು ತರಕಾರಿಯನ್ನು ತಮ್ಮ ತಮ್ಮ ಮನೆಯ ಹಿತ್ತಲಿನಲ್ಲಿಯೇ ಬೆಳೆದುಕೊಳ್ಳುತ್ತಿದ್ದರು. ಪಟ್ಟಣಗಳು ಬೆಳೆಯುತ್ತಾ ಹಾಗೂ ಕಳೆದ ೩೦ ವರ್ಷಗಳ ಹಿಂದೆ ಸರ್ಕಾರ ಜಾರಿಗೆ ತಂದ ನಿವೇಶನ (Site)ಗಳ ಅಡಿಯಲ್ಲಿ ಮನೆಗಳು ಬಹಳಷ್ಟು ಚಿಕ್ಕದಾಗಿರುವುದರಿಂದ ಹಿತ್ತಲಿನಲ್ಲಿ ತರಕಾರಿ ಬೆಳೆಯುವುದು ನಿಂತಿದೆ. ಇದರ ಹೊರತಾಗಿ ಕೆಲವೊಂದು ಹಳ್ಳಿಗಳಲ್ಲಿ ಹಿತ್ತಲಿನಲ್ಲಿ ತರಕಾರಿ ಬೆಳೆಯುವ ಪದ್ಧತಿ ಇದೆ. ಈ ಎಲ್ಲ ಕಾರಣಗಳಿಂದ ಹೊಲದಲ್ಲಿ ಬೆಳೆದಂತಹ ತರಕಾರಿಯು ಸಂತೆಯಲ್ಲಿ ಮಾರಾಟವಾಗುತ್ತದೆ. ಪ್ರಸ್ತುತ ದಿನಗಳಲ್ಲಿ ಸಂತೆ ಎಂದರೆ ತರಕಾರಿ ಮಾರುವ ಪ್ರದೇಶವೇ ಆಗಿದೆ. ಇಂಥ ಸಂತೆಗಳಲ್ಲಿ ತರಕಾರಿ ವ್ಯಾಪಾರ ಮಾಡುವ ರೂಢಿಯನ್ನು ಬೇಡರು ಮಾಡಿಕೊಂಡಿದ್ದಾರೆ. ಇದರಿಂದ ಬೇಡರು ತಮ್ಮ ಜೀವನ ನಿರ್ವಹಣೆಯನ್ನು ಇಲ್ಲಿ ಕಂಡುಕೊಂಡಿದ್ದಾರೆ. ಬೇಡರು ತಮ್ಮ ಮೂಲವೃತ್ತಿಯನ್ನು ಬಿಟ್ಟು ಪರ್ಯಾಯ ವೃತ್ತಿಯನ್ನು ಮಾಡುತ್ತಿದ್ದಾರೆ ಎಂದರೆ ಹೆಚ್ಚಾಗಿ ತರಕಾರಿ ವ್ಯಾಪಾರವೇ ಆಗಿದೆ. ಬಳ್ಳಾರಿ ಜಿಲ್ಲೆಯ ಕೆಲವು ಬೇಡರು ತರಕಾರಿ ಮಾರುವುದನ್ನು ಕಳೆದ ಮೂರು ದಶಕಗಳಿಂದ ರೂಢಿಸಿಕೊಂಡಿದ್ದಾರೆ. ಇವರು ತರಕಾರಿ ವ್ಯಾಪಾರವನ್ನು ಸಂತೆಯಲ್ಲಿ ಮಾಡಲು ಅನೇಕ ರೀತಿಯ ಪೂರ್ವಸಿದ್ಧತೆಯನ್ನು ಮಾಡಿಕೊಳ್ಳುತ್ತಾರೆ. ಉದಾಹರಣೆಗೆ ತರಕಾರಿ ತರಲು ಗೋಣಿಚೀಲಗಳನ್ನು ಹಿಂದಿನ ದಿನವೇ ಬೇಡರು ಕೂಡಿಟ್ಟುಕೊಂಡು ಸಂತೆಯ ದಿನದಂದು ಬೆಳಗಿನ ಜಾವದಲ್ಲಿ ಸಮೀಪದ ಕೃಷಿ ಉತ್ಪನ್ನ ಮಾರಾಟ ಕೇಂದ್ರಕ್ಕೆ ಹೋಗಿ ತರಕಾರಿಯನ್ನು ಹರಾಜಿನ ಮೂಲಕ ಖರೀದಿಸುವರು. ಆದರೆ ಯಾವ ಬೇಡರು ಮಾರಾಟಕ್ಕೆ ಬೇಕಾದ ತರಕಾರಿಯನ್ನು ರೈತರಿಂದ ನೇರವಾಗಿ ಖರೀದಿಸುವುದಿಲ್ಲ. ಕಾರಣ ರೈತರಿಂದ ತರಕಾರಿಯನ್ನು ಖರೀದಿಸಿದರೆ ನಗದು ಹಣ ಕೊಡಬೇಕಾಗುತ್ತದೆ. ಆದರೆ ಇವರು ಖಾಯಂ ಸಂತೆಯ ವ್ಯಾಪಾರಿಗಳಾಗಿರುವುದರಿಂದ ಸಂತೆ ಮುಗಿದ ನಂತರ ಹಣವನ್ನು ಕೊಡುವ ವ್ಯವಸ್ಥೆಯಿದೆ. ಇದಲ್ಲದೇ ಹರಾಜಿನ ಮೂಲಕ ತರಕಾರಿ ಸರಕುಗಳನ್ನು ಖರೀದಿಸುವುದರಿಂದ ಕಡಿಮೆ ದರದಲ್ಲಿ ತರಕಾರಿಯನ್ನು ಪಡೆಯುವ ಸಾಧ್ಯತೆ ಇದೆ.

ಹರಾಜಿನಲ್ಲಿ ತರಕಾರಿಗಳನ್ನು ಖರೀದಿಸಿದ ಬೇಡರು, ಎಲ್ಲಾ ತರಕಾರಿ ವ್ಯಾಪಾರಿಗಳಂತೆ ಪ್ರತಿಯೊಂದು ತರಕಾರಿ ವಸ್ತುಗಳ ಬೆಲೆಯನ್ನು ಅಲ್ಲಿಯೇ ನಿಗದಿಪಡಿಸಿಕೊಳ್ಳುತ್ತಾರೆ. ಇದರಿಂದ ಬೆಲೆಯಲ್ಲಿ ಏಕರೂಪತೆಯನ್ನು ಕಾಪಾಡುವುದು ಸಾಧ್ಯ. ಈ ಬೆಲೆಯಲ್ಲಿ ಸಾರಿಗೆ ವೆಚ್ಚ, ಜಾಗತಿ ವೆಚ್ಚ, ಕೂಲಿಯಲ್ಲಿ ತನ್ನ ಲಾಭವು ಸೇರಿರುತ್ತದೆ. ಬೆಲೆ ನಿಗದಿಯಾದ ಬಳಿಕ ತರಕಾರಿಯನ್ನು ಸಂತೆಯಲ್ಲಿ ತಮ್ಮ ನಿಗದಿತ ಸ್ಥಳದಲ್ಲಿ ಕುಳಿತು ವ್ಯಾಪಾರ ಮಾಡುತ್ತಾರೆ. ಸಂತೆಗೆ ಹಲವಾರು ರೀತಿಯ ಗ್ರಾಹಕರು ಬರುವುದರಿಂದ ವ್ಯಕ್ತಿಗಳ ಸ್ವಭಾವಕ್ಕೆ ಅನುಗುಣವಾಗಿ ವ್ಯಾಪಾರ ಮಾಡುತ್ತಾರೆ. ಉದಾಹರಣೆಗೆ ಅತ್ಯಂತ ಶ್ರೀಮಂತ ಪುರುಷ ಗ್ರಾಹಕರು ಬಂದರೆ ಇವರತ್ತ ಅವರ ಗಮನ ಸೆಳೆಯಲು ಅತ್ಯಂತ ಉತ್ಸುಕರಾಗಿರುತ್ತಾರೆ. ಏಕೆಂದರೆ ಶ್ರೀಮಂತ ಪುರುಷರಲ್ಲಿ ಚೌಕಾಸಿ ಮಾಡುವ ಗುಣ ಇರುವುದಿಲ್ಲ ಹಾಗೂ ಇವರೊಂದಿಗೆ ವ್ಯಾಪಾರ ಮಾಡುವ ಅವಧಿ ಕಡಿಮೆ ಜೊತೆಗೆ ಲಾಭ ಮಾತ್ರ ಹೆಚ್ಚು. ಅದೇ ರೀತಿ ಮಧ್ಯಮ ವರ್ಗದ ಮಹಿಳೆಯರು ವ್ಯಾಪಾರಕ್ಕೆ ಬಂದರೆ ಅವರೊಂದಿಗಿನ ವ್ಯಾಪಾರ ಇವರಿಗೆ ಅನಿವಾರ್ಯವಾಗಿರುತ್ತದೆ. ಏಕೆಂದರೆ ಮಹಿಳೆಯರಲ್ಲಿ ಚೌಕಾಸಿ ಮಾಡುವ ಗುಣ ಮತ್ತು ವ್ಯಾಪಾರ ಮಾಡುವಂತ ಅವಧಿ ಇವೆರಡೂ ಸಹ ಅಧಿಕ. ಆದರೆ ಲಾಭಾಂಶ ಕಡಿಮೆ.

ತರಕಾರಿ ವ್ಯಾಪಾರವನ್ನು ಮಾಡುವ ಬೇಡರು ಕೇವಲ ಒಂದು ಸಂತೆಯಲ್ಲಿ ಮಾತ್ರ ವ್ಯಾಪಾರ ಮಾಡದೆ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನಡೆಯುವ ಸಂತೆಗಳಿಗೂ ಹೋಗಿ ವ್ಯಾಪಾರ ಮಾಡುವರು. ಕನಿಷ್ಠ ಮೂರು ಗರಿಷ್ಠ ಐದು ಸಂತೆಗಳಲ್ಲಿ ಇವರು ವ್ಯಾಪಾರಕ್ಕೆ ಹೋಗುವುದುಂಟು. ಪ್ರತಿ ಸಂತೆಯಿಂದ ಇವರಿಗೆ ೨೦೦ ರಿಂದ ೩೦೦ ರೂಪಾಯಿಗಳ ಲಾಭವಿರುತ್ತದೆ. ಈ ರೀತಿಯಲ್ಲಿ ಬಂದ ಲಾಭವೇ ಇವರ ಕುಟುಂಬಗಳಿಗೆ ಜೀವನೋಪಾಯಕ್ಕೆ ಮಾತ್ರವಲ್ಲದೆ ಮುಂದಿನ ಸಂತೆಗೆ ಬಂಡವಾಳವಾಗುತ್ತದೆ. ಇವರು ದಲ್ಲಾಳಿಗಳಿಂದ ತರಕಾರಿ ಖರೀದಿಸುವುದರಿಂದ ಮೋಸ ಹೋಗುವ ಸಾಧ್ಯತೆ ಹೆಚ್ಚಾಗಿರುತ್ತದೆ.

೪:೨:೧:೩ **ಹಣ್ಣಿನ ವ್ಯಾಪಾರ :** ಬಳ್ಳಾರಿ ಜಿಲ್ಲೆಯ ಕೆಲವು ಬೇಡರು ಹಣ್ಣಿನ ವ್ಯಾಪಾರವನ್ನು ಸಂತೆಗಳಲ್ಲಿ ಮಾರಾಟ ಮಾಡುತ್ತಿದ್ದಾರೆ. ಹಣ್ಣಿನಲ್ಲಿ ಹಲವಾರು ವಿಧಗಳಿವೆ. ಆಯಾ ಕಾಲಕ್ಕೆ ಲಭ್ಯವಾಗುವ ಹಣ್ಣುಗಳನ್ನು ಖರೀದಿಸಿ ಸಮೀಪದ ಸಂತೆಗಳಿಗೆ ಹೋಗಿ ವ್ಯಾಪಾರ ಮಾಡುವರು. ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಾಗಿ ಹಣ್ಣುಗಳನ್ನು ಬೆಳೆಯುವುದಿಲ್ಲ. ಆದ್ದರಿಂದ ರಾಷ್ಟ್ರದ ಬೇರೆ ಬೇರೆ ರಾಜ್ಯಗಳಲ್ಲಿ ಬೆಳೆಯುವ ಹಣ್ಣುಗಳನ್ನು ದಲ್ಲಾಳಿಗಳಿಂದ ಖರೀದಿಸಿ ತಂದು ಸಂತೆಯಲ್ಲಿ ಹೆಚ್ಚಿನ ಲಾಭಕ್ಕೆ ಮಾರುವರು. ಇವರಲ್ಲಿ ಅನೇಕರು ಚಿಲ್ಲರೆ ವ್ಯಾಪಾರಿಗಳಾಗಿದ್ದು, ಬಂಡವಾಳಶಾಹಿ ವ್ಯಾಪಾರಿಗಳಿಂದ ಹಣ್ಣುಗಳನ್ನು ಹರಾಜಿನಲ್ಲಿ ಖರೀದಿಸಿ ತಳ್ಳುವ ಬಂಡಿ ಮೂಲಕ ಅಥವಾ ನಿರ್ದಿಷ್ಟ ಸ್ಥಳದಲ್ಲಿ ಕುಳಿತು ತಮ್ಮ ವ್ಯಾಪಾರವನ್ನು ಮಾಡುತ್ತಾರೆ. ಪ್ರಸ್ತುತ ಪರಿಸ್ಥಿತಿಯಲ್ಲಿ ಬೇಡರು ಸಾಲ ರೂಪದಲ್ಲಿ ಹಣ್ಣು ಖರೀದಿಸಿ ವ್ಯಾಪಾರದ ನಂತರ ಬಡ್ಡಿಯ ಸಮೇತ ಬಂಡವಾಳಶಾಹಿಗಳಿಗೆ ಸಾಲ ವಾಪಸ್ ಕೊಡುತ್ತಿದ್ದಾರೆ. ಸಂತೆಗೆ ಅಧಿಕ ಸಂಖ್ಯೆಯಲ್ಲಿ ಜನ ಇರುವುದರಿಂದ ಇವರ ವ್ಯಾಪಾರವು ಹೆಚ್ಚಾಗಿ ನಡೆಯುತ್ತದೆ. ಅಲ್ಲದೇ ಹಬ್ಬದ ಹಿಂದಿನ ದಿನ ನಡೆಯುವ ಸಂತೆಯಲ್ಲಿ ಅತ್ಯಂತ ಹೆಚ್ಚಿನ ರೀತಿಯ ಲಾಭವಿದೆ ಎಂದು ತಿಳಿದುಬರುತ್ತದೆ. ಕುಟುಂಬದ

ಸದಸ್ಯರೊಡನೆ (ನಾಲ್ಕರಿಂದ ಐದು) ಹಣ್ಣಿನ ವ್ಯಾಪಾರದಲ್ಲಿ ಸಾಧ್ಯವಾದಲ್ಲಿ ಒಂದು ಸಂತೆಯಲ್ಲಿ ಒಂದು ಸಾವಿರದಿಂದ ಎರಡು ಸಾವಿರ ಕೆ.ಜಿ.ಯಷ್ಟು ವ್ಯಾಪಾರ ಸಾಧ್ಯವೆಂದು ಹೇಳುತ್ತಾರೆ. ಅಲ್ಲದೆ ವ್ಯಾಪಾರವು ಸರಳ. ಹಣ್ಣುಗಳು ಸಹ ಪೋಲು ಅಥವಾ ಕಳವು ಮಾಡುವ ಸಾಧ್ಯತೆ ಕಡಿಮೆ. ಆದರೆ ಒಬ್ಬಂಟಿಯಾಗಿ ವ್ಯಾಪಾರ ಮಾಡುವಾಗ ಕೇವಲ ನೂರರಿಂದ ಐದುನೂರು ಕೆ.ಜಿ.ಯಷ್ಟು ಹಣ್ಣನ್ನು ವ್ಯಾಪಾರ ಮಾಡಲು ಸಾಧ್ಯ. ಲಾಭ ಮತ್ತು ಅನುಕೂಲದ ದೃಷ್ಟಿಯಿಂದ ಕುಟುಂಬದ ಅನೇಕ ಸದಸ್ಯರು ಸೇರಿ ವ್ಯಾಪಾರ ಮಾಡುವುದು ಹೆಚ್ಚಾಗಿ ಕಂಡುಬರುತ್ತದೆ. ಕೇವಲ ಸಂತೆಗಳಲ್ಲಿ ಮಾತ್ರವಲ್ಲದೆ ಆ ಗ್ರಾಮದ ಕೆಲವು ಪ್ರಮುಖ ಬೀದಿಗಳಲ್ಲಿಯೂ ಹಣ್ಣಿನ ವ್ಯಾಪಾರ ಮಾಡುವುದುಂಟು. ಇವರು ಹಣ್ಣಿನ ವ್ಯಾಪಾರದ ಸಂದರ್ಭದಲ್ಲಿ ಚಾತುರ್ಯದಿಂದಲೇ ಕೆಲವು ಖಾಯಂ ಗ್ರಾಹಕರನ್ನು ಹೊಂದಿರುತ್ತಾರೆ. ಇವರಿಗೆ ಲಾಭದ ದೃಷ್ಟಿಯಿಂದ ಹಣ್ಣಿನ ವ್ಯಾಪಾರ ಮಾಡಲು ಸಂತೆಯು ಸೂಕ್ತ ಸ್ಥಳವಾಗಿದೆ.

**೪:೨:೧:೪ ಮಸಾಲೆ ಪದಾರ್ಥ ವ್ಯಾಪಾರ :** ಮಸಾಲೆ ಪದಾರ್ಥಗಳನ್ನು ಮಾರಾಟ ಮಾಡುವವರಲ್ಲಿ ಬೇಡರು ಕಂಡುಬಂದರೂ ಬಹಳ ಕಡಿಮೆ ಸಂಖ್ಯೆಯಲ್ಲಿದ್ದಾರೆ. ಎರಡರಿಂದ ಮೂರು ಸಂತೆಗಳಲ್ಲಿ ಇವರು ಖಾಯಂ ವ್ಯಾಪಾರಿಗಳಾಗಿದ್ದು, ಖಾಯಂ ಗ್ರಾಹಕರನ್ನು ಹೊಂದಿರುತ್ತಾರೆ. ಸಾಸಿವೆ, ಜೀರಿಗೆ, ದನಿಯಾ, ಚಕ್ಕೆ, ಲವಂಗ, ಯಾಲಕ್ಕಿ, ಚಕ್ರಮಗ್ಗು, ಮೆಂತೆ ಇನ್ನು ಮುಂತಾದವು ಮಸಾಲ ಪದಾರ್ಥಗಳಾಗಿವೆ. ಈ ಎಲ್ಲಾ ಪದಾರ್ಥಗಳನ್ನು ಚಿತ್ರದುರ್ಗ, ಗಂಗಾವತಿ ಮುಂತಾದ ಊರುಗಳ ಸಗಟು ವ್ಯಾಪಾರಿಗಳಿಂದ ಖರೀದಿಸುತ್ತಾರೆ. ಇದು ಚಿಲ್ಲರೆ ವ್ಯಾಪಾರವಾಗಿದ್ದು, ಪ್ರತಿ ಸಂತೆಯಲ್ಲಿ ೫,೦೦೦ ದಿಂದ ೧೦,೦೦೦ ರೂಪಾಯಿಗಳವರೆಗೆ ಬಂಡವಾಳ ಹಾಕುತ್ತಾರೆ. ಇದಕ್ಕೆ ಪ್ರತಿಯಾಗಿ ಅವರು ೫೦೦ರಿಂದ ೭೦೦ ರೂಪಾಯಿಗಳವರೆಗೆ ಲಾಭವನ್ನು ಗಳಿಸುತ್ತಾರೆ. ಸಂತೆಯಲ್ಲಿ ಮಸಾಲಾ ಪದಾರ್ಥಗಳ ವ್ಯಾಪಾರಕ್ಕಾಗಿ ಪ್ರತ್ಯೇಕವಾದ ಜಾಗವಿರುತ್ತದೆ. ಇವರಿಗೆ ಖಾಯಂ ಗ್ರಾಹಕರಿರುವುದರಿಂದ ಸಂತೆಯಲ್ಲಿ ಹೆಚ್ಚು ವ್ಯಾಪಾರ ಹಾಗೂ ಲಾಭವಿರುತ್ತದೆ.

**೪:೨:೧:೫ ಧಾನ್ಯ ವ್ಯಾಪಾರ :** ಅಕ್ಕಿ, ಗೋಧಿ, ಜೋಳ, ರಾಗಿ, ಸಜ್ಜೆ ಇನ್ನು ಮುಂತಾದ ಧಾನ್ಯದ ವ್ಯಾಪಾರವನ್ನು ಮಾಡುವವರಲ್ಲಿ ಬೇಡ ಸಮುದಾಯವು ಒಂದು. ಬಂಡವಾಳಶಾಹಿ ವ್ಯಾಪಾರಿಗಳು ಬೇರೆ ಬೇರೆ ಪ್ರದೇಶಕ್ಕೆ ಧಾನ್ಯಗಳನ್ನು ಸರಬರಾಜು ಮಾಡಿದರೆ ಚಿಲ್ಲರೆ ವ್ಯಾಪಾರಿಗಳು ಇವುಗಳನ್ನು ಸಂತೆಯಲ್ಲಿಯೇ ಮಾರಾಟ ಮಾಡುತ್ತಾರೆ. ಮೂಲತಃ ಬೇಡರು ಹೆಚ್ಚಾಗಿ ಚಿಲ್ಲರೇ ವ್ಯಾಪಾರಿಗಳಾಗಿದ್ದಾರೆ. ಸಂತೆಗೆ ಅಧಿಕ ಜನಸಂಖ್ಯೆಯಲ್ಲಿ ಜನರು ಬರುವುದರಿಂದ ವ್ಯಾಪಾರವು ಹೆಚ್ಚು ಹಾಗೂ ಲಾಭವು ಇದೆ. ಧಾನ್ಯದ ವ್ಯಾಪಾರದಲ್ಲಿ ಪುರುಷರು ಮಾತ್ರ ಕಂಡುಬರುತ್ತಾರೆ. ಧಾನ್ಯದ ವ್ಯಾಪಾರಕ್ಕೆ ಪ್ರತ್ಯೇಕವಾದ ಸ್ಥಳವಿರುತ್ತದೆ. ಒಟ್ಟಿನಲ್ಲಿ ಸಂತೆಯಲ್ಲಿ ಧಾನ್ಯದ ವ್ಯಾಪಾರಕ್ಕೆ ಉತ್ತಮ ಅವಕಾಶವನ್ನು ಒದಗಿಸಿದೆ. ಈ ವ್ಯಾಪಾರ ನಂಬಿರುವ ಈ ಸಮುದಾಯದ ವ್ಯಾಪಾರಿಗಳು ಉಳಿದವರಿಗಿಂತ ಉತ್ತಮ ಸ್ಥಿತಿಯಲ್ಲಿರುವುದು ಕಂಡುಬರುತ್ತದೆ.

**೪:೨:೧:೬ ಚಾಪೆ ಮತ್ತು ಹಗ್ಗದ ವ್ಯಾಪಾರ :** ಪ್ಲಾಸ್ಟಿಕ್ ಚಾಪೆ ಮತ್ತು ಕಂಪನಿಗಳಲ್ಲಿ ತಯಾರಿಸಿದ ನೈಲಾನ್ ಹಗ್ಗಗಳನ್ನು ಖರೀದಿಸಿ ತಂದು, ಹೆಚ್ಚಿನ ಬೆಲೆಗೆ ಸಂತೆಯಲ್ಲಿ ಮಾರುತ್ತಾರೆ. ಈ ರೀತಿಯ ವ್ಯಾಪಾರಗಾರರು ಪ್ರತಿ ಸಂತೆಯಲ್ಲೂ ಒಬ್ಬರು ಅಥವಾ ಇಬ್ಬರು ಕಂಡುಬರುತ್ತಾರೆ. ಸಂತೆಯಲ್ಲಿ ಇವರಿಗೆ

ಹೆಚ್ಚಿನ ವ್ಯಾಪಾರವಾಗುವುದಲ್ಲದೇ ಚಾಪೆ ಮತ್ತು ಹಗ್ಗವನ್ನು ಮಾರಾಟ ಮಾಡುವುದಕ್ಕೆ ಯಾವುದೇ ಬಾಡಿಗೆಯ ಹಣವನ್ನು ಕೊಡಬೇಕಾಗಿರುವುದಿಲ್ಲ. ಸಂತೆಯಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಡ್ಡಾಡುತ್ತಾ ಜನರ ಗಮನವನ್ನು ತಮ್ಮತ್ತ ಸೆಳೆಯುತ್ತ ಹಗ್ಗ ಮತ್ತು ಚಾಪೆ ವ್ಯಾಪಾರವನ್ನು ಮಾಡುವುದೇ ಹೆಚ್ಚು. ಏಕೆಂದರೆ ಪ್ರತಿಯೊಬ್ಬರಿಗೂ ಇವುಗಳ ಅಗತ್ಯವಿರುತ್ತದೆ. ಆದರೆ ನಿರ್ದಿಷ್ಟವಾಗಿ ಅದರ ವ್ಯಾಪಾರಕ್ಕೆ ಬಂದಿರುವುದಿಲ್ಲ. ಆದ್ದರಿಂದ ಅಡ್ಡಾಡುತ್ತ ಜನರನ್ನು ವ್ಯಾಪಾರ ಮಾಡುವಂತೆ ಆಕರ್ಷಿಸುವುದು ಅನಿವಾರ್ಯವಾಗಿರುತ್ತದೆ.

೪:೨:೧:೭ **ಕಟ್ಟಿಗೆ ವ್ಯಾಪಾರ :** ಮೂಲತಃ ಬೇಡರು ಬೇಟೆಗಾರರು ಹಾಗೂ ರಾಜಮಹಾರಾಜರ ಕಾಲದಲ್ಲಿ ಕಾವಲುಗಾರರಾಗಿ ಕಾರ್ಯ ನಿರ್ವಹಿಸಿದವರು. ದೈಹಿಕವಾಗಿ ಸದೃಢವಾಗಿರುವ ಇವರಲ್ಲಿ ಅನೇಕರು ಬಡತನದಿಂದ ಬಳಲುತ್ತಿದ್ದಾರೆ. ಅಂತಹ ಕುಟುಂಬಗಳಿಗೆ ಕೂಲಿಯೇ ಜೀವನಕ್ಕೆ ಆಧಾರ. ಇನ್ನು ಕೆಲವರು ತಮ್ಮ ದೈಹಿಕ ಸಾಮರ್ಥ್ಯವನ್ನು ಬಳಸಿಕೊಂಡು ಹತ್ತಿರದ ಗುಡ್ಡಗಾಡು ಪ್ರದೇಶಗಳಲ್ಲಿ ಕಟ್ಟಿಗೆಯನ್ನು ಕತ್ತರಿಸಿ ತಂದು ಸಂತೆಯಲ್ಲಿ ಮಾರಾಟ ಮಾಡುವುದನ್ನು ಕಾಣುತ್ತೇವೆ. ಬೇಡರೇ ಹೆಚ್ಚಿನ ಸಂಖ್ಯೆಯಲ್ಲಿ ಇರುವ ಬಳ್ಳಾರಿ ಜಿಲ್ಲೆಯಲ್ಲಿ ಬಹಳಷ್ಟು ಜನರು ಕೂಲಿ ಮಾಡುವುದಕ್ಕಿಂತ ಸ್ವತಂತ್ರ ಹಾಗೂ ಲಾಭದಾಯಕವೆಂದು ಕಟ್ಟಿಗೆಯನ್ನು ತಂದು ಮಾರಾಟಮಾಡಿ ಅದರಲ್ಲಿ ಬದುಕುತ್ತಾರೆ. ಅದರಲ್ಲಿಯೂ ಸಂತೆಯಲ್ಲಿ ಮಾರಾಟ ಮಾಡುವುದರಿಂದ ಲಾಭ ಹೆಚ್ಚು ಸಿಗುತ್ತದೆ. ಇವರಿಗೆ ಸಂತೆ ಅನುಕೂಲಕರವಾದ ಸ್ಥಳವಾಗಿದೆ.

೪:೨:೧:೮ **ದನಗಳ ವ್ಯಾಪಾರ :** ಬೇಡರು ಮೂಲ ಕಸುಬನ್ನು ಬಿಟ್ಟು ಕೃಷಿಯಲ್ಲಿ ತೊಡಗಿಸಿ ಕೊಂಡಿರುವುದರಿಂದ ದನಕರುಗಳನ್ನು ಮಾರಲು ಮತ್ತು ಕೊಳ್ಳಲು ಸಂತೆಯಲ್ಲಿ ಭಾಗವಹಿಸುತ್ತಿದ್ದಾರೆ. ಇದರಲ್ಲಿ ಇವರು ಹೆಚ್ಚಿನ ಲಾಭವನ್ನು ಕಂಡುಕೊಂಡಿದ್ದಾರೆ. ಉದಾಹರಣೆಗೆ ಒಂದು ಜೊತೆ ದನಗಳಿಗೆ ಸಂತೆಯಲ್ಲಿ ೩೦೦೦ರಿಂದ ೪೦೦೦ ರೂಪಾಯಿಗಳಷ್ಟು ಅಧಿಕ ಬೆಲೆ ಇರುವುದರಿಂದ ಇದು ಲಾಭದಾಯಕ ವ್ಯಾಪಾರವಾಗಿದೆ. ಇದಲ್ಲದೆ ಇವರಲ್ಲಿ ಕೆಲವರು ಮಧ್ಯವರ್ತಿಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದಾರೆ. ರೈತರಿಂದ ದನಗಳನ್ನು ಖರೀದಿಸಿ ಬೇರೊಬ್ಬ ರೈತನಿಗೆ ಹೆಚ್ಚಿನ ಬೆಲೆಗೆ ಮಾರುತ್ತಿದ್ದಾರೆ.

೪:೨:೧:೯ **ಒಣ ಮೆಣಸಿನಕಾಯಿ ವ್ಯಾಪಾರ :** ಬಳ್ಳಾರಿ ಜಿಲ್ಲೆಯಲ್ಲಿ ಒಣ ಮೆಣಸಿನಕಾಯಿಯನ್ನು ಯಥೇಚ್ಛವಾಗಿ ಬೆಳೆಯುವುದರಿಂದ ಬೇಡರು ಮೆಣಸಿನಕಾಯಿಯನ್ನು ರೈತರಿಂದ ನೇರವಾಗಿ ಖರೀದಿಸಿ ಸಂತೆಯಲ್ಲಿ ಮಾರಾಟ ಮಾಡುವುದು ಹೆಚ್ಚು. ಸಂತೆಯಲ್ಲಿ ಒಣ ಮೆಣಸಿನಕಾಯಿ ವ್ಯಾಪಾರಕ್ಕೆಂದೇ ಪ್ರತ್ಯೇಕವಾದ ಸ್ಥಳವಿದೆ. ಈ ವ್ಯಾಪಾರಕ್ಕೆ ಬೇಡರು ಬಂಡವಾಳವನ್ನು ಹೊಂದಿಸಬೇಕಾಗುತ್ತದೆ. ಖರೀದಿಸಿದ ಒಣ ಮೆಣಸಿನಕಾಯಿಗಳನ್ನು ನಾಲ್ಕಾರು ಸಂತೆಗಳಲ್ಲಿ ಕೇಜಿಗಟ್ಟಲೇ ಮಾರಾಟ ಮಾಡುತ್ತಾರೆ. ಆದ್ದರಿಂದ ಸಂತೆಯಲ್ಲಿ ಈ ವ್ಯಾಪಾರದಿಂದಲೂ ಬೇಡರು ತಮ್ಮ ಬದುಕನ್ನು ಕಂಡುಕೊಂಡಿದ್ದಾರೆ.

೪:೨:೧:೧೦ **ಕೂಲಿಕಾರರಾಗಿ :** ಭಾರತವು ಬಡವರಿಂದ ಕೂಡಿದ ಶ್ರೀಮಂತ ದೇಶವಾಗಿದೆ. ಇಲ್ಲಿ ಬಹಳಷ್ಟು ಬೇಡರು ಭೂರಹಿತರಾಗಿದ್ದಾರೆ. ಆದ್ದರಿಂದ ಇವರು ತಮ್ಮ ಜೀವನ ನಿರ್ವಹಣೆಗಾಗಿ ಕೃಷಿ

ಭೂಮಿಗಳಲ್ಲಿ ಮತ್ತು ಸಾರ್ವಜನಿಕ ಪ್ರದೇಶಗಳಲ್ಲಿ ಕೂಲಿಕಾರರಾಗಿ ದುಡಿಯುವುದು ಅನಿವಾರ್ಯವಾಗಿದೆ. ಅಂತೆಯೇ ಸಂತೆಯಲ್ಲಿ ಬೇಡರು ಹಮಾಲಿಗಳಾಗಿದ್ದಾರೆ. ವ್ಯಾಪಾರಗಾರರು ಸಂತೆಯಲ್ಲಿ ತಂದ ಸರಕುಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಗಿಸಲು ಕೂಲಿಗಳು ಸಹಾಯಕರಾಗಿದ್ದಾರೆ. ಇದರಿಂದ ಬಂದ ಹಣದಿಂದ ಜೀವನ ಸಾಗಿಸುತ್ತಿದ್ದಾರೆ.

೪:೨:೧:೧೧ ಆಯ್ದ ಸಂತೆಗಳಲ್ಲಿ ಆಯ್ದುಕೊಂಡ ಬೇಡ ಬುಡಕಟ್ಟಿನ ವ್ಯಾಪಾರ ವಹಿವಾಟಿನಿಂದ ಬರುವ ಆದಾಯದ ಸರಾಸರಿ ಪ್ರಮಾಣ

**ಕೋಷ್ಟಕ - ೪.೧**

**ಬೇಡ ಬುಡಕಟ್ಟಿನ ಆಯ್ದ ಸದಸ್ಯರ ವ್ಯಾಪಾರ ವಹಿವಾಟಿನ ಸರಾಸರಿ ಪ್ರಮಾಣ**

| ಕ್ರ. ಸಂ. | ಮಾರುವ ಸರಕು | ಸದಸ್ಯರ ಸಂಖ್ಯೆ | ಬಂಡವಾಳ ಪ್ರಮಾಣ | ವಹಿವಾಟು ವೆಚ್ಚ | ಮಾರಾಟ ಬೆಲೆ | ಲಾಭ | ನಷ್ಟ | ತಲಾವಾರು ಸರಾಸರಿ ಲಾಭ |
|---|---|---|---|---|---|---|---|---|
| ೧. | ತರಕಾರಿ | ೮ | ೨೦,೦೦೦ | ೧,೦೦೦ | ೨೫,೦೦೦ | ೪೦೦೦ | -- | ೫೦೦ |
| ೨. | ಹಣ್ಣು | ೬ | ೧೦,೦೦೦ | ೮೦೦ | ೧೩,೦೦೦ | ೧,೨೦೦ | -- | ೨೦೦ |
| ೩. | ಮಸಾಲೆ ಪದಾರ್ಥ | ೧ | ೪,೦೦೦ | ೨೦೦ | ೬,೦೦೦ | ೧,೮೦೦ | -- | ೮೦೦ |
| ೪. | ಧಾನ್ಯ | ೩ | ೬,೦೦೦ | ೭೦೦ | ೮,೦೦೦ | ೧,೩೦೦ | -- | ೪೩೩.೩೩ |
| ೫. | ಚಾಪೆ | ೧ | ೫೦೦ | ೫೦ | ೮೦೦ | ೨೫೦ | -- | ೨೫೦ |
| ೬. | ಹಗ್ಗ | ೨ | ೫೦೦ | ೫೦ | ೮೦೦ | ೨೫೦ | -- | ೧೨೫ |
| ೭. | ಕಟ್ಟಿಗೆ | ೪ | -- | ೧೫೦ | ೪೦೦ | ೨೫೦ | -- | ೬೨.೫ |
| ೮. | ದನಗಳು | ೧ | ೨೦೦೦ | ೧೫೦ | ೩೦೦ | ೮೫೦ | -- | ೮೫೦ |
| ೯. | ಒಣಮೆಣಸಿನಕಾಯಿ | ೨ | ೧೦೦೦ | ೧೦೦ | ೧೫೦೦ | ೪೦೦ | -- | ೨೦೦ |
| | ಒಟ್ಟು | ೨೮ | ೪೪,೦೦೦ | ೩,೨೦೦ | ೫೮,೫೦೦ | ೧೧,೩೦೦ | -- | ೪೦೩.೫೭ |

ಸಂಗ್ರಹಣೆ: ಕ್ಷೇತ್ರಕಾರ್ಯ ಆಧರಿತ ಮಾಹಿತಿ

**ವಿಶ್ಲೇಷಣೆ :** ಬಳ್ಳಾರಿ ಜಿಲ್ಲೆಯ ಕೆಲವು ಆಯ್ದ ಸಂತೆಗಳಲ್ಲಿ ಬೇಡ ಬುಡಕಟ್ಟಿನ ಸಮುದಾಯದ ಆಯ್ದ ವಿವಿಧ ಸದಸ್ಯರುಗಳು ತಮ್ಮ ಜೀವನೋಪಾಯಕ್ಕಾಗಿ ಹಲವಾರು ವಿಧದ ವೃತ್ತಿಗಳನ್ನು ಅವಲಂಬಿಸಿದ್ದು, ಅವರಲ್ಲಿ ಕೂಲಿಕಾರ್ಮಿಕರು ಇರುವುದು ಸಹ ಕಂಡುಬರುತ್ತದೆ. ಈ ಬೇಡ ಬುಡಕಟ್ಟಿನ ಜನರು ಹೆಚ್ಚಾಗಿ ಸಂತೆಯಲ್ಲಿ ತರಕಾರಿ ವ್ಯಾಪಾರಸ್ಥರಾಗಿದ್ದು (ಒಟ್ಟು ೨೮ ಜನರಲ್ಲಿ ೮ ಜನರು) ಅವರು ಒಟ್ಟಾರೆಯಾಗಿ ೨೦,೦೦೦ ರೂ. ಬಂಡವಾಳಕ್ಕೆ ಪಡೆಯುವ ತಲಾ ಆದಾಯ ೫೦೦ ರೂ.ಗಳು ಗಳಾಗಿದೆ. ಅದರಂತೆ,

ಸಂತರವಲ್ಲಿ ಹಣ್ಣು ವ್ಯಾಪಾರಗಾರರು ೬ ಜನರಿದ್ದು, ಅವರು ತೊಡಗಿಸಿರುವ ೧೦,೦೦೦ ರೂ. ಬಂಡವಾಳಕ್ಕೆ ತಲಾ ೨೦೦ ರೂ. ತಲಾ ಆದಾಯವನ್ನು ಪಡೆಯುತ್ತಿದ್ದಾರೆ. ಆದರೆ ಕನಿಷ್ಠ ತಲಾ ಆದಾಯವನ್ನು ಪಡೆಯುವವರು ಹಗ್ಗದ ವ್ಯಾಪಾರ ಮಾಡುವವರಾಗಿದ್ದು ಅವರು ಕೇವಲ ೧೨೫ ರೂ. ಆದಾಯ ಪಡೆದು ಕೊನೆಯ ಸ್ಥಾನದಲ್ಲಿರುವುದು ಈ ಮೇಲಿನ ಕೋಷ್ಟಕದಿಂದ ಸ್ಪಷ್ಟವಾಗುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ, ಆಯ್ದ ೨೮ ಬೇಡ ಬುಡಕಟ್ಟಿನ ಸದಸ್ಯರುಗಳು ಹಾಕಿರುವ ಒಟ್ಟು ಬಂಡವಾಳ ೪೪,೦೦೦/- ರೂ. ಅದಕ್ಕೆ ಪಡೆದ ನಿವ್ವಳ ಲಾಭ ೧೧,೩೦೦/- ರೂ. ಹೀಗಿರುವಾಗ ೨೮ ಜನರ ಸರಾಸರಿ ತಲಾ ಲಾಭ ೪೦೩.೫೭/- ರೂ.ಗಳಾಗಿವೆ. ಆದ್ದರಿಂದ ಈ ಬುಡಕಟ್ಟಿನ ಆರ್ಥಿಕ ಸ್ಥಿತಿಯು ಸಹಜವಾಗಿದೆ.

ಒಟ್ಟಿನಲ್ಲಿ ಸಂತೆಯು ಬೇಡರ ಜೀವನೋಪಾಯಕ್ಕೆ ಒಂದು ಮಾರ್ಗವಾಗಿದೆ. ಸಂತೆಯಲ್ಲಿ ಬೇಡರು ಅನೇಕ ಕಾಯಕಗಳನ್ನು ಮಾಡುತ್ತಾ ತಮ್ಮ ಬದುಕನ್ನು ಕಂಡುಕೊಂಡಿದ್ದಾರೆ.

### ೪:೨:೨ ಮೇದ ಬುಡಕಟ್ಟು

**೪:೨:೨:೧ ಪರಿಚಯ :** ತಮ್ಮ ಮೂಲವೃತ್ತಿಯಾದ ಬಿದಿರಿನಿಂದ ಸಾಮಗ್ರಿ ತಯಾರಿಸುವುದನ್ನು ಮೇದರು ಇಂದಿಗೂ ಮುಂದುವರೆಸಿಕೊಂಡು ಬರುತ್ತಿದ್ದಾರೆ. ಮೇದರು ಕಾಡನ್ನೇ ನಂಬಿ ಬದುಕುವ ಬುಡಕಟ್ಟು ಸಮುದಾಯವಾಗಿದೆ. ಇವರ ಮೂಲನೆಲೆಯನ್ನು ಗಮನಿಸಲಾಗಿ, "ಇವರು ಕರ್ನಾಟಕಕ್ಕೆ ಆಂಧ್ರಪ್ರದೇಶ, ಮಹಾರಾಷ್ಟ್ರ ಹಾಗೂ ತಮಿಳುನಾಡಿನಿಂದ ಬಂದವರೆಂದು ತಿಳಿದುಬರುತ್ತದೆ. ಇವರು ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ಕರ್ನಾಟಕದ ಅನೇಕ ಬುಡಕಟ್ಟು ಸಮುದಾಯಗಳಲ್ಲಿ ಮೇದ ಸಮುದಾಯದ ಶೇಕಡ ಅಂಕ್ಕಿಂತ ಹೆಚ್ಚು ಜನರು ಅವರ ಮೂಲ ಕುಲಕಸಬುನ್ನೇ ನಂಬಿ ಬದುಕುತ್ತಿದ್ದಾರೆ."[೩] "ತಾವು ಆಶ್ರಯಿಸಿರುವ ಕೂಲಿಕಸುಬಿಗೆ ಬೇಕಾದ ಕಚ್ಚಾ ಪದಾರ್ಥಗಳ ಸಮಸ್ಯೆಯಿಂದ ಅವರು ಉತ್ಪಾದಿಸಿದ ವಸ್ತುಗಳ ವಿತರಣೆ ಮತ್ತು ಮಾರಾಟದಲ್ಲಿ ಹಲವು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಮೇದರಲ್ಲಿ ಕನ್ನಡ ಮತ್ತು ತೆಲುಗು ಮಾತನಾಡುವವರಿದ್ದಾರೆ. ಕರ್ನಾಟಕದಲ್ಲಿ ೧೯೯೧ರ ಜನಗಣತಿಯ ಪ್ರಕಾರ ೨೬,೫೩೪ ಜನರಿದ್ದಾರೆ."[೪] "ಮೇದರು ತಯಾರಿಸುವ ಬಿದಿರಿನ ವಸ್ತುಗಳು ನಿತ್ಯ ಜೀವನದ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ವಾಣಿಜ್ಯದಂತಹ ಅನೇಕ ರಂಗಗಳಲ್ಲಿ ಮಾನವನಿಗೆ ಬಹು ಉಪಯೋಗಿಯಾಗಿವೆ. ಮಾನವನು ಹುಟ್ಟಿನಿಂದ ಅಂತಿಮ ಸಂಸ್ಕಾರದವರೆಗೆ ಈ ದೇಶದಲ್ಲಿ ಪ್ರಾದೇಶಿಕವಾಗಿ ಮೇದರು ತಯಾರಿಸಿದ ಬಿದಿರಿನ ವಸ್ತುಗಳು ಬಳಕೆಯಾಗುತ್ತಿವೆ."[೫] ಮೇದರು ತಮ್ಮ ಬಿದಿರಿನ ವಸ್ತುಗಳನ್ನು ಹೆಚ್ಚಾಗಿ ಸಂತೆಯಲ್ಲಿ ಮಾರಾಟ ಮಾಡುತ್ತಾರೆ. ಅಲ್ಲದೇ ಇವರು ಕೂಲಿಕಾರರಾಗಿಯೂ ತಮ್ಮ ಜೀವನ ಮಾಡುತ್ತಿದ್ದಾರೆ.

**೪:೨:೨:೨ ಬಿದಿರಿನ ವಸ್ತುಗಳ ತಯಾರಿಕೆ ಮತ್ತು ವ್ಯಾಪಾರ :** ಮೇದರು ತಮ್ಮ ಮೂಲವೃತ್ತಿ (ಬಿದಿರಿನ ವಸ್ತುಗಳ ತಯಾರಿಕೆ ಮತ್ತು ಮಾರಾಟ)ಯನ್ನು ಸಂತೆಯಲ್ಲಿ ಮುಂದುವರೆಸಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ನಡೆಯುವ ಯಾವುದೇ ಸಂತೆಯಲ್ಲಿಯೂ ಸಹ ಇವರು ತಮ್ಮ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಇವರು ಅನೇಕ ವಿಧವಾದ ಬಿದುರಿನ ವಸ್ತುಗಳನ್ನು ತಯಾರಿಸುತ್ತಾರೆ. ಅದರಲ್ಲಿ ದಿನನಿತ್ಯದ ಅವಶ್ಯಕ ವಸ್ತುಗಳು, ಕೃಷಿ ಸಂಬಂಧಿ ವಸ್ತುಗಳು ಮತ್ತು ಇತರೆ ವಸ್ತುಗಳೆಂದು ಅಧ್ಯಯನ ದೃಷ್ಟಿಯಿಂದ ವಿಭಾಗಿಸಲಾಗಿದೆ. ಮೇದರು ಹಿಂದೆ ಬಿದಿರು ಬೆತ್ತ ಹೆಚ್ಚಾಗಿರುವ ಕಡೆಗಳಿಂದ ಬಿದಿರು ಕಡಿದು ತಂದು ಸಂಗ್ರಹಿಸುತ್ತಿದ್ದರು. ಮೇದರಲ್ಲಿ ಅಮಾವಾಸ್ಯೆ, ಶನಿವಾರ ಹಾಗೂ ದೇವಿಯ ಜಾತ್ರೆಯ ದಿನದಂದು ಬಿದಿರು ಬೊಂಬನ್ನು ಕತ್ತರಿಸುವುದಿಲ್ಲ. ಮನೆಯಲ್ಲಿ ಸೂತಕವಿರುವಾಗಲೂ ಬೊಂಬು ಕತ್ತರಿಸುವುದಿಲ್ಲ.[೬] ಮೂಲ ಕಸುಬಿನ ಸಾಮಗ್ರಿಗಳನ್ನು ವಿತರಿಸಲು ಮೇದರು ಸೊಸೈಟಿಗಳನ್ನು ಮಾಡಿಕೊಂಡಿದ್ದಾರೆ. ಸರ್ಕಾರಿ ಸೊಸೈಟಿಗೆ ಸಿದ್ಧವಸ್ತುಗಳನ್ನು ಮಾರುವುದು ಅಷ್ಟೇನೂ ಲಾಭದಾಯಕವಲ್ಲ. ಹಾಗಾಗಿ ಹಳ್ಳಿ ಹಾಗೂ ಪೇಟೆಗಳಲ್ಲಿ ನಡೆಯುವ ವಾರದ ಸಂತೆಗಳಿಗೆ ತಮ್ಮ ಸಿದ್ಧ ವಸ್ತುಗಳನ್ನು ಅಗತ್ಯಕ್ಕೆ ತಕ್ಕಂತೆ ಹೊತ್ತೊಯ್ಯುತ್ತಾರೆ.

ದಿನನಿತ್ಯ ಬಳಕೆಗೆ ಅಗತ್ಯವಾದ ವಸ್ತುಗಳನ್ನು ಮೇದರು ತಯಾರಿಸುತ್ತಾರೆ. ಅವುಗಳೆಂದರೆ ತರಕಾರಿ ಬುಟ್ಟಿ, ಬಿದಿರಿನ ತಟ್ಟೆ, ಹೂವಿನ ಕುಂಡ, ಪುಟ್ಟಿ, ಏಣಿ, ಅಡಿಕೆಯ ತಟ್ಟಿ ಮುಂತಾದವುಗಳು ತಯಾರಿಸಿ ಸಂತೆಯಲ್ಲಿ ಮಾರಾಟ ಮಾಡುತ್ತಾರೆ. ಜನರು ಸಂತೆಗೆ ತಮ್ಮ ಅಗತ್ಯ ವಸ್ತುಗಳನ್ನು ಕೊಳ್ಳಲು ಬರುವುದರಿಂದ ಈ ವಸ್ತುಗಳಿಗೆ ತುಂಬಾ ಬೇಡಿಕೆ ಇದೆ. ಅಂತೆಯೇ ಕೃಷಿಗೆ ಅಗತ್ಯವಾದ ಮಡಿಕೆ, ಕುಡುಗೋಲು, ಕೊಡ್ಲಿ ಮುಂತಾದ ವಸ್ತುಗಳನ್ನು ತಯಾರಿಸುತ್ತಾರೆ. ಗ್ರಾಮೀಣ ಜನತೆ ಸಂತೆಯಲ್ಲಿ ಹೆಚ್ಚಾಗಿ ಕಾಣುವುದರಿಂದ ಈ ವಸ್ತುಗಳಿಗೂ ಸಹ ಹೆಚ್ಚಿಗೆ ಬೇಡಿಕೆ ಮತ್ತು ಲಾಭ ಎರಡೂ ಇವೆ. ಧಾರ್ಮಿಕ ಆಚರಣೆ ಮುಂತಾದವುಗಳಿಗೆ ಅಗತ್ಯವಾದ ವಸ್ತುಗಳನ್ನು ಸಹ ತಯಾರಿಸುತ್ತಾರೆ. ಒಟ್ಟಿನಲ್ಲಿ ಸಂತೆಯಲ್ಲಿ ಇವರು ತಮ್ಮ ವಸ್ತುಗಳನ್ನು ಮಾರಾಟ ಮಾಡುವುದರ ಮೂಲಕ ತಮ್ಮ ಜೀವನವನ್ನು ಕಂಡುಕೊಂಡಿದ್ದಾರೆ.

**೪:೨:೨:೩ ಕೂಲಿಕಾರರಾಗಿ :** ಸಂತೆಯಲ್ಲಿ ಕೂಲಿಕಾರರಾಗಿ ಕೆಲಸ ಮಾಡುವವರಲ್ಲಿ ಮೇದರು ಇದ್ದಾರೆ. ಆಧುನಿಕ ಸಮಾಜದಲ್ಲಿ ತಮ್ಮ ಮೂಲವೃತ್ತಿಯ ಅಪ್ರಸ್ತುತತೆಯ ಸಂಬಂಧ ಎದುರಿಸಬೇಕಾಗಿ ಬಂದ ಕಾರಣ ಕಷ್ಟನಷ್ಟವನ್ನು ಬಳ್ಳಾರಿ ಜಿಲ್ಲೆಯ ಮೇದರಲ್ಲಿ ಅನೇಕರು ಕೃಷಿಕೂಲಿಗಳಾಗಿ, ಮೈನ್ಸ್‌ಗಳಲ್ಲಿ ಕೂಲಿಕಾರ್ಮಿಕರಾಗಿ ಮತ್ತು ಸಂತೆಯೂ ಸೇರಿದಂತೆ ಅನೇಕ ಸಾರ್ವಜನಿಕ ಸ್ಥಳಗಳಲ್ಲಿ ಕೂಲಿಕಾರರಾಗಿ ತಮ್ಮ ಬದುಕನ್ನು ಕಂಡುಕೊಂಡಿದ್ದಾರೆ. ಸಂತೆಯಲ್ಲಿ ಸಾಮಗ್ರಿಗಳನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸುವಂತಹ ಕೆಲಸದಲ್ಲಿ ತೊಡಗಿ ಸ್ವಲ್ಪ ಹಣ ಸಂಪಾದಿಸುವರು. ಈ ಹಣದಿಂದ ತಮ್ಮ ಬದುಕನ್ನು ನಿರ್ವಹಿಸುತ್ತಿರುವುದು ಕಂಡುಬರುತ್ತದೆ.

೪:೨:೨:೪ ಆಯ್ದ ಸಂತೆಗಳಲ್ಲಿ ಆಯ್ದುಕೊಂಡ ಮೇದ ಬುಡಕಟ್ಟಿನ ವ್ಯಾಪಾರ ವಹಿವಾಟಿನಿಂದ ಬರುವ ಆದಾಯದ ಸರಾಸರಿ ಪ್ರಮಾಣ:

**ಕೋಷ್ಟಕ - ೪.೨**

**ಮೇದ ಬುಡಕಟ್ಟಿನ ಆಯ್ದ ಸದಸ್ಯರ ವ್ಯಾಪಾರ ವಹಿವಾಟಿನ ಸರಾಸರಿ ಪ್ರಮಾಣ**

| ಕ್ರ. ಸಂ. | ಮಾರುವ ಸರಕು | ಸದಸ್ಯರ ಸಂಖ್ಯೆ | ಬಂಡವಾಳ ಪ್ರಮಾಣ | ವಹಿವಾಟು ವೆಚ್ಚ | ಮಾರಾಟ ಬೆಲೆ | ಲಾಭ | ನಷ್ಟ | ತಲಾವಾರು ಸರಾಸರಿ ಲಾಭ |
|---|---|---|---|---|---|---|---|---|
| ೧. | ನಿತ್ಯಾವಶ್ಯಕ ವಸ್ತುಗಳು | ೧೫ | ೨೨,೦೦೦ | ೨,೦೦೦ | ೨೮,೦೦೦ | ೪,೦೦೦ | -- | ೨೬೬.೬೬ |
| ೨. | ಕೃಷಿ ಸಂಬಂಧಿ ವಸ್ತುಗಳು | ೧೦ | ೨೫,೦೦೦ | ೧,೦೦೦ | ೨೯,೦೦೦ | ೩,೦೦೦ | -- | ೩೦೦ |
| ೩. | ಇತರೆ ವಸ್ತುಗಳು | ೬ | ೩,೦೦೦ | ೫೦೦ | ೪,೦೦೦ | ೫೦೦ | -- | ೮೩.೩೩ |
| | **ಒಟ್ಟು** | **೩೧** | **೫೦,೦೦೦** | **೩,೫೦೦** | **೬೧,೦೦೦** | **೭,೫೦೦** | **--** | **೨೪೧.೯೩** |

ಸಂಗ್ರಹಣೆ: ಕ್ಷೇತ್ರಕಾರ್ಯ ಆಧರಿತ ಮಾಹಿತಿ.

**೧. ನಿತ್ಯಾವಶ್ಯಕ ಬಿದಿರಿನ ವಸ್ತುಗಳು :** ಚಾಪೆ, ಬುಟ್ಟಿ, ಬಿದಿರಿನ ತಟ್ಟೆ, ಮರ, ಹೂಬುಟ್ಟಿ, ಹೂಕುಂಡ್ಲ ರೊಟ್ಟಿತಡಿಕೆ, ಬಿಸಣಿಕೆ, ಬಿದಿರು ತೊಟ್ಟಿಲು, ರೊಟ್ಟಿಪುಟ್ಟಿ ಇತ್ಯಾದಿ.

**೨. ಬಿದಿರಿನ ಕೃಷಿ ಸಂಬಂಧಿ ವಸ್ತುಗಳು :** ಬಿದಿರಿನ ಮಡಿಕೆ, ಕುಡುಗೋಲು, ಕೊಡಲಿ, ಬೀಜಗಳ ಬಿತ್ತನೆ ಮಾಡುವ ಸಲಕರಣೆ, ಈಸು ಇತ್ಯಾದಿ.

**೩. ಇತರೆ ವಸ್ತುಗಳು :** ಮನೆ ಬಾಗಿಲು, ತಡಿಕೆ ಇತ್ಯಾದಿ.

**ವಿಶ್ಲೇಷಣೆ :** ಬಳ್ಳಾರಿ ಜಿಲ್ಲೆಯ ಆಯ್ದ ಕೆಲವು ಸಂತೆಗಳಲ್ಲಿ ಮೇದರ ಬುಡಕಟ್ಟಿನ ಆಯ್ದ ಕೆಲವು ಸದಸ್ಯರ ವ್ಯಾಪಾರವನ್ನು ಸಮೀಕ್ಷಿಸಲಾಗಿ, ಈ ಸಮುದಾಯದ ಹೆಚ್ಚು ಸದಸ್ಯರು ದಿನನಿತ್ಯದ ಅವಶ್ಯಕ ವಸ್ತುಗಳನ್ನು ಮಾರಾಟ ಮಾಡುವವರಾಗಿದ್ದು ಆಯ್ದ ೩೧ ಸದಸ್ಯರಲ್ಲಿ ೧೫ ಜನ ಈ ವ್ಯಾಪಾರ ಮಾಡುವವರಾಗಿದ್ದಾರೆ. ಆದರೆ ಕೃಷಿಸಂಬಂಧಿ ವಸ್ತುಗಳನ್ನು ಮಾರಾಟ ಮಾಡುವವರು ೧೦ ಜನರಿದ್ದು ೨೫,೦೦೦ ರೂ. ಬಂಡವಾಳ ವಿನಿಯೋಗಿಸಿ ೩೦೦ ರೂ. ತಲಾ ಆದಾಯ ಪಡೆದು ಪ್ರಥಮ ಸ್ಥಾನದಲ್ಲಿದ್ದಾರೆ. ಇತರೆ ವಸ್ತುಗಳ ವ್ಯಾಪಾರ ಮಾಡುವವರು ಕೇವಲ ೮೩.೩೩ ರೂ. ತಲಾ ಆದಾಯ ಪಡೆದು ಕೊನೆಯ ಸ್ಥಾನದಲ್ಲಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ, ಆಯ್ದ ೩೧ ಸದಸ್ಯರು ಒಟ್ಟು ೫೦,೦೦೦ ರೂ. ಬಂಡವಾಳ ಹಾಕಿ ೭,೫೦೦ ರೂ. ನಿವ್ವಳ ಲಾಭ ಪಡೆದು ೨೪೧.೯೩ ರೂ. ಸರಾಸರಿ ತಲಾ ಆದಾಯ ಪಡೆದ ಆರ್ಥಿಕವಾಗಿ ಸಹಜ ಸ್ಥಿತಿಯಲ್ಲಿದ್ದಾರೆ.

### ೪:೨:೩ ಹಕ್ಕಿಪಿಕ್ಕಿ ಬುಡಕಟ್ಟು

**೪:೨:೩:೧ ಪರಿಚಯ :** ಬೇಟೆಯನ್ನು ಅವಲಂಬಿಸಿ, ಅಲೆಮಾರಿಗಳಾಗಿ ಬದುಕುವ ಹಕ್ಕಿಪಿಕ್ಕಿಯವರನ್ನು ಗ್ರಾಮೀಣ ಪರಿಸರಿದ ಜನ ಸಂಶಯ ದೃಷ್ಟಿಯಿಂದ ಕಾಣುತ್ತಾರೆ. ಇದಕ್ಕೆ ಕಾರಣ ಅವರು ಆಗಾಗ ಸಣ್ಣಪುಟ್ಟ ಕಳ್ಳತನವನ್ನು ಮಾಡುವುದಾಗಿದೆ.[೮] ಪ್ರಸ್ತುತ ದಿನಮಾನಗಳಲ್ಲಿ ಇವರು ಕಳ್ಳತನವನ್ನು ಬಿಟ್ಟಿದ್ದರೂ ಸಹಿತ ಸಂಶಯದ ದೃಷ್ಟಿ ಹೋಗಿಲ್ಲ. ಹೀಗಾಗಿ ಹಕ್ಕಿಪಿಕ್ಕಿಯವರು ಹಳ್ಳಿ ಮತ್ತು ನಗರ ಪ್ರದೇಶಗಳಿಂದ ದೂರದಲ್ಲಿ ತಮ್ಮದೇ ಆದ ವಾಸಸ್ಥಾನಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಇತ್ತೀಚೆಗೆ ಭಾರತ ಸರ್ಕಾರವು "ಹರಿಜನ ಗಿರಿಜನ ಅಭಿವೃದ್ಧಿ ಯೋಜನೆ, ಪುನರ್‌ವಸತಿ ಯೋಜನೆ"ಯನ್ನು ತಂದಿದ್ದರಿಂದ ಸರ್ಕಾರದ ಸವಲತ್ತುಗಳನ್ವಯ ದರ್ಕಾಸ್ತು ಜಮೀನನ್ನು ಹಾಗೂ ಇತರ ಸೌಲಭ್ಯಗಳನ್ನು ಪಡೆದುಕೊಂಡು ಒಂದೇ ಕಡೆಯಲ್ಲಿ ನೆಲೆ ನಿಲ್ಲುತ್ತಿದ್ದಾರೆ. ಭಾರತದ ಅನೇಕ ಕಡೆಗಳಲ್ಲಿ ಕಂಡುಬರುವ ಇವರು ಕರ್ನಾಟಕದಲ್ಲಿ ಮೈಸೂರು, ಬೆಂಗಳೂರು, ಮಂಡ್ಯ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಬಳ್ಳಾರಿ, ಬಿಜಾಪುರ, ಬೀದರ, ಧಾರವಾಡ ಹಾಗೂ ಗುಲಬರ್ಗಾ ಜಿಲ್ಲೆಗಳಲ್ಲಿ ಹೆಚ್ಚಾಗಿ ವಾಸವಾಗಿದ್ದಾರೆ. ೧೯೮೧ರ ಜನಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಇವರ ಜನಸಂಖ್ಯೆ ೩೮೩. ಆದರೆ ಈಗ ಅವರ ಜನಸಂಖ್ಯೆ ಅತ್ಯಂತ ಹೆಚ್ಚಾಗಿರುವುದು ಕಂಡುಬರುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟಂತೆ "ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ ನಗರದ ಹರಿಶ್ಚಂದ್ರ ನಗರ, ಹೊಸಪೇಟೆ ತಾಲೂಕಿನ ಹೊಸಪೇಟೆ ನಗರದ ಊರಮ್ಮನ ಬಯಲು, ಕಾರಿಗನೂರು ಗ್ರಾಮ, ಕಂಪ್ಲಿ ಪಟ್ಟಣದ ಶಿಕಾರಿ ಕಾಲೋನಿ, ಸಣಾಪುರ ಗ್ರಾಮ ಇತ್ಯಾದಿ"[೯] ಸ್ಥಳಗಳಲ್ಲಿ ಕಂಡುಬರುತ್ತಾರೆ. ಹಕ್ಕಿಪಿಕ್ಕಿ ಪುರುಷರು ಬೇಟೆ, ವ್ಯಾಪಾರ ಮುಂತಾದ ಕಸುಬುಗಳಲ್ಲಿ ತೊಡಗಿಕೊಂಡಿದ್ದಾರೆ.[೧೦] ಅಲ್ಲದೇ ಕೃಷಿಕೂಲಿ ಮತ್ತು ಕೂಲಿಕಾರರಾಗಿ ದುಡಿಯುತ್ತಿದ್ದಾರೆ.

**೪:೨:೩:೨ ಕಾಡು ಉತ್ಪನ್ನಗಳ ಮಾರಾಟ :** ಹಕ್ಕಿಪಿಕ್ಕಿಯವರು ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ ಹೆಚ್ಚಾಗಿ ಕೃಷಿಕೂಲಿ ಮತ್ತು ಮೈನ್ಸ್‌ನಲ್ಲಿ ದುಡಿಯುವ ಕಾರ್ಮಿಕರಾಗಿದ್ದಾರೆ. ಇವರಲ್ಲಿ ಬೇಟೆಯಾಡುವ ಪದ್ಧತಿಯಿದೆ. ಕರ್ನಾಟಕ ಸರ್ಕಾರ ಜಾರಿಗೆ ತಂದ ವನ್ಯಜೀವಿ ರಕ್ಷಣೆಯ ಕಾಯ್ದೆ ಅನ್ವಯ ಇದು ಕಾನೂನುಬದ್ಧ ಅಪರಾಧವಾದರೂ ಹಕ್ಕಿಪಿಕ್ಕಿಯವರು, ತಮ್ಮ ಜೀವನ ನಿರ್ವಹಣೆಗಾಗಿ ಕಾಡುಗಳಿಂದ ಬೇಟೆಯಾಡಿ ತಂದ ಪ್ರಾಣಿಗಳನ್ನು ಪೊಲೀಸರು ಕಣ್ಣುತಪ್ಪಿಸಿ ಸಂತೆಯಲ್ಲಿ ಮಾರುವುದುಂಟು. ಆದರೆ ಈ ರೀತಿಯ ವ್ಯಾಪಾರವು ಪ್ರತಿ ಸಂತೆಯಲ್ಲಿ ನಡೆಯದೇ ಯಾವುದಾದರೂ ಒಂದು ಸಂತೆಯಲ್ಲಿ ಮಾತ್ರ ನಡೆಯುತ್ತದೆ. ಆದ್ದರಿಂದ ಈ ರೀತಿಯ ಪ್ರಾಣಿಗಳ ಮಾಂಸಕ್ಕೆ ಸಂತೆಯಲ್ಲಿ ಹೆಚ್ಚಿನ ಬೇಡಿಕೆ ಇರುತ್ತದೆ. ಕಾಡಿನ ಇತರ ಉತ್ಪನ್ನಗಳಾದ ಜೇನುತುಪ್ಪ, ನವಿಲುತುಪ್ಪ, ಉಡುವಿನ ತುಪ್ಪ, ಹುಲಿಯುಗುರು, ಹುಲಿಹಲ್ಲು, ಹದ್ದಿನ ಉಗುರು, ಕರಡಿ ಉಗುರು, ಕಸ್ತೂರಿ, ಕಟ್ಟಿಗೆ ಹಾಗೂ ವಿಧ ವಿಧವಾದ ಔಷಧಿ ಗುಣಗಳುಳ್ಳ ಗಿಡಮೂಲಿಕೆಗಳನ್ನು ಸಹ ಮಾರಾಟ ಮಾಡುತ್ತಾರೆ. ಇದರಿಂದ ಬಂದಂತಹ ಹಣದಿಂದ ಇವರ ಉಪಜೀವನ ನಡೆಯುತ್ತದೆ. ಆದ್ದರಿಂದ ಸಂತೆಯು ಇವರು ತಂದಂತಹ ವಸ್ತುಗಳಿಗೆ ವ್ಯಾಪಾರ ಮಾಡಲು ಸೂಕ್ತ ವೇದಿಕೆಯನ್ನು ಕಲ್ಪಿಸಿಕೊಡುತ್ತದೆ. ಇವರು ಕಾಡು ಉತ್ಪನ್ನಗಳನ್ನು ವ್ಯಾಪಾರ ಮಾಡುವಾಗ ನಿಖರವಾದ ಬೆಲೆ

ಇರುವುದಿಲ್ಲ. ಇದಕ್ಕೆ ಕಾರಣ ಪೊಲೀಸರ ಭಯ. ಯಾರೇ ಬಂದರು ಅಗ್ಗದ ಬೆಲೆಗೆ ತಮ್ಮ ವಸ್ತುಗಳನ್ನು ಮಾರಾಟ ಮಾಡುತ್ತಾರೆ.

೪:೨:೩:೩ **ಅಗತ್ಯ ವಸ್ತುಗಳ ಮಾರಾಟ :** ಹಕ್ಕಿಪಿಕ್ಕಿಯವರು ಕಾಡು ಉತ್ಪನ್ನಗಳನ್ನು ಮಾತ್ರ ಮಾರಾಟ ಮಾಡದೇ ದಿನಬಳಕೆಯ ಅಗತ್ಯ ವಸ್ತುಗಳನ್ನು ಸಹ ಸಂತೆಯಲ್ಲಿ ಮಾರಾಟ ಮಾಡುತ್ತಾರೆ. ಸೂಜಿ, ದಬ್ಬಣ, ಪಿನ್ನು, ಕರಿಮಣಿ, ರುದ್ರಾಕ್ಷಿ ಇತ್ಯಾದಿ ವಸ್ತುಗಳಿವೆ. ಸಂತೆಗಳಲ್ಲಿ ಹಣಕ್ಕಾಗಿ ಇಲ್ಲವೇ ಮನುಷ್ಯರ ತಲೆ ಕೂದಲುಗಳ ವ್ಯಾಪಾರ ಮಾಡುವುದುಂಟು. ಗೃಹ ಕೈಗಾರಿಕೆಗಳಲ್ಲಿ ಸಿದ್ಧಪಡಿಸುವ ವಸ್ತುಗಳನ್ನು ಸಗಟು ಬೆಲೆಗೆ ತಂದು ಸಂತೆಯಲ್ಲಿ ಮಾರಾಟ ಮಾಡಿ, ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ. ಸಂತೆಯು ಇವರ ಬದುಕಿಗೆ ಸಹಕಾರಿಯಾಗಿದೆ. ಇವರು ಮಾರುವ ವಸ್ತುಗಳು ಬೆಲೆಯುಳ್ಳವಾಗಿದೆ. ಇವುಗಳ ಮಾರಾಟದಲ್ಲಿ ಹೆಣ್ಣುಮಕ್ಕಳು ಹೆಚ್ಚು. ಈ ವ್ಯಾಪಾರವು ಇವರ ಉಪಜೀವನಕ್ಕೆ ದಾರಿ ಮಾಡಿಕೊಟ್ಟಿದೆ.

೪:೨:೩:೪ **ಕೂಲಿಕಾರರಾಗಿ :** ಪ್ರಸ್ತುತದಲ್ಲಿ ಹಕ್ಕಿಪಿಕ್ಕಿಯವರು ಜೀವಿಸುವ ಜೀವನಕ್ಕೆ ಆಹಾರದ ಅಗತ್ಯತೆ, ಉತ್ಪಾದನೆ ಮುಖ್ಯವಾಗಿರುವುದರಿಂದ ಅವಲಂಬಿಸಿರುವ ಕ್ಷೇತ್ರಗಳು ವಿಭಿನ್ನವಾದ ಉತ್ಪಾದನಾ ಮಾರ್ಗದಲ್ಲಿ ಕೂಲಿಯೂ ಸಹ ಗಣನೀಯ ಪ್ರಭಾವ ಬೀರಿದೆ.[೧೦] ಆರಂಭದ ದಿನಗಳಲ್ಲಿ ಭೂಮಿಯನ್ನು ನಂಬಿ ದುಡಿದ ಹಕ್ಕಿಪಿಕ್ಕಿಯವರು ಇಂದು ಬಹುಸಂಖ್ಯಾತ ಜನರು ಸುತ್ತಲ ಗ್ರಾಮಗಳ ವ್ಯವಸಾಯಗಾರರ ಮನೆಗಳಲ್ಲಿ ಕೂಲಿಕಾರ್ಮಿಕರಾಗಿ ಮತ್ತು ಸಂತೆ, ಬಸ್‌ನಿಲ್ದಾಣ ಸ್ಥಳಗಳಲ್ಲಿ ಕೂಲಿಕಾರರಾಗಿ ಕೆಲಸ ಮಾಡುತ್ತಿದ್ದಾರೆ. ಸಂತೆಯು ಅನೇಕ ಸಮುದಾಯಗಳಿಗೆ ಕೆಲಸವನ್ನು ಕೊಟ್ಟಿದೆ. ಅದರಂತೆ ಹಕ್ಕಿಪಿಕ್ಕಿಯವರು ಸಹ ಕೂಲಿಗಾರರಾಗಿ ಇದ್ದಾರೆ. ಸಂತೆಯಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸರಕುಗಳನ್ನು ಸಾಗಿಸುವುದು ಹಾಗೂ ವ್ಯಾಪಾರಗಾರರು ಹೇಳಿದ ಕೆಲಸವನ್ನು ಮಾಡಿ ಜೀವನ ಸಾಗಿಸುತ್ತಿದ್ದಾರೆ. ಹಕ್ಕಿಪಿಕ್ಕಿ ಸಮುದಾಯದ ಕೆಲವರಿಗೆ ಸಂತೆಯು ವ್ಯಾಪಾರ ಮಾಡಿ ಬದುಕಲು ಉಪಯುಕ್ತವಾಗಿದೆ.

**೪:೨:೨:೫ ಆಯ್ದ ಸಂತೆಗಳಲ್ಲಿ ಆಯ್ದುಕೊಂಡ ಹಕ್ಕಿಪಿಕ್ಕಿ ಬುಡಕಟ್ಟಿನ ವ್ಯಾಪಾರ ವಹಿವಾಟಿನಿಂದ ಬರುವ ಆದಾಯದ ಸರಾಸರಿ ಪ್ರಮಾಣ:**

**ಕೋಷ್ಟಕ - ೪.೩**

**ಹಕ್ಕಿಪಿಕ್ಕಿ ಬುಡಕಟ್ಟಿನ ಆಯ್ದ ಸದಸ್ಯರ ವ್ಯಾಪಾರ ವಹಿವಾಟಿನ ಸರಾಸರಿ ಪ್ರಮಾಣ**

| ಕ್ರ. ಸಂ. | ಮಾರುವ ಸರಕು | ಸದಸ್ಯರ ಸಂಖ್ಯೆ | ಬಂಡವಾಳ ಪ್ರಮಾಣ | ವಹಿವಾಟು ವೆಚ್ಚ | ಮಾರಾಟ ಬೆಲೆ | ಲಾಭ | ನಷ್ಟ | ತಲಾವಾರು ಸರಾಸರಿ ಲಾಭ |
|---|---|---|---|---|---|---|---|---|
| ೧. | ಕಾಡು ಉತ್ಪನ್ನಗಳ ಮಾರಾಟ | ೨೫ | -- | -- | ೩,೦೦೦ | ೩,೦೦೦ | -- | ೧೨೦ |
| ೨. | ಅಗತ್ಯ ವಸ್ತುಗಳ ಮಾರಾಟ | ೩೫ | ೩೮,೦೦೦ | ೮೦೦ | ೩೫,೦೦೦ | ೬,೨೦೦ | -- | ೧೭೭.೧೪ |
| | ಒಟ್ಟು | ೬೦ | ೨೮,೦೦೦ | ೮೦೦ | ೩೮,೦೦೦ | ೯,೨೦೦ | -- | ೧೫೩.೩೩ |

ಸಂಗ್ರಹಣೆ: ಕ್ಷೇತ್ರಕಾರ್ಯ ಆಧರಿತ ಮಾಹಿತಿ.

೧. **ಕಾಡು ಉತ್ಪನ್ನಗಳು :** ಜೇನುತುಪ್ಪ, ನವಿಲುತುಪ್ಪ, ಉಡುವಿನ ತುಪ್ಪ, ಹುಲಿ ಉಗುರು, ಹುಲಿಹಲ್ಲು, ಹದ್ದಿನ ಉಗುರು, ಕರಡಿ ಉಗುರು, ಕಸ್ತೂರಿ, ಕಟ್ಟಿಗೆ, ಗಿಡಮೂಲಿಕೆಗಳು ಇತ್ಯಾದಿ.

೨. **ಅಗತ್ಯ ವಸ್ತುಗಳು :** ಸೂಜಿ, ದಬ್ಬಣ, ಪಿನ್ನು, ಕರಿಮಣಿ, ರುದ್ರಾಕ್ಷಿ, ರಿಬ್ಬನ್ನು, ಬಾಚಣಿಕೆ, ಕನ್ನಡಿ ಇತ್ಯಾದಿ.

**ವಿಶ್ಲೇಷಣೆ :** ಬಳ್ಳಾರಿ ಜಿಲ್ಲೆಯ ಆಯ್ದು ಕೆಲವು ಸಂತೆಗಳಲ್ಲಿ ಆಯ್ದ ೬೦ ಹಕ್ಕಿಪಿಕ್ಕಿ ಬುಡಕಟ್ಟಿನ ಸದಸ್ಯರನ್ನು ಸಂದರ್ಶಿಸಲಾಗಿ ಅವರಲ್ಲಿ ೩೫ ಜನರು ಅಗತ್ಯ ವಸ್ತುಗಳ ಮಾರಾಟ ಮಾಡುವ ವೃತ್ತಿಯಲ್ಲಿ ತೊಡಗಿದ್ದು, ಅದಕ್ಕಾಗಿ ೨೮,೦೦೦ ರೂ. ಬಂಡವಾಳವನ್ನು ತೊಡಗಿಸಿ ೬,೨೦೦ ರೂ. ನಿವ್ವಳ ಲಾಭವನ್ನು ಪಡೆದು ತಲಾ ೧೭೪.೧೪ ರೂ. ಪಡೆಯುವವರಾಗಿದ್ದಾರೆ. ಆದರೆ ಇದೇ ಬುಡಕಟ್ಟಿನ ಇತರ ೩೫ ಸದಸ್ಯರುಗಳು ಕಾಡುಉತ್ಪನ್ನಗಳನ್ನು ತರಲು ಯಾವುದೇ ಬಂಡವಾಳ ವಿನಿಯೋಗಿಸದೇ ಸಂತೆಯಂತೆ ಮಾರಾಟ ಮಾಡಿ ೩,೦೦೦ ರೂ. ಲಾಭಾಂಶವನ್ನು ಪಡೆದು ತಲಾ ೧೨೦ ರೂ. ಪಡೆಯುವವರಾಗಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಸಮುದಾಯದ ಆಯ್ದ ೬೦ ಸದಸ್ಯರುಗಳು ಒಟ್ಟು ೨೮,೦೦೦ ರೂ. ಮೊತ್ತದ ಬಂಡವಾಳ ತೊಡಗಿಸಿ ೯,೨೦೦ ರೂ. ಸಂತೆಯೊಂದಕ್ಕೆ ನಿವ್ವಳ ಲಾಭಾಂಶ ಪಡೆದು ತಲಾ ೧೫೩.೩೩ ರೂ. ಹೊಂದಿದ್ದಾರೆ. ಆದ್ದರಿಂದ ಇವರು ಆರ್ಥಿಕವಾಗಿ ಸುಸ್ಥಿತಿಯ ಆದಾಯ ಹೊಂದುವವರೆಂದು ಭಾವಿಸಲಾಗಿದೆ.

### ೪:೨:೪ ರಾಜಗೊಂಡ ಬುಡಕಟ್ಟು

**೪:೨:೪:೧ ಪರಿಚಯ:** ಸಂತೆಗಳಲ್ಲಿ ಮತ್ತು ಬೀದಿಗಳಲ್ಲಿ ತಲ-ತಲಾಂತರಗಳಿಂದಲೂ ವ್ಯಾಪಾರ ಮಾಡಿದ ಬುಡಕಟ್ಟುಗಳಲ್ಲಿ ರಾಜಗೊಂಡ ಬುಡಕಟ್ಟು ಒಂದು. ಗೊಂಡ ಬುಡಕಟ್ಟಿನಿಂದ ಕವಲೊಡೆದವರೇ ಈ ರಾಜಗೊಂಡರಾಗಿದ್ದಾರೆ. ರಾಜಗೊಂಡರು ಹಿಂದೆ ರಾಜ ಮಹಾರಾಜರ ಕಾಲದಲ್ಲಿ ಆಯುರ್ವೇದದ ವೈದ್ಯವನ್ನು ಮಾಡುವಂತ ರಾಜವೈದ್ಯರಾಗಿದ್ದರು. ನಂತರ ರಾಜರ ಕಾಲವು ಅಂತ್ಯವಾದಾಗ ಇವರು ಬೀದಿಪಾಲಾಗಿ ತಮ್ಮ ಮೂಲ ವೃತ್ತಿಯಾದ ನಾಟಿ ಔಷಧಿ ನೀಡುವುದನ್ನು ಬೀದಿಗಳಲ್ಲಿ ಹಾಗೂ ಸಂತೆಗಳಲ್ಲಿ ಮುಂದುವರೆಸಿದ್ದಾರೆ. ಇವರು ಭಾರತದಲ್ಲಿ ವಿವಿಧ ಕಡೆಗಳಲ್ಲಿ ವಾಸಿಸುತ್ತಿದ್ದು, ಕರ್ನಾಟಕದಲ್ಲಿ ಬೀದರ್, ಹರಿಹರ ಮತ್ತು ಬೆಂಗಳೂರಿನಲ್ಲಿ ಇದ್ದಾರೆ. ಭಾರತದಲ್ಲಿ ೨೦೦೦ ಕುಟುಂಬಗಳು ಮತ್ತು ಸುಮಾರು ೧೦,೦೦೦ ಜನಸಂಖ್ಯೆ ರಾಜಗೊಂಡರಿದ್ದಾರೆ.[೨೭] ಇವರ ಪ್ರಮುಖ ವೃತ್ತಿ ಆಯುರ್ವೇದ ಗಿಡಮೂಲಿಕೆಗಳ ಮೂಲಕ ಜನರಿಗೆ ಔಷಧಿ ಮಾರುವುದು. ಇತ್ತೀಚಿನ ದಿನಗಳಲ್ಲಿ ಕಿವಿ ಸ್ವಚ್ಛಗೊಳಿಸುವ ಕೆಲಸದಲ್ಲಿ ತೊಡಗಿಕೊಂಡಿದ್ದಾರೆ. ಇದು ಮಾತ್ರವಲ್ಲದೇ ರಾಜಗೊಂಡರ ಚಿಕ್ಕಮಕ್ಕಳು ಪ್ಲಾಸ್ಟಿಕ್ ಪೇಪರ್ ಸಂಗ್ರಹಿಸುವ ಕೆಲಸದಲ್ಲಿ ಮತ್ತು ಕೆಲವರು ವಿದ್ಯುತ್ ವೈರಿಂಗ್ ಕೆಲಸಗಳಲ್ಲಿ ಸೇರಿಕೊಂಡಿದ್ದಾರೆ.

**೪:೨:೪:೨ ಆಯುರ್ವೇದ ಗಿಡಮೂಲಿಕೆಯ ವ್ಯಾಪಾರ :** ರಾಜಗೊಂಡರ ಮೂಲ ಕಸುಬು ಆಯುರ್ವೇದದ ಗಿಡಮೂಲಿಕೆಯ ವ್ಯಾಪಾರವಾಗಿದೆ. "ಇದಕ್ಕಾಗಿಯೇ ಇವರನ್ನು 'ಜಡಿ ಬೂಟಿ'ಗಳೆಂದು ಕರೆಯುತ್ತಾರೆ. ವಿಂಧ್ಯ, ಸಾತಪುರ, ನರ್ಮದಾ, ಗೋದಾವರಿ ಇತ್ಯಾದಿ ನದಿ ಜಲಾಶಯನ ಪ್ರದೇಶಗಳಿಂದ ಗಿಡಮೂಲಿಕೆಗಳನ್ನು ಸಂಗ್ರಹಿಸುತ್ತಾರೆ. ಇದು ಸಾಧ್ಯವಾಗದಿದ್ದಾಗ ಸ್ಥಳೀಯ ಆಯುರ್ವೇದದ ಅಂಗಡಿಗಳಿಂದ ಕಚ್ಚಾ ಔಷಧಿಗಳನ್ನು ಖರೀದಿಸಿ ಔಷಧಿ ತಯಾರಿಸಿ ಮಾರಾಟ ಮಾಡುವರು."[೨೨] ಇವರು ಅಲೆಮಾರಿ ಸಮುದಾಯವಾಗಿದ್ದು ಕರ್ನಾಟಕದಾದ್ಯಂತ ತಮ್ಮ ವ್ಯಾಪಾರ ಮಾಡಲು ಅಲೆಯುತ್ತಿರುತ್ತಾರೆ. ಇವರು ಜನನಿಬಿಡ ಪ್ರದೇಶಗಳಾದ ಸಂತೆಗಳು, ಬಸ್‌ಸ್ಟಾಂಡ್, ರೈಲು ನಿಲ್ದಾಣ ಮುಂತಾದ ಸ್ಥಳಗಳಲ್ಲಿ ಬೀದಿಯ ಪಕ್ಕದಲ್ಲಿ ಗುಡಾರಗಳನ್ನು ಹಾಕಿ ಗಿಡಮೂಲಿಕೆಗಳ ವ್ಯಾಪಾರವನ್ನು ಮಾಡುತ್ತಾರೆ. ಸಂತೆಗಳಲ್ಲಿ ಹಳ್ಳಿಯ ಜನರು ಬರುವುದರಿಂದ ಇವರ ಗಿಡಮೂಲಿಕೆಗಳನ್ನು ಖರೀದಿಸುತ್ತಾರೆ. ರಾಜಗೊಂಡರಲ್ಲಿ ಕೆಮ್ಮು, ನೆಗಡಿ, ಹೊಟ್ಟೆನೋವು, ಜ್ವರ, ನಪುಂಸಕತ್ವಕ್ಕೆ ಮತ್ತು ಮುಂತಾದ ರೋಗಗಳಿಗೆ ಆರ್ಯುವೇದದ ಔಷಧಗಳು ದೊರೆಯುತ್ತವೆ. ಸಂತೆಯ ಬಂದು ಪಕ್ಕದಲ್ಲಿ ಒಂದು ಬಿಡಾರವನ್ನು ಹೂಡಿ ಅದರಲ್ಲಿ ಇವರು ವ್ಯಾಪಾರ ಮಾಡುತ್ತಾರೆ. ಸಂತೆಗೆ ಬಂದ ಜನರನ್ನು ತಮ್ಮತ್ತ ಗಮನ ಸೆಳೆಯಲು, ಮೈಕುಗಳನ್ನು ಉಪಯೋಗಿಸಿ ಆಕರ್ಷಕ ಮಾತುಗಳಿಂದ ಜನರನ್ನು ತಮ್ಮ ಕಡೆಗೆ ಸೆಳೆಯುತ್ತಾರೆ. ಇದರಿಂದ ಹೆಚ್ಚಿನ ವ್ಯಾಪಾರ ಮತ್ತು ಲಾಭವೂ ಸಹ ಇರುತ್ತದೆ. ಇವರಿಗೆ ಆರ್ಯವೇದದ ಗಿಡಮೂಲಿಕೆಯು ಅಗ್ಗದ ಬೆಲೆಗೆ ಮಾರುಕಟ್ಟೆಗಳು ಅಥವಾ ಔಷಧಿ ಅಂಗಡಿಗಳಲ್ಲಿ ಲಭ್ಯವಾಗುತ್ತದೆ. ಅಲ್ಲದೇ ಅಷ್ಟೇ ಪರಿಣಾಮಕಾರಿಯಾಗಿ ರೋಗಗಳನ್ನು ಗುಣಪಡಿಸುತ್ತವೆ. ಆದರೆ ಇತ್ತೀಚಿನ ದಿನಮಾನಗಳಲ್ಲಿ ವ್ಯವಸ್ಥಿತವಾದ ಕ್ಲಿನಿಕ್‌ಗಳು ಅಥವಾ ಔಷಧಿ ಅಂಗಡಿಗಳಿರುವ ಕಾರಣ ನಗರಗಳು, ಸಂತೆಗಳಲ್ಲಿ ಕುಳಿತು ನಾಟಿ ಔಷಧಿ ಮಾರುವ ಇವರ ಔಷಧಗಳ ಬಗೆಗೆ ಸಾರ್ವಜನಿಕರಲ್ಲಿ ಹೆಚ್ಚು ನಂಬಿಕೆ ಇಲ್ಲವಾದ್ದರಿಂದ ಔಷಧಿ ವ್ಯಾಪಾರ ಒಂದು ಸಾಹಸವಾಗಿದೆ.

**೪:೨:೪:೩ ಪ್ಲಾಸ್ಟಿಕ್ ವಸ್ತುಗಳ ವ್ಯಾಪಾರ :** ರಾಜಗೊಂಡ ಬುಡಕಟ್ಟು ಜನರು ಬದಲಾಗುತ್ತಿರುವ ಸಮಾಜದಲ್ಲಿ ಕೇವಲ ಗಿಡಮೂಲಿಕೆ ವ್ಯಾಪಾರವನ್ನು ಮಾತ್ರ ಮಾಡದೇ ಪ್ಲಾಸ್ಟಿಕ್ ವಸ್ತುಗಳಾದ ಸ್ಟೇರಿಂಗ್ ಕವರ್, ಟಿ.ವಿ. ಪರದೆ, ಟೇಬಲ್ ಕ್ಲಾತ್ ಮುಂತಾದ ವಸ್ತುಗಳ ಮಾರಾಟದಲ್ಲಿ ತೊಡಗಿದ್ದಾರೆ. ಇವರು ಈ ವಸ್ತುಗಳನ್ನು ದಿನಾಲು ಮಾರಾಟ ಮಾಡುತ್ತಿದ್ದರೂ, ಸಂತೆಯ ದಿನದಂದು ಹೆಚ್ಚಿನ ವಸ್ತುಗಳು ಮಾರಾಟ ಮಾಡುತ್ತಾರೆ ಎಂಬುದು ತಿಳಿದುಬಂದಿದೆ. ಇವರು ಕಚ್ಚಾವಸ್ತುಗಳನ್ನು ಸಗಟು ವ್ಯಾಪಾರಿಗಳಿಂದ ತಂದು ಬೇಕಾದ ರೀತಿಯಲ್ಲಿ ವಸ್ತುಗಳನ್ನು ತಯಾರಿಸುತ್ತಾರೆ. ಇವರ ಹಾಕಿದ ಬಂಡವಾಳಕ್ಕಿಂತ ಹೆಚ್ಚಾಗಿ ಹಾಗೂ ಸಾಗಾಟ ಮುಂತಾದ ವೆಚ್ಚವನ್ನು ಸೇರಿಸಿ ವಸ್ತುಗಳ ಬೆಲೆಗಳನ್ನು ನಿಗದಿಪಡಿಸುತ್ತಾರೆ. ಸಂತೆಯಲ್ಲಿ ಅನೇಕ ರೀತಿಯ ಜನಗಳು ಹೆಚ್ಚಾಗಿ ಬರುವುದರಿಂದ, ಇವರ ವಸ್ತುಗಳು ಅಧಿಕವಾಗಿ ವ್ಯಾಪಾರವಾಗುತ್ತವೆ. ಒಟ್ಟಾರೆ ಹೇಳುವುದಾದರೆ ರಾಜಗೊಂಡರ ಕೆಲವು ಕುಟುಂಬಗಳು ಸಂತೆಯಿಂದ ಒಂದಿಷ್ಟು ಲಾಭವನ್ನು ಪಡೆದುಕೊಂಡಿದ್ದಾರೆ.

**೪:೨:೪:೪ ಕಿವಿ ಸ್ವಚ್ಛಗೊಳಿಸುವ ಕಾಯಕ :** ಇಂದಿನ ಪೀಳಿಗೆಯ ರಾಜಗೊಂಡರು ಆಯುರ್ವೇದದ ಗಿಡ ಮೂಲಿಕೆಗಳ ವ್ಯಾಪಾರದಲ್ಲಿ ಅಧಿಕ ಲಾಭವಿಲ್ಲವೆಂದು ತಿಳಿದು ಪರ್ಯಾಯ ವೃತ್ತಿಗಳನ್ನು ಕೈಗೊಂಡಿದ್ದಾರೆ. ಇವರು ಬಂಡವಾಳವೇ ಇಲ್ಲದ ಸಾರ್ವಜನಿಕರ ಕಿವಿ ಸ್ವಚ್ಛಗೊಳಿಸುವ ಕಾಯಕದಲ್ಲಿ ತೊಡಗಿದ್ದಾರೆ. ಗಿಡಮೂಲಿಕೆ ಔಷಧಿ ವ್ಯಾಪಾರಕ್ಕಾಗಿ ಬಂದ ಬೀದರ್‌ನ ರಾಜಗೊಂಡರಲ್ಲಿ ಕೆಲವರು ಕಿವಿ ಸ್ವಚ್ಛಗೊಳಿಸುವ ಕಾಯಕವನ್ನು ಹೊಸಪೇಟೆ ಸಂತೆಯಲ್ಲಿ ಆರಂಭಿಸಿದ್ದಾರೆ. ಮನುಷ್ಯನ ಸೂಕ್ಷ್ಮ ಭಾಗವಾದ ಕಿವಿಯನ್ನು ಸ್ವಚ್ಛಗೊಳಿಸುವ ಇವರ ಕಲೆಗಾರಿಕೆಯು ತುಂಬಾ ಅದ್ಭುತವಾದುದಾಗಿದೆ. ಈ ರೀತಿಯಲ್ಲಿ ಒಬ್ಬ ಮನುಷ್ಯನಿಗೆ ಕೇವಲ ಐದು ರೂಪಾಯಿಗಳನ್ನು ತೆಗೆದುಕೊಂಡು ಕಿವಿ ಸ್ವಚ್ಛಗೊಳಿಸುತ್ತಾರೆ. ಒಟ್ಟಿನಲ್ಲಿ ಸಂತೆಗಳು ರಾಜಗೊಂಡರಿಗೆ ಜೀವನ ಸಾಗಿಸಲು ಬೇಕಾದ ಹಣವನ್ನು ಸಂಪಾದಿಸುವ ತಾಣವಾಗಿದೆ.

**೪:೨:೪:೫ ಆಯ್ದ ಸಂತೆಗಳಲ್ಲಿ ಆಯ್ದುಕೊಂಡ ರಾಜಗೊಂಡ ಬುಡಕಟ್ಟಿನ ವ್ಯಾಪಾರ ವಹಿವಾಟಿನಿಂದ ಬರುವ ಆದಾಯದ ಸರಾಸರಿ ಪ್ರಮಾಣ:**

**ಕೋಷ್ಟಕ - ೪.೪**

**ರಾಜಗೊಂಡ ಬುಡಕಟ್ಟಿನ ಆಯ್ದ ಸದಸ್ಯರ ವ್ಯಾಪಾರ ವಹಿವಾಟಿನ ಸರಾಸರಿ ಪ್ರಮಾಣ**

| ಕ್ರ. ಸಂ. | ಮಾರುವ ಸರಕು | ಮಾರಾಟಗಾರರ ಸಂಖ್ಯೆ | ಬಂಡವಾಳ ಪ್ರಮಾಣ | ವಹಿವಾಟು ವೆಚ್ಚ | ಮಾರಾಟ ಬೆಲೆ | ಲಾಭ | ನಷ್ಟ | ತಲಾವಾರು ಸರಾಸರಿ ಲಾಭ |
|---|---|---|---|---|---|---|---|---|
| ೧. | ಆಯುರ್ವೇದಿಕ್ ಗಿಡಮೂಲಿಕೆಗಳ ವ್ಯಾಪಾರ | ೬ | ೧,೦೦೦ | ೩೦೦ | ೨,೦೦೦ | ೭೦೦ | -- | ೧೧೬.೬೬ |
| ೨. | ಪ್ಲಾಸ್ಟಿಕ್ ವಸ್ತುಗಳ ವ್ಯಾಪಾರ | ೨೨ | ೮,೦೦೦ | ೧,೫೦೦ | ೧೩,೦೦೦ | ೩,೫೦೦ | -- | ೧.೫೯ |
| ೩. | ಕಿವಿ ಸ್ವಚ್ಛಗೊಳಿಸುವ ಕಾಯಕ | ೩ | -- | -- | ೧೫೦ | ೧೫೦ | -- | ೫೦ |
| | ಒಟ್ಟು | ೩೧ | ೯,೦೦೦ | ೧,೮೦೦ | ೧೫,೧೫೦ | ೪,೩೫೦ | -- | ೧೪೦.೩೨ |

ಸಂಗ್ರಹಣೆ: ಕ್ಷೇತ್ರಕಾರ್ಯ ಆಧರಿತ ಮಾಹಿತಿ

**೧. ಆಯುರ್ವೇದಿಕ್ ಗಿಡಮೂಲಿಕೆಗಳು :** ಕೆಮ್ಮಿನ ಔಷಧ, ಹೊಟ್ಟೆನೋವು, ಜ್ವರದ ಔಷಧ, ಮೈಕೈ ನೋವಿನ ನಿವಾರಕ ಔಷಧ, ನಪುಂಸಕತ್ವ ನಿವಾರಣಾ ಔಷಧ, ಗುಪ್ತ ರೋಗಗಳ ನಿವಾರಣಾ ಔಷಧ ಇತ್ಯಾದಿ.

೨. ಪ್ಲಾಸ್ಟಿಕ್ ವಸ್ತುಗಳು : ಸ್ಟೇರಿಂಗ್ ಕವರ್, ಟಿ.ವಿ. ಪರದೆ, ಟೇಬಲ್ ಕ್ಲಾತ್ ಇತ್ಯಾದಿ.

**ವಿಶ್ಲೇಷಣೆ :** ಬಳ್ಳಾರಿ ಜಿಲ್ಲೆಯ ಆಯ್ದ ಸಂತೆಗಳಲ್ಲಿ ರಾಜಗೊಂಡ ಬುಡಕಟ್ಟಿನ ಆಯ್ದ ೩೧ ಸದಸ್ಯರನ್ನು ಸಮೀಕ್ಷಿಸಿ, ಸಂದರ್ಶಿಸಲಾಗಿ, ಈ ಸಮುದಾಯದ ಹೆಚ್ಚು ಸದಸ್ಯರು ಪ್ಲಾಸ್ಟಿಕ್ ವಸ್ತುಗಳನ್ನು ಮಾರುವವರಾಗಿದ್ದು, ಒಟ್ಟು ೩೧ರಲ್ಲಿ ೨೨ ಜನರು ೮,೦೦೦ ರೂ. ಬಂಡವಾಳ ಹಾಕಿ ೩,೫೦೦ ರೂ. ನಿವ್ವಳ ಲಾಭವನ್ನು ಪಡೆದು ಸರಾಸರಿ ತಲಾ ೧೫೯ ರೂ. ಪಡೆದರೆ, ಇದೇ ಬುಡಕಟ್ಟಿನ ಕಿವಿ ಸ್ವಚ್ಛಗೊಳಿಸುವ ಕಾಯಕ ಹೊಂದಿರುವ ೩ ಜನ ಸದಸ್ಯರು ಯಾವುದೇ ಬಂಡವಾಳ ತೊಡಗಿಸದೆ ೧೫೦ ರೂ. ನಿವ್ವಳ ಲಾಭ ಪಡೆದು ತಲಾ ೫೦ ರೂ. ಆದಾಯ ಪಡೆಯುವವರಾಗಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಸಮುದಾಯದ ೩೧ ಸದಸ್ಯರುಗಳು ಒಟ್ಟು ೯,೦೦೦ ರೂ. ಬಂಡವಾಳ ಹಾಕಿ ೪,೩೫೦ ರೂ. ನಿವ್ವಳ ಲಾಭ ಪಡೆದು, ೧೪೦.೩೨ ರೂ. ತಲಾ ಆದಾಯ ಹೊಂದಿ ಆರ್ಥಿಕವಾಗಿ ಸಹಜ ಆದಾಯ ಹೊಂದಿದವರಾಗಿದ್ದಾರೆಂದು ತಿಳಿಯುತ್ತದೆ.

### ೪:೨:೫ ಲಂಬಾಣಿ ಸಮುದಾಯ

**೪:೨:೫:೧ ಪರಿಚಯ :** ಕರ್ನಾಟಕದ ಗುಡ್ಡಗಾಡು ಸಮುದಾಯಗಳಲ್ಲಿ ವಿಶಿಷ್ಟ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವ ಸಮುದಾಯಗಳಲ್ಲಿ ಲಂಬಾಣಿಗಳು ಮುಖ್ಯರು. ಒಂದೆರಡು ಜಿಲ್ಲೆಗಳನ್ನುಳಿದು ಕರ್ನಾಟಕದಾದ್ಯಂತ ಕಂಡುಬರುವ ಈ ಸಮುದಾಯ ನೂರಾರು ವರ್ಷಗಳ ಹಿಂದೆ ರಾಜಸ್ಥಾನದಿಂದ ವಲಸೆ ಬಂದು ಕಾಡು ಮೇಡುಗಳಲ್ಲಿ ವಾಸಿಸುತ್ತಾ ತಮ್ಮ ಮೂಲ ಸಂಸ್ಕೃತಿಯನ್ನು ದಟ್ಟವಾಗಿ ಕಾಪಾಡಿಕೊಂಡು ಬಂದಿದ್ದಾರೆ.[೧೫] ಲಂಬಾಣಿಯವರು ಮೂಲತಃ ಉಪ್ಪಿನ ವ್ಯಾಪಾರಿಗಳು, ಲಂಬಾಣಿಯವರು ಅಲೆಮಾರಿ ಸಮುದಾಯವಾಗಿದ್ದು ಪ್ರಾಚೀನ ಕಾಲದಿಂದಲೂ ಜೀವನೋಪಾಯಕ್ಕಾಗಿ ಆಹಾರ ಧಾನ್ಯಗಳನ್ನು, ಹತ್ತಿ, ತುಪ್ಪಟ ಮುಂತಾದ ಅವಶ್ಯಕ ವಸ್ತುಗಳ ವ್ಯಾಪಾರವನ್ನು ಮಾಡುತ್ತಿದ್ದರು.[೧೬] ಲಂಬಾಣಿಯವರಿಗೆ ಬಂಜಾರು, ಬಣಜಾರ ಎಂಬುದಾಗಿಯೂ ಸಹ ಕರೆಯುತ್ತಾರೆ. ಇದರಿಂದ ಇವರು ಮೂಲತಃ ವರ್ತಕರಾಗಿದ್ದರೆಂಬುದನ್ನೇ ಸೂಚಿಸುತ್ತದೆ.[೧೭] ಸಾಮಾನ್ಯವಾಗಿ ಗುಡ್ಡಗಾಡು ಪ್ರದೇಶಗಳಲ್ಲಿ ನೆಲೆಸಿರುವ ಲಂಬಾಣಿಗರು ಊರುಗಳಿಂದ ದೂರದಲ್ಲಿ ಪ್ರತ್ಯೇಕವಾಗಿಯೇ ಉಳಿದು ಸ್ವತಂತ್ರವಾದ ತಾಂಡಾಗಳನ್ನು ಕಟ್ಟಿಕೊಂಡಿದ್ದಾರೆ. ಹೀಗೆ ನೆಲೆಯಾಗಿರುವ ಅವರು ತಾಂಡಾ ಊರುಗಳಂತೆ ಪ್ರತ್ಯೇಕ ಘಟಕವಾಗಿರದೆ, ಆ ಊರಿನ ಒಂದು ಮಜರೆ(Hamlet)ಯಾಗಿಯೇ ಪರಿಗಣಿಸಲ್ಪಡುತ್ತದೆ. ಈ ರೀತಿಯ ತಾಂಡಾಗಳು ಬಳ್ಳಾರಿ ಜಿಲ್ಲೆಯಲ್ಲಿ ಅನೇಕ ಇವೆ. ೧೯೯೧ರ ಜನಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಇವರ ಜನಸಂಖ್ಯೆ ೭೫,೫೮೩. ಈಗ ಇವರ ಜನಸಂಖ್ಯೆ ಇನ್ನೂ ಹೆಚ್ಚಾಗಿರುವುದು ಕಂಡುಬರುತ್ತದೆ. ಲಂಬಾಣಿಗಳು ಸಂತೆಯಲ್ಲಿ ಭಾಗವಹಿಸುತ್ತಿದ್ದಾರೆ. ಅರಣ್ಯ ಉತ್ಪನ್ನ ವಸ್ತುಗಳನ್ನು, ಬಟ್ಟೆಗಳನ್ನು, ತರಕಾರಿಗಳನ್ನು ಸಂತೆಯಲ್ಲಿ ಮಾರಾಟ ಮಾಡುತ್ತಿದ್ದಾರೆ. ಅಲ್ಲದೇ ಕೂಲಿಕಾರರಾಗಿಯೂ ಸಂತೆಯಲ್ಲಿ ಜೀವನ ಸಾಗಿಸುತ್ತಿದ್ದಾರೆ. ಸಂತೆಯು ಇವರ ವಸ್ತುಗಳ ವ್ಯಾಪಾರ ವಹಿವಾಟಿಗೆ ಅವಕಾಶ ಕಲ್ಪಿಸಿಕೊಟ್ಟಿದೆ.

೪:೨:೫:೨ **ಅರಣ್ಯ ಉತ್ಪನ್ನಗಳ ಮಾರಾಟ :** ಲಂಬಾಣಿಯವರು ಕಾಡಿನಲ್ಲಿ ಯಥೇಚ್ಛಾಗಿ ಸಿಗುವ ಜೇನುತುಪ್ಪ, ಕವಳಿ ಹಣ್ಣು, ಬಿಕ್ಕಿ ಹಣ್ಣು, ನೆಲ್ಲಿಕಾಯಿ ಮುಂತಾದ ಹಣ್ಣುಹಂಪಲುಗಳನ್ನು ಆಯಾ ಋತುಗಳಲ್ಲಿ ಸಂಗ್ರಹಿಸಿ ಸಂತೆಗೆ ತಂದು ಮಾರುತ್ತಾರೆ. ಇದರಲ್ಲಿ ಹೆಚ್ಚಿನ ರೀತಿಯ ಲಾಭವಿಲ್ಲದಿದ್ದರೂ, ಬಂಡವಾಳವಿಲ್ಲದ ವ್ಯಾಪಾರ ಇದಾಗಿರುವುದರಿಂದ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯುತ್ತದೆ. ಅಲ್ಲದೇ ಕೆಲ ಲಂಬಾಣಿ ಮಹಿಳೆಯರು ಕಾಡಿನಲ್ಲಿ ಕಟ್ಟಿಗೆಯನ್ನು ಕಡಿದು ತಲೆಮೇಲೆ ಹೊತ್ತು ಸಂತೆಗಳಲ್ಲಿ ಮತ್ತು ಜನದಟ್ಟಣೆ ಇರುವ ಪ್ರದೇಶಕ್ಕೆ ಹೋಗಿ ಮಾರುವರು. ಆದರೆ ಸಂತೆಗಳಲ್ಲಿಯೇ ಒಂದು ಹೊರೆ ಕಟ್ಟಿಗೆಗೆ ೨೦ರಿಂದ ೪೦ ರೂಪಾಯಿಗಳಷ್ಟು ಬೆಲೆ ದೊರೆಯುತ್ತದೆ. ಸಂತೆಯ ಒಂದು ಭಾಗದಲ್ಲಿ ಕಟ್ಟಿಗೆಗಳನ್ನು ಇಟ್ಟುಕೊಂಡು ಲಂಬಾಣಿಯವರು ವ್ಯಾಪಾರಕ್ಕಾಗಿ ಕಾಯುವರು. ಇವರಿಗಾಗಿ ಯಾವುದೇ ಪ್ರತ್ಯೇಕವಾದ ಸ್ಥಳ ಇರುವುದಿಲ್ಲ. ಸಂತೆಯಲ್ಲಿ ಕಟ್ಟಿಗೆ ಮತ್ತು ಹಣ್ಣುಗಳನ್ನು ಮಾರಲು ಸಂತೆಯ ಹಿಂದಿನ ದಿನವೇ ಕಾಡಿಗೆ ಹೋಗಿ ತರುತ್ತಾರೆ. ಇವುಗಳನ್ನು ಸಂತೆಯಲ್ಲಿ ಮಾರಿ ಬಂದ ಹಣದಿಂದ ಇವರ ಉಪಜೀವನ ಸಾಗುತ್ತದೆ.

೪:೨:೫:೩ **ಅಗತ್ಯ ವಸ್ತುಗಳ ಮಾರಾಟ :** ಲಂಬಾಣಿಯವರು ಹೆಚ್ಚಾಗಿ ಕೃಷಿಕೂಲಿ ಕಾರ್ಮಿಕರಾಗಿದ್ದಾರೆ. ಇವರಲ್ಲಿಯೇ ಕೆಲವರು ಬಟ್ಟೆ ವ್ಯಾಪಾರವನ್ನು ತೊಡಗಿಸಿಕೊಂಡಿದ್ದಾರೆ. ಇವರು ಸಂಡೂರು, ಬೆಂಗಳೂರು ಮುಂತಾದ ಕಡೆಗಳಿಂದ ಬಟ್ಟೆಗಳನ್ನು ಸಗಟು ಬೆಲೆಯಲ್ಲಿ ಖರೀದಿಸಿ ತಂದು ಸಂತೆಯಲ್ಲಿ ನಿಗದಿಯಾದ ಬೆಲೆಯಲ್ಲಿ ಮಾರಾಟ ಮಾಡುತ್ತಾರೆ. ಹಲವಾರು ಸಮುದಾಯಗಳು ಸಂತೆಗೆ ಬರುವುದರಿಂದ ಬಟ್ಟೆಗಳಿಗೆ ಚೌಕಾಸಿಯನ್ನು ಒಡ್ಡುತ್ತಾರೆ. ವ್ಯಾಪಾರಕ್ಕಾಗಿ ಬಂದ ಗ್ರಾಹಕ ವ್ಯಕ್ತಿಗಳಿಗೆ ಅನುಗುಣವಾಗಿ ಬಟ್ಟೆಯ ಬೆಲೆಯನ್ನು ನಿಗದಿಪಡಿಸುತ್ತಾರೆ. ಈ ಬಟ್ಟೆಯ ವ್ಯಾಪಾರ ಮಾಡುವವರು ಬಂಡವಾಳವನ್ನು ಹೂಡಬೇಕಾಗುತ್ತದೆ. ಅಂತೆಯೇ ಲಂಬಾಣಿಯವರು ಬಂಡವಾಳವನ್ನು ಹೂಡಿ, ಸಗಟು ಬೆಲೆಯಲ್ಲಿ ಬಟ್ಟೆಯನ್ನು ಖರೀದಿಸಿ ಸಂತೆಯಲ್ಲಿ ವ್ಯಾಪಾರವನ್ನು ಮಾಡುವರು. ಬಳ್ಳಾರಿ ಜಿಲ್ಲೆಯಲ್ಲಿ ಹಂಪೆ ಇರುವುದರಿಂದ ವಿದೇಶಿ ಪ್ರವಾಸಿಗರು ಹೆಚ್ಚಾಗಿ ಬರುತ್ತಾರೆ. ಇದರಿಂದ ವಿದೇಶಿಯ ಪ್ರವಾಸಿಗರು ಲಂಬಾಣಿಯರ ಆತ್ಯಾಕರ್ಷಕ ವಸ್ತ್ರಗಳಿಗೆ ಆಕರ್ಷಿತರಾಗಿ ಬಟ್ಟೆಗಳನ್ನು ಕೊಂಡುಕೊಳ್ಳುತ್ತಿದ್ದಾರೆ. ಇದರಿಂದ ಸಂತೆಯಲ್ಲಿ ಬಟ್ಟೆಗಳನ್ನು ವ್ಯಾಪಾರ ಮಾಡುವಂತ ಲಂಬಾಣಿಯವರಿಗೆ ಹೆಚ್ಚಿನ ಬೆಲೆಯು ಲಭ್ಯವಾಗಿ ಅಧಿಕ ಲಾಭವನ್ನು ಪಡೆಯುತ್ತಿದ್ದಾರೆ. ಆದರೆ ಎಲ್ಲಾ ಸಂತೆಯಲ್ಲಿಯೂ ಇದೇ ರೀತಿಯ ಲಾಭವಿರುವುದಿಲ್ಲ. ಇವರು ಸಂತೆಯಲ್ಲಿ ತೆಳ್ಳನೆಯ ವರ್ಣರಂಜಿತ ಮೆಲಂಗಿ, ಬಣ್ಣ ಬಣ್ಣದ ಚೂಡಿದಾರ, ಪೈಟಾಲಂಗಾ, ಆಧುನಿಕ ವಿನ್ಯಾಸವುಳ್ಳ ಬಟ್ಟೆಗಳನ್ನು ಹೆಚ್ಚಾಗಿ ಮಾರುತ್ತಾರೆ. ಒಟ್ಟಿನಲ್ಲಿ ಸಂತೆಯು ಇವರ ವಸ್ತ್ರಗಳು ಮಾರಾಟಕ್ಕೆ ಅವಕಾಶ ಕಲ್ಪಿಸಿದೆ.

೪:೨:೫:೪ **ತರಕಾರಿ ಮಾರುವುದು :** ಅರಣ್ಯ ಉತ್ಪನ್ನಗಳ ಮತ್ತು ಕೃಷಿ ಕೂಲಿಯಲ್ಲಿ ಲಾಭವಿಲ್ಲ ಎಂದು ಅರಿತ ಲಂಬಾಣಿಯವರು ಇಂದು ತರಕಾರಿ ವ್ಯಾಪಾರದಲ್ಲಿ ನಿರತರಾಗಿದ್ದಾರೆ. ಇವರು ಅನ್ಯ ಸಮುದಾಯಗಳಂತೆ ಕೃಷಿ ಉತ್ಪನ್ನ ಮಾರಾಟ ಕೇಂದ್ರಗಳಿಗೆ ಹೋಗಿ ಹರಾಜಿನಲ್ಲಿ ತರಕಾರಿಗಳನ್ನು ತಂದು ಸಂತೆಯಲ್ಲಿ ವ್ಯಾಪಾರ ಮಾಡುತ್ತಿದ್ದಾರೆ. ಅಲ್ಲದೇ ಕೆಲವರು ರೈತರಿಂದಲೂ ತರಕಾರಿ ಪದಾರ್ಥಗಳನ್ನು

ಕೊಂಡು ಸಂತೆಯಲ್ಲಿ ಮಾರಾಟ ಮಾಡುವುದು ಸಂತೆಯ ದಿನ ಮಾತ್ರವಲ್ಲದೇ ಬಿಡಿ ದಿನಗಳಲ್ಲಿಯೂ ಸಹ ಇವರು ತರಕಾರಿಗಳನ್ನು ಬುಟ್ಟಿಯಲ್ಲಿ ಇಟ್ಟು, ತಲೆಯ ಮೇಲೆ ಹೊತ್ತುಕೊಂಡು ವ್ಯಾಪಾರ ಮಾಡುತ್ತಾರೆ. ಸಂತೆಯಲ್ಲಿ ತರಕಾರಿ ಮಾರುವುದನ್ನು ಇವರು ಇತ್ತೀಚಿಗೆ ಅಳವಡಿಸಿಕೊಂಡ ಪರ್ಯಾಯ ಕಸುಬುಗಳಾಗಿವೆ.

೪:೨:೫:೫ **ಕೂಲಿಕಾರರಾಗಿ :** ಇತ್ತೀಚಿನ ದಿನಗಳಲ್ಲಿ ಬದುಕಿನ ನಿರ್ವಹಣೆಗಾಗಿ ಇವರು ಬೇರೆ ಬೇರೆ ದುಡಿಮೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಅದರಲ್ಲಿ ಸಂತೆಯಲ್ಲಿ ಮಾಡುವ ಹಮಾಲಿ ಕೆಲಸವೂ ಒಂದು. ವ್ಯಾಪಾರಸ್ಥರು ಹರಾಜಿನಲ್ಲಿ ಪಡೆದಂತ ವಸ್ತುಗಳನ್ನು ಸಂತೆಗೆ ಸಾಗಿಸುವ ಕೆಲಸದಂತೆ ನಿರತರಾಗಿದ್ದಾರೆ. ಇದರಿಂದ ಇವರಿಗೆ ಒಬ್ಬ ವ್ಯಾಪಾರಿಯಿಂದ ದಿನ ಒಂದಕ್ಕೆ ೩೦ ರೂಪಾಯಿಗಳಿಂದ ೫೦ ರೂಪಾಯಿಗಳವರೆಗೆ ದೊರೆಯುತ್ತದೆ. ಇದೇ ರೀತಿ ಸಂತೆಯಲ್ಲಿ ಮೂರರಿಂದ ನಾಲ್ಕು ವ್ಯಾಪಾರಿಗಳ ವಸ್ತುಗಳನ್ನು ಕೆಲವು ಲಂಬಾಣಿ ಯುವಕರು ಸಂತೆಗೆ ಸಾಗಿಸುತ್ತಾರೆ. ಈ ವ್ಯಾಪಾರಿಗಳು ಕೊಟ್ಟ ಹಣದಿಂದ ಜೀವನ ನಿರ್ವಹಿಸುವುದು ಕಂಡುಬರುತ್ತದೆ.

**೪:೨:೫:೬ ಆಯ್ದ ಸಂತೆಗಳಲ್ಲಿ ಆಯ್ದುಕೊಂಡ ಲಂಬಾಣಿ ಸಮುದಾಯದ ವ್ಯಾಪಾರ ವಹಿವಾಟಿನಿಂದ ಬರುವ ಆದಾಯದ ಸರಾಸರಿ ಪ್ರಮಾಣ:**

**ಕೋಷ್ಟಕ - ೪.೫**

**ಲಂಬಾಣಿ ಬುಡಕಟ್ಟಿನ ಆಯ್ದ ಸದಸ್ಯರ ವ್ಯಾಪಾರ ವಹಿವಾಟಿನ ಸರಾಸರಿ ಪ್ರಮಾಣ**

| ಕ್ರ. ಸಂ. | ಮಾರುವ ಸರಕು | ಮಾರಾಟಗಾರರ ಸಂಖ್ಯೆ | ಬಂಡವಾಳ ಪ್ರಮಾಣ | ವಹಿವಾಟು ವೆಚ್ಚ | ಮಾರಾಟ ಬೆಲೆ | ಲಾಭ | ನಷ್ಟ | ತಲಾವಾರು ಸರಾಸರಿ ಲಾಭ |
|---|---|---|---|---|---|---|---|---|
| ೧. | ಅರಣ್ಯ ಉತ್ಪನ್ನಗಳ ಮಾರಾಟ | ೧೨ | -- | -- | ೧೦೦೦ | ೧೦೦೦ | -- | ೮೩.೩೩ |
| ೨. | ಅಗತ್ಯ ವಸ್ತುಗಳ ಮಾರಾಟ | ೧೨ | ೨೮,೦೦೦ | ೫,೦೦೦ | ೩೮,೦೦೦ | ೫,೦೦೦ | -- | ೪೧೬.೬೬ |
| ೩. | ತರಕಾರಿ ವ್ಯಾಪಾರ | ೨೮ | ೩೫,೦೦೦ | ೯೦೦ | ೪೨,೦೦೦ | ೬,೧೦೦ | -- | ೨೧೭.೮೫ |
| | ಒಟ್ಟು | ೫೨ | ೬೩,೦೦೦ | ೫,೯೦೦ | ೮೧,೦೦೦ | ೧೨,೧೦೦ | | ೨೩೨.೬೯ |

ಸಂಗ್ರಹಣೆ: ಕ್ಷೇತ್ರಕಾರ್ಯ ಆಧರಿತ ಮಾಹಿತಿ

೧. **ಅರಣ್ಯ ಉತ್ಪನ್ನಗಳ ಮಾರಾಟ :** ಜೇನುತುಪ್ಪ, ಕವಳೆ ಹಣ್ಣು, ಬಿಕ್ಕೆಹಣ್ಣು, ನೆಲ್ಲಿಕಾಯಿ, ನೆಲಗಡಲೆ ಇತ್ಯಾದಿ.

೨. **ಅಗತ್ಯ ವಸ್ತುಗಳ ಮಾರಾಟ :** ಲಂಬಾಣಿ ಜನಾಂಗದ ಬಟ್ಟೆ, ಲಂಬಾಣಿ ಜನಾಂಗದ ಆಲಂಕಾರಿಕ ವಸ್ತುಗಳು ಇತ್ಯಾದಿ.

೩. **ತರಕಾರಿ ವ್ಯಾಪಾರ :** ತರಕಾರಿ ದಿನಸು / ಪದಾರ್ಥ.

ವಿಶ್ಲೇಷಣೆ : ಬಳ್ಳಾರಿ ಜಿಲ್ಲೆಯ ಕೆಲವು ಆಯ್ದ ಸಂತೆಗಳಲ್ಲಿ ಲಂಬಾಣಿ ಬುಡಕಟ್ಟಿನ ಆಯ್ದ ಒಟ್ಟು ೫೨ ಜನರಲ್ಲಿ ಹೆಚ್ಚಾಗಿ ತರಕಾರಿ ವ್ಯಾಪಾರ ವೃತ್ತಿಯನ್ನು ಮೈಗೂಡಿಸಿಕೊಂಡಿರುವ ೨೮ ಜನ ಸದಸ್ಯರು ಕಂಡುಬರುತ್ತಾರೆ. ಅವರು ೩೫,೦೦೦ ರೂ. ಬಂಡವಾಳವನ್ನು ತರಕಾರಿ ವ್ಯಾಪಾರಕ್ಕಾಗಿ ವಿನಿಯೋಗಿಸಿ ೬,೧೦೦ ರೂ. ನಿವ್ವಳ ಲಾಭವನ್ನು ಪಡೆದು ತಲಾ ೨೧೭.೮೫ ರೂ.ಗಳನ್ನು ಸಂತೆಯೊಂದಕ್ಕೆ ಪಡೆಯುವವರಾಗಿದ್ದಾರೆ. ಆದರೆ ಇದೇ ಬುಡಕಟ್ಟಿನ ಕೆಲವು ಸದಸ್ಯರು ಅರಣ್ಯ ಉತ್ಪನ್ನಗಳನ್ನು ಮಾರಾಟ ಮಾಡುವ ವೃತ್ತಿಯನ್ನು ಕಂಡುಕೊಂಡಿದ್ದು ಯಾವುದೇ ಬಂಡವಾಳ ವಿನಿಯೋಗಿಸದೇ ೧,೦೦೦ ರೂ. ನಿವ್ವಳ ಲಾಭವನ್ನು ಪಡೆದು ತಲಾ ೮೩.೩೩ ರೂ. ಕಡಿಮೆ ತಲಾ ಆದಾಯ ಹೊಂದುವವರಾಗಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಆಯ್ದ ೫೨ ಜನ ಈ ಬುಡಕಟ್ಟಿನ ಸದಸ್ಯರು ಒಟ್ಟಾರೆಯಾಗಿ ೬೩,೦೦೦ ರೂ. ಬಂಡವಾಳವನ್ನು ತೊಡಗಿಸಿ ೧೨,೧೦೦ ರೂ. ಲಾಭಾಂಶ ಪಡೆದು ಸಂತೆಯೊಂದಕ್ಕೆ ತಲಾ ೨೩೨.೬೯ ರೂ. ಆದಾಯ ಪಡೆದು ಆರ್ಥಿಕವಾಗಿ ಸುಸ್ಥಿತಿಯಲ್ಲಿದ್ದಾರೆಂದು ಭಾವಿಸಬಹುದಾದರೂ ಅರಣ್ಯ ಉತ್ಪನ್ನ ಮಾರಾಟ ಮಾಡುವವರು ಕಡಿಮೆ ಆದಾಯ ಹೊಂದುತ್ತಿರುವ ಸಂಗತಿಯನ್ನು ಮರೆಮಾಚುವಂತಿಲ್ಲ.

ಒಟ್ಟಿನಲ್ಲಿ ಸಂತೆಯು ಎಲ್ಲಾ ಸಮುದಾಯದಂತೆ ಲಂಬಾಣಿ ಸಮುದಾಯಕ್ಕೂ ಬದುಕನ್ನು ಕಂಡುಕೊಳ್ಳಲು ಸಹಕಾರಿಯಾಗಿದೆ.

## ೪:೨:೬ ಕೊರಚ, ಕೊರವ ಅಥವಾ ಕೊರಮ ಸಮುದಾಯ

**೪:೨:೬:೧ ಪರಿಚಯ :** ಕರ್ನಾಟಕದಲ್ಲಿ ಕೊರಮರನ್ನು, ಕೊರಮಶೆಟ್ಟಿ, ಕೊಂಚಿಕೊರಮರು, ಭಜಂತ್ರಿ, ಕೊರಚ, ಕೊರಮ ಎಂಬ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. "ಇವರ ಮೂಲ ನೆಲೆ ತಮಿಳುನಾಡು. ಇವರು ತಮ್ಮದೇ ಆದ ಭಾಷೆಯನ್ನು ಹೊಂದಿದ್ದಾರೆ. ಇದಕ್ಕೆ ಕುಳುವ ಭಾಷೆ ಎಂದು ಕರೆಯುತ್ತಾರೆ. ಕೊರವರ ಸಂಸ್ಕೃತಿಯ ಬಗ್ಗೆ ಅಧ್ಯಯನ ಮಾಡಿದ ಮಾಹಿತಿಯತನ್ನು ಗಮನಿಸಿದರೆ ಕರ್ನಾಟಕದಲ್ಲಿ ಒಟ್ಟಾರೆ ಇವರ ಜನಸಂಖ್ಯೆ ೧,೦೨,೦೬೦ ಇದೆ."[೧೧೫] ಬೆಂಗಳೂರು, ಧಾರವಾಡ, ಬೆಳಗಾಂ, ಬಳ್ಳಾರಿ, ಕೊಪ್ಪಳ, ಕೋಲಾರ ಮುಂತಾದ ಕೆಲವು ಜಿಲ್ಲೆಗಳಲ್ಲಿ ಅತಿ ಹೆಚ್ಚು ಜನಸಂಖ್ಯೆಯಲ್ಲಿ ಕಂಡುಬಂದರೆ, ದಕ್ಷಿಣ ಕನ್ನಡ, ಬೀದರ್ ಹಾಗೂ ಕೊಡಗು ಜಿಲ್ಲೆಗಳಲ್ಲಿ ಅತಿ ಕಡಿಮೆ ಜನಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಇವರ ಮೂಲವೃತ್ತಿ ಪಶುಪಾಲನೆ ಮತ್ತು ಬುಟ್ಟಿ ಹೆಣೆಯುವುದು.[೧೧೬] ಆದರೆ ಇಂದು ತಮ್ಮ ಮೂಲವೃತ್ತಿಯನ್ನು ತೊರೆದು ಪರ್ಯಾಯ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಕೂಡ್ಲಿಗಿ, ಸಂಡೂರು, ಹೂವಿನ ಹಡಗಲಿ, ಹಗರಿಬೊಮ್ಮನಹಳ್ಳಿ ತಾಲೂಕುಗಳಲ್ಲಿ ಹೆಚ್ಚಾಗಿ ಕಂಡುಬರುವ ಇವರು ಸಂತೆಗಳಲ್ಲಿ ಅನೇಕ ರೀತಿಯಲ್ಲಿ ಭಾಗವಹಿಸುತ್ತಿದ್ದಾರೆ. ಅಲ್ಲದೇ ಪಕ್ಕದ ಜಿಲ್ಲೆಯಾದ ಕೊಪ್ಪಳದಿಂದಲೂ ವಲಸೆ ಬಂದು ತಮ್ಮ ವ್ಯಾಪಾರವನ್ನು ಸಂತೆಯಲ್ಲಿ ಮಾಡುತ್ತಿದ್ದಾರೆ. ಇವರು ಮಾಡುವಂತ ವ್ಯಾಪಾರಗಳೆಂದರೆ

ಪೊರಕೆ ಮಾರಾಟ, ಈಚಲು ಗರಿಯ ಚಾಪೆ ಮಾರಾಟ, ಬುಟ್ಟಿ ಮಾರಾಟ, ಕಣಿ ಹೇಳುವುದು, ಹಂದಿಗಳ ಮಾರಾಟ. ಕೋತಿಯಾಟ ಆಡಿಸುವುದು, ಹಾವಾಡಿಸುವುದು ಮುಂತಾದವು ಎಲ್ಲ ವೃತ್ತಿಗಳನ್ನು ಕೆಲವು ಕೊರಚರು ಸಂತೆಗಳಲ್ಲಿ ಮಾಡುತ್ತಾ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ.

**೪:೨:೬:೨ ಪೊರಕೆ ಮಾರುವುದು :** ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುವ ಕೊರಚರಲ್ಲಿ ಬಹಳಷ್ಟು ಜನ ಪೊರಕೆಯನ್ನು ಸಿದ್ಧಪಡಿಸಿ ಸಂತೆಯಲ್ಲಿ ತಂದು ಮಾರುತ್ತಿದ್ದಾರೆ. ಪೊರಕೆಗಳನ್ನು ಈಚಲು ಗರಿಗಳಿಂದಲೇ ತಯಾರಿಸುತ್ತಾರೆ. ಪೊರಕೆ ತಯಾರಿಸುವ ಕಚ್ಚಾವಸ್ತುವಾದ ಈಚಲು ಗರಿಯನ್ನು ಪಕ್ಕದ ಜಿಲ್ಲೆಗಳಾದ ಕೊಪ್ಪಳ, ರಾಯಚೂರು ಮುಂತಾದ ಸ್ಥಳಗಳಿಂದ ಹಾಗೂ ಸುತ್ತಮುತ್ತಲಿನ ಕಾಡುಗಳಿಂದ ತರುತ್ತಾರೆ. ಈ ಕಚ್ಚಾವಸ್ತುಗಳನ್ನು ತಂದು ಪೊರಕೆ ತಯಾರಿಸುವುದು ಗಂಡಸರಾದರೆ ಸಂತೆಯಲ್ಲಿ ಕುಳಿತು ವ್ಯಾಪಾರ ಮಾಡುವುದು ಮಾತ್ರ ಮಹಿಳೆಯರಾಗಿದ್ದಾರೆ. ಕಾರಣ ಪೊರಕೆಯನ್ನು ಸಂತೆಯಲ್ಲಿ ಕೊಳ್ಳಲು ಬರುವ ಗ್ರಾಹಕರು ಹೆಂಗಸರು. ಇದರಿಂದ ವ್ಯಾಪಾರವು ಮಹಿಳೆಯರ ಮಧ್ಯೆಯೇ ಇರುತ್ತದೆ. ವಿವಿಧ ಅಳತೆಯ ಪೊರಕೆಗಳನ್ನು ಸಿದ್ಧಪಡಿಸುವರು. ಹಾಗೆಯೇ ಅಳತೆಗೆ ತಕ್ಕಂತೆ ಬೆಲೆಗಳು ನಿಗದಿಯಾಗುತ್ತದೆ. ಉದಾಹರಣೆಗೆ ದೊಡ್ಡ ಪೊರಕೆಯೂ ೦೫ರಿಂದ ೧೦ ರೂಪಾಯಿಗಳವರೆಗೆ ಬೆಲೆಯದಾದರೆ ಚಿಕ್ಕ ಪೊರಕೆಗೆ ೩ರಿಂದ ೫ ರೂಪಾಯಿಗಳಿರುತ್ತದೆ. ಹಾಗೂ ಅತಿ ಚಿಕ್ಕ ಪೊರಕೆಯನ್ನು ೧ರಿಂದ ೩ ರೂಪಾಯಿಗೆ ಮಾರಾಟ ಮಾಡುತ್ತಾರೆ. ಬದಲಾಗುತ್ತಿರುವ ಸಮಾಜಕ್ಕೆ ಅನುಗುಣವಾಗಿ ಕಾರ್ಖಾನೆಗಳಲ್ಲಿ ತಯಾರಿಸಿದ ಹಿಡಿಕೆಯ ಪೊರಕೆಗಳನ್ನು ಸಹ ಸಗಟು ಬೆಲೆಗಳಲ್ಲಿ ತಂದು ಸಂತೆಯಲ್ಲಿ ಮಾರುತ್ತಾರೆ. ಇವರು ಕೇವಲ ಒಂದೇ ಸಂತೆಯಲ್ಲಿ ಮಾತ್ರ ವ್ಯಾಪಾರ ಮಾಡದೇ ಸುತ್ತಮುತ್ತಲಿನ ಊರುಗಳಲ್ಲಿ ನಡೆಯುವ ಐದಾರು ಸಂತೆಗಳಲ್ಲಿ ಪೊರಕೆಗಳನ್ನು ಮಾರಾಟ ಮಾಡಲು ಹೋಗುತ್ತಾರೆ.

**೪:೨:೬:೩ ಕಣಿ ಹೇಳುವ ವೃತ್ತಿ :** ಕಣಿ ಹೇಳುವ ವೃತ್ತಿಯನ್ನು ಕೊರವರ ಮಹಿಳೆಯು ಸಂತೆಯಲ್ಲಿ ಮತ್ತು ಮನೆ ಮನೆಗೆ ಹೋಗಿ ಮಾಡುತ್ತಾರೆ. ಈ ವೃತ್ತಿಯು ಕೊರವರಲ್ಲಿ ಮೊದಲಿನಿಂದಲೂ ಬಂದಿದೆ. ಕೊರವರ ಮಹಿಳೆಯು ಮೊಣಕಾಲಿನವರೆಗೆ ಸೀರೆಯನ್ನು ತೊಟ್ಟು, ಕೈಯಲ್ಲಿ ಒಂದು ದೇವರ ಬೆತ್ತವನ್ನು ಹಿಡಿದು ಹೆಗಲಿಗೆ ಜೋಳಿಗೆಯನ್ನು ತೂಗಿಯಾಕಿಕೊಂಡು "ಕಣಿ ಹೇಳ್ತಿನವ್ವ ಕಣಿ ಹೇಳ್‌ತೀನಿ" ಎಂದು ಸಾರುತ್ತಾ ಹೋಗುತ್ತಾರೆ. ಕಣಿ ಹೇಳುವುದೆಂದರೆ, ಭೂತ, ವರ್ತಮಾನ ಮತ್ತು ಭವಿಷ್ಯತ್ತಿನಲ್ಲಿ ನಡೆಯುವ ಘಟನೆಗಳನ್ನು ಹೇಳುವುದೇ ಆಗಿದೆ. ಇವರು ಹೇಳುವ ಕಣಿಯನ್ನು ಬಹಳಷ್ಟು ಜನರು ನಂಬುತ್ತಾರೆ. ಆದ್ದರಿಂದ ಇವರಿಗೆ ಸಾಕಷ್ಟು ಸಂಪಾದನೆಯಾಗುತ್ತದೆ. ಕಣೀ ಹೇಳಿದ ಮೇಲೆ ಇದಕ್ಕೆ ಪ್ರತಿಫಲವಾಗಿ ಹಣವನ್ನು ಅಥವಾ ಅಕ್ಕಿ, ಜೋಳ ಮುಂತಾದ ಧಾನ್ಯಗಳನ್ನು ಪಡೆಯುತ್ತಾರೆ. ಆದರೆ ಸಂತೆಯಲ್ಲಿ ಮಾತ್ರ ಹೆಚ್ಚಾಗಿ ಹಣವನ್ನೇ ಪಡೆಯುತ್ತಾರೆ. ಮನೆ ಮನೆಗೆ ಹೋದ ಸಂದರ್ಭದಲ್ಲಿ ಧಾನ್ಯವನ್ನು ಪಡೆಯುವುದುಂಟು. ಕಣಿ ಹೇಳುವುದಕ್ಕೆ ಪ್ರತಿಫಲವಾಗಿ ವ್ಯಕ್ತಿಗಳಿಗೆ ವೈಯಕ್ತಿಕ ಸಮಸ್ಯೆ ಮತ್ತು ಅವರು ತೆಗೆದುಕೊಳ್ಳುವ

ಸಮಯವನ್ನು ಅವಲಂಬಿಸಿ ಹತ್ತು, ಇಪ್ಪತ್ತು, ಐವತ್ತು ರೂಪಾಯಿಗಳನ್ನು ಪಡೆಯುತ್ತಾರೆ. ಅಂದರೆ ಬಡವರಿಗೆ ಕಡಿಮೆ ಹಾಗೂ ಶ್ರೀಮಂತರಿಂದ ಅಧಿಕ ಹಣವನ್ನು ಪಡೆಯುತ್ತಾರೆ. ಒಟ್ಟಿನಲ್ಲಿ ಸಂತೆಯು ಜೀವನಾಧಾರದ ಒಂದು ಮೂಲವಾಗಿದೆ.

೪:೨:೬:೪ **ಈಚಲುಗರಿ ಚಾಪೆ, ಬುಟ್ಟಿ ಮಾರಾಟ :** ಕೊರಚರು ಚಾಪೆಗೆ ಪೂರಕವಾದ ಕಚ್ಚಾ ಸಾಮಗ್ರಿಯಾದ ಈಚಲು ಗರಿಯನ್ನು ಕೊಪ್ಪಳ, ರಾಯಚೂರುಗಳಿಂದ ತರುತ್ತಾರೆ. ಅಲ್ಲದೇ ಪಕ್ಕದ ಕಾಡು ಮೇಡುಗಳಿಂದ ಸಂಗ್ರಹಿಸಿಕೊಳ್ಳುವುದುಂಟು. ಈ ರೀತಿಯಲ್ಲಿ ತಂದಂತಹ ಈಚಲುಗರಿಯಿಂದ ಕೇವಲ ಪೊರಕೆ ಮಾತ್ರವಲ್ಲದೇ ಚಾಪೆ ಮತ್ತು ಬುಟ್ಟಿಗಳನ್ನು ಸಹ ತಯಾರಿಸುತ್ತಾರೆ. ಕುಟುಂಬದ ಸದಸ್ಯರು ಸಾಮಾಜಿಕವಾಗಿ ಚಾಪೆ ಮತ್ತು ಬುಟ್ಟಿಗಳ ತಯಾರಿಯಲ್ಲಿ ತೊಡಗುವರು. ಸಂತೆಯಲ್ಲಿ ಸಿದ್ಧಪಡಿಸಿದವುಗಳನ್ನು ಒಯ್ದು ಪ್ರತ್ಯೇಕವಾದ ಸ್ಥಳದಲ್ಲಿ ಇಟ್ಟು, ವ್ಯಾಪಾರ ಮಾಡುತ್ತಾರೆ. ಕೊರಚರು ಚಾಪೆ, ಬುಟ್ಟಿ, ಪೊರಕೆ ಮುಂತಾದ ವಸ್ತುಗಳನ್ನು ಮಾರಲು ತಮ್ಮ ಜಾತಿಯಲ್ಲಿಯೆ ಪ್ರಾದೇಶಿಕ ನಿರ್ದಿಷ್ಟತೆಯನ್ನು ಹೊಂದಿರುತ್ತಾರೆ. ಆದ್ದರಿಂದ ಪ್ರತಿ ಸಂತೆಯನ್ನು ಒಂದೊಂದು ಕುಟುಂಬಗಳು ಹಂಚಿಕೊಂಡಿರುತ್ತಾರೆ. ಇದರ ಪ್ರಕಾರ ಒಂದೇ ಕುಟುಂಬದ ಸದಸ್ಯರು ಒಂದು ಸಂತೆಯಲ್ಲಿ ನಾಲ್ಕಾರು ಅಂಗಡಿಗಳನ್ನು ತೆರೆದಿರುತ್ತಾರೆ. ಇದರಿಂದ ಅನೇಕ ಲಾಭಗಳಾಗುತ್ತವೆ. ಉದಾಹರಣೆಗೆ ಒಂದೇ ಸಂತೆಯಲ್ಲಿ ನಾಲ್ಕಾರು ಅಂಗಡಿಗಳನ್ನು ಹಾಕುವುದರಿಂದ ಗ್ರಾಹಕರು ಇವರತ್ತ ಆಕರ್ಷಿತರಾಗುತ್ತಾರೆ ಹಾಗೂ ಬೆಲೆಯಲ್ಲಿ ಏಕಸಾಮ್ಯತೆಯನ್ನು ಸಹ ಪಡೆಯುತ್ತಾರೆ. ಚಾಪೆ ಮತ್ತು ಬುಟ್ಟಿಗಳನ್ನು ಸಂತೆಯಲ್ಲಿ ಇವರು ವಿವಿಧ ಬೆಲೆಗಳಲ್ಲಿ ಮಾರುತ್ತಾರೆ. ಒಂದು ಚಾಪೆಗೆ ೨೦ರಿಂದ ೩೦ ರೂಪಾಯಿಗಳವರೆಗೆ ಬೆಲೆಯನ್ನು ನಿಗದಿ ಪಡಿಸಿದರೆ ಬುಟ್ಟಿಗಳಲ್ಲಿ ಐದು ರೂಪಾಯಿಯಿಂದ ೫೦ ರೂಪಾಯಿಗಳವರೆಗೆ ಬೆಲೆಯನ್ನು ನಿಗದಿಪಡಿಸುವರು. ಇವರು ತಮ್ಮ ವ್ಯಾಪಾರವನ್ನು ಬೇರೆ ಕಡೆಗಳಲ್ಲಿ ಮಾಡಿ, ಲಾಭ ಪಡೆಯುವುದಕ್ಕಿಂತ ಸಂತೆಯಲ್ಲಿಯೇ ಹೆಚ್ಚಿನ ಲಾಭವಿದೆ ಎಂಬುದನ್ನು ಕಂಡುಕೊಂಡಿದ್ದಾರೆ.

೪:೨:೬:೫ **ಹಂದಿಗಳ ಮಾರಾಟ :** ಕೊರಚರು ಹಂದಿ ಸಾಕಾಣಿಕೆಯನ್ನು ಕೈಗೊಂಡಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಇರುವ ಕೆಲವು ಕೊರಚ ಕುಟುಂಬವು ತಮ್ಮ ಮನೆಯ ಹಿಂದುಗಡೆ ಕೊಟ್ಟಿಗೆಯನ್ನು ಮಾಡಿ ಹಂದಿ ಸಾಕಾಣಿಕೆಯನ್ನು ಮಾಡುತ್ತಿದ್ದಾರೆ. ಸಂತೆಯಲ್ಲಿ ಚಾಪೆ, ಪೊರಕೆ ಮುಂತಾದ ವಸ್ತುಗಳನ್ನು ಮಾರಲು ಬಂದಾಗ ಗ್ರಾಹಕರೊಡನೆ ಹಂದಿಗಳ ಮಾರಾಟವನ್ನು ಮಾಡುತ್ತಾರೆ. ಕೊರಚರು ಸಂತೆಯ ಕಾಯಂ ವ್ಯಾಪಾರಿಗಳಾದ್ದರಿಂದ ಸಂತೆಗೆ ಬರುವಂತ ಗ್ರಾಮೀಣ ಪ್ರದೇಶದ ಜನರು ಹಂದಿಗಳನ್ನು ಖರೀದಿಸುತ್ತಾರೆ. ನಂತರ ಕೊರಚರ ಮನೆಗೆ ಹೋಗಿ ಹಂದಿಗಳನ್ನು ಹೊಡೆದುಕೊಂಡು ಹೋಗುತ್ತಾರೆ. ಅಂದರೆ ಹಂದಿಗಳ ವ್ಯಾಪಾರದ ಮಾತುಕತೆಯೆಲ್ಲಾ ಸಂತೆಯಲ್ಲಿ ನಡೆದರೆ ಹಂದಿಗಳನ್ನು ತೆಗೆದುಕೊಳ್ಳುವುದು ಮಾತ್ರ ಕೊರಚರ ಮನೆಗಳಲ್ಲಿ. ಆಧುನಿಕ ಸಮಾಜದಲ್ಲಿ ಪ್ರಾಣಿ ಮಾಂಸಕ್ಕೆ ಹೆಚ್ಚಿನ ಬೇಡಿಕೆ ಇರುವುದರಿಂದ ಇವರ ವ್ಯಾಪಾರ ಸುಗಮವಾಗಿ ನಡೆಯುತ್ತದೆ.

೪:೨:೬:೬ ಆಯ್ದು ಸಂತೆಗಳಲ್ಲಿ ಆಯ್ದುಕೊಂಡ ಕೊರವ ಸಮುದಾಯದ ಸದಸ್ಯರ ವ್ಯಾಪಾರ ವಹಿವಾಟಿನಿಂದ ಬರುವ ಆದಾಯದ ಸರಾಸರಿ ಪ್ರಮಾಣ:

**ಕೋಷ್ಟಕ - ೪.೬**

**ಕೊರವ ಸಮುದಾಯದ ಆಯ್ದು ಸದಸ್ಯರ ವ್ಯಾಪಾರ ವಹಿವಾಟಿನ ಸರಾಸರಿ ಪ್ರಮಾಣ**

| ಕ್ರ. ಸಂ. | ಮಾರುವ ಸರಕು | ಮಾರಾಟಗಾರರ ಸಂಖ್ಯೆ | ಬಂಡವಾಳ ಪ್ರಮಾಣ | ವಹಿವಾಟು ವೆಚ್ಚ | ಮಾರಾಟ ಬೆಲೆ | ಲಾಭ | ನಷ್ಟ | ತಲಾವಾರು ಸರಾಸರಿ ಲಾಭ |
|---|---|---|---|---|---|---|---|---|
| ೧. | ಪೊರಕೆ ವ್ಯಾಪಾರ | ೧೦ | ೩,೦೦೦ | ೫೦೦ | ೪,೫೦೦ | ೧,೦೦೦ | -- | ೧೦೦ |
| ೨. | ಕಣಿ ಹೇಳುವಿಕೆ | ೩ | -- | -- | ೧೧೦ | ೧೧೦ | -- | ೩೬.೬೬ |
| ೩. | ಚಾಪೆ, ಬುಟ್ಟಿ ಮಾರಾಟ | ೦೭ | ೨,೮೦೦ | ೮೦೦ | ೪,೨೦೦ | ೬೦೦ | -- | ೮೫.೭ |
| ೪. | ಹಂದಿಗಳ ಮಾರಾಟ | ೨ | -- | ೫೦ | ೪೦೦ | ೩೫೦ | -- | ೧೭೫ |
| | **ಒಟ್ಟು** | **೨೨** | **೫,೮೦೦** | **೧,೩೫೦** | **೯,೨೧೦** | **೨,೦೬೦** | -- | **೯೩.೬೩** |

ಸಂಗ್ರಹಣೆ: ಕ್ಷೇತ್ರಕಾರ್ಯ ಆಧರಿತ ಮಾಹಿತಿ

**ವಿಶ್ಲೇಷಣೆ :** ಬಳ್ಳಾರಿ ಜಿಲ್ಲೆಯ ಕೆಲವು ಆಯ್ದು ಸಂತೆಗಳಲ್ಲಿ ಕೊರವ ಸಮುದಾಯದ ಆಯ್ದು ವಿವಿಧ ಸದಸ್ಯರು ತಮ್ಮ ಜೀವನೋಪಾಯಕ್ಕಾಗಿ ಹಲವಾರು ವಿವಿಧ ವೃತ್ತಿಗಳನ್ನು ಅವಲಂಬಿಸಿದ್ದು, ಅವರಲ್ಲಿ ಹೆಚ್ಚು ಜನರು ಪೊರಕೆ ವ್ಯಾಪಾರವನ್ನು ಮೈಗೂಡಿಸಿಕೊಂಡವರಾಗಿದ್ದಾರೆ. ಆಯ್ದ ಒಟ್ಟು ೨೨ ಜನರ ಪೈಕಿ ೧೦ ಜನರು ಪೊರಕೆ ಮಾರುವವರಾಗಿ ಕಂಡುಬಂದರೂ ಸಹ ಅವರು ೩,೦೦೦ ರೂ. ಬಂಡವಾಳ ವಿನಿಯೋಗಕ್ಕೆ ೧೦೦ ರೂ. ತಲಾ ಆದಾಯ ಪಡೆದರೆ, ಇದೇ ಬುಡಕಟ್ಟಿನ ಹಂದಿಗಳ ವ್ಯಾಪಾರ ಮಾಡುವ ಕೆಲವೇ ಕೆಲವು ಜನ ಸದಸ್ಯರು ೧೭೫ ರೂ. ತಲಾ ಆದಾಯ ಪಡೆದು ಸುಸ್ಥಿತಿಯಲ್ಲಿರುವುದು ಕಂಡುಬರುತ್ತದೆ. ಆದರೆ ಕಣಿ ಹೇಳುವ ಕಾಯಕವನ್ನು ಹೊಂದಿರುವ ಆಯ್ದ ಕೇವಲ ೩ ಜನ ಸದಸ್ಯರು ಯಾವುದೇ ಬಂಡವಾಳ ತೊಡಗಿಸದೇ ಕೇವಲ ೩೩.೬೬ ರೂ. ತಲಾ ಆದಾಯ ಹೊಂದಿ ಅತ್ಯಂತ ಕಡಿಮೆ ಆರ್ಥಿಕ ಸ್ಥಿತಿ ಹೊಂದಿರುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಕೊರವ ಬುಡಕಟ್ಟಿನ ಆಯ್ದ ಒಟ್ಟು ೨೨ ಜನರು ೫,೮೦೦ ರೂ. ಕಡಿಮೆ ಬಂಡವಾಳ ತೊಡಗಿಸಿ, ೨,೦೬೦ ರೂ. ಕಡಿಮೆ ನಿವ್ವಳ ಲಾಭ ಪಡೆದು ಕೇವಲ ೯೩.೬೩ ರೂ. ತಲಾ ಆದಾಯ ಪಡೆದು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿ ಇದ್ದುದರ ಬಗ್ಗೆ ಕಂಡುಕೊಳ್ಳಬಹುದಾಗಿದೆ.

ಒಟ್ಟಿನಲ್ಲಿ ಕೊರಚರು ಅನೇಕ ವೃತ್ತಿಗಳನ್ನು ಸಂತೆಯಲ್ಲಿಯೇ ನಡೆಸುತ್ತಾರೆ. ಇದರಿಂದ ತಮ್ಮ ಜೀವನವನ್ನು ಸಂತೆಯಲ್ಲಿಯೇ ಕಂಡುಕೊಂಡು ಜೀವನ ಸಾಗಿಸುತ್ತಿದ್ದಾರೆ.

## ೪:೨:೭ ಗೋಸಂಗಿ ಸಮುದಾಯ

**೪:೨:೭:೧ ಪರಿಚಯ:** ಗೋಸಂಗಿಗಳು ಅಲೆಮಾರಿ ಸಮುದಾಯವಾಗಿದ್ದು, ಕರ್ನಾಟಕದಾದ್ಯಂತ ಇವರು ಕಂಡುಬರುತ್ತಾರೆ. ೧೯೯೧ರ ಜನಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಇವರ ಜನಸಂಖ್ಯೆ ಕೇವಲ ೧೨೪. ಆದರೆ ಇವರಲ್ಲಿ ಅನೇಕ ಪಂಗಡಗಳು ಗುರುತಿಸಿಕೊಂಡಿರುವುದರಿಂದ ಈಗ ಇವರ ಜನಸಂಖ್ಯೆ ಅತ್ಯಂತ ಗಣನೀಯವಾಗಿದೆ. ಇವರ ಮೂಲ ಮಹಾರಾಷ್ಟ್ರವಾಗಿದೆ. ಇವರು ಮರಾಠಿ ಭಾಷೆಯನ್ನು ಆಡಿದರೆ ವ್ಯಾವಹಾರಿಕವಾಗಿ ಕನ್ನಡ ಮಾತನಾಡುತ್ತಾರೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಇಂದು ಬಳ್ಳಾರಿ ಜಿಲ್ಲೆಯ ಎಲ್ಲ ತಾಲೂಕುಗಳಲ್ಲಿಯು ಕಂಡುಬರುವ ಗೋಸಂಗಿಗಳು ತಮ್ಮ ಮೂಲ ವೃತ್ತಿಯನ್ನು ತೊರೆದಿದ್ದಾರೆ. ಗೋಸಂಗಿಗಳು ತಮ್ಮ ಪರ್ಯಾಯ ವೃತ್ತಿಯನ್ನು ಸಂತೆಯಲ್ಲಿಯೇ ಹೆಚ್ಚಾಗಿ ಮಾಡುತ್ತಾರೆ. ಗೋಸಂಗಿಗಳ ಪರ್ಯಾಯ ವೃತ್ತಿಗಳೆಂದರೆ, ಪ್ಲಾಸ್ಟಿಕ್ ವಸ್ತುಗಳ ವ್ಯಾಪಾರ ಮತ್ತು ರಿಪೇರಿ ಮಾಡುವುದು, ಸೋಫಾ ರಿಪೇರಿ, ಸುಗಂಧ ದ್ರವ್ಯಗಳ ಮಾರಾಟ, ಮೀನು ವ್ಯಾಪಾರ, ಔಷಧ ಗಿಡಮೂಲಿಕೆಗಳ ವ್ಯಾಪಾರವನ್ನು ಸಂತೆಯಲ್ಲಿ ಮಾಡುತ್ತಿದ್ದಾರೆ. ಈ ಎಲ್ಲ ವ್ಯಾಪಾರ ವಹಿವಾಟಿನಿಂದ ಸಂತೆಯಲ್ಲಿ ತಮ್ಮ ಬದುಕನ್ನು ಕಂಡುಕೊಂಡಿದ್ದಾರೆ. ಪ್ರಸ್ತುತ ಈ ವ್ಯಾಪಾರಗಳಿಂದ ಸಂತೆಯಲ್ಲಿ ಇವರಿಗೆ ಹೆಚ್ಚಿನ ಲಾಭವಿದೆ ಎಂದು ಕಂಡುಬರುತ್ತದೆ.

**೪:೨:೭:೨ ಗೋಸಂಗಿಗಳ ಪ್ಲಾಸಿಕ್ ವಸ್ತುಗಳ ವ್ಯಾಪಾರ ಮತ್ತು ರಿಪೇರಿ ಮಾಡುವ ಕಾಯಕ:** ಗೋಸಂಗಿಗಳು ಕಾರ್ಖಾನೆಯಲ್ಲಿ ತಯಾರಿಸಲಾದ ಪ್ಲಾಸ್ಟಿಕ್ ವಸ್ತುಗಳನ್ನು ಸಗಟು ಬೆಲೆಗಳಲ್ಲಿ ಕೊಂಡು ತಂದು ಸಂತೆಯಲ್ಲಿ ಮಾರಾಟ ಮಾಡಿ ಬದುಕು ನಡೆಸುತ್ತಿದ್ದಾರೆ. ಇವರು ಪ್ಲಾಸ್ಟಿಕ್ ವಸ್ತುಗಳನ್ನು ಕೇವಲ ಒಂದು ಸಂತೆಯಲ್ಲಿ ಮಾತ್ರ ಮಾರಾಟ ಮಾಡದೆ ದೂರದ ಅನೇಕ ಸಂತೆಗಳಿಗೆ ಹೋಗಿ ವ್ಯಾಪಾರವನ್ನು ಮಾಡುತ್ತಾರೆ. ಗೋಸಂಗಿಗಳು ಸಂತೆಯಲ್ಲಿ ಪ್ಲಾಸ್ಟಿಕ್ ವಸ್ತುಗಳನ್ನು ವ್ಯಾಪಾರ ಮಾಡುವಾಗ, ತಾವು ಕೊಂಡ ಸಗಟು ಬೆಲೆಗೆ ಸಾರಿಗೆ ವೆಚ್ಚ, ಶ್ರಮದ ವೆಚ್ಚ ಇನ್ನು ಮುಂತಾದ ವೆಚ್ಚಗಳನ್ನು ಸೇರಿಸಿ ಹೆಚ್ಚಿನ ಬೆಲೆಗೆ ವ್ಯಾಪಾರ ಮಾಡುತ್ತಾರೆ. ಆಧುನಿಕ ಸಮಾಜದಲ್ಲಿ ಪ್ಲಾಸ್ಟಿಕ್ ಸಾಮಗ್ರಿಗಳ ಬಳಕೆ ಅನಿವಾರ್ಯವಾಗಿದ್ದರಿಂದ ಇವುಗಳಿಗೆ ಹೆಚ್ಚಿನ ಬೇಡಿಕೆ ಇದೆ. ಆದ್ದರಿಂದ ಈ ವ್ಯಾಪಾರದಲ್ಲಿ ಅಧಿಕ ಲಾಭವನ್ನು ಗೋಸಂಗಿಗಳು ಪಡೆಯುತ್ತಿದ್ದಾರೆ. ಗೋಸಂಗಿಗಳು ಪ್ಲಾಸ್ಟಿಕ್ ವಸ್ತುಗಳ ರಿಪೇರಿಯನ್ನು ಸಹ ಮಾಡುತ್ತಾರೆ. ರಿಪೇರಿ ಕೆಲಸವನ್ನು ಸಂತೆಗಳಲ್ಲಿ ಮತ್ತು ಮನೆ ಮನೆಗೆ ಹೋಗಿ ಮಾಡುತ್ತಾರೆ. ಪ್ಲಾಸ್ಟಿಕ್ ವಸ್ತುಗಳನ್ನು ರಿಪೇರಿ ಮಾಡುವಾಗ, ಬೆಂಕಿಯಲ್ಲಿ ಕಬ್ಬಿಣವನ್ನು ಕಾಯಿಸಿ, ಒಡೆದ ಹಾಗೂ ಬೊಕ್ಕೆ ಬಿದ್ದ ಪ್ಲಾಸ್ಟಿಕ್ ವಸ್ತುಗಳಿಗೆ ಮತ್ತೊಂದು ಪ್ಲಾಸ್ಟಿಕ್ ತುಂಡನ್ನು ಅದರ ಮೇಲೆ ಇಟ್ಟು ಕಾಯಿಸುತ್ತಾರೆ. ಈ ರೀತಿಯ ಪ್ರಕ್ರಿಯೆಯಿಂದ ಒಡೆದ ವಸ್ತುಗಳು ಮೊದಲಿನ ಸ್ಥಿತಿಗೆ ಬರುತ್ತಾರೆ. ಪ್ಲಾಸ್ಟಿಕ್ ಬಕೆಟು, ಪ್ಲಾಸ್ಟಿಕ್ ತಂಬಿಗೆ, ಪ್ಲಾಸ್ಟಿಕ್ ಕೊಡ, ಪ್ಲಾಸ್ಟಿಕ್ ಟಬ್ಸ್ ಮುಂತಾದ ಪ್ಲಾಸ್ಟಿಕ್ ವಸ್ತುಗಳ ರಿಪೇರಿ ಮಾಡುತ್ತಾರೆ. ಈ ರೀತಿಯ ಒಂದು

ವಸ್ತುವಿನ ರಿಪೇರಿ ೧೦ರಿಂದ ೨೦ ರೂಪಾಯಿಗಳವರೆಗೆ ಇವರಿಗೆ ದೊರೆಯುತ್ತದೆ. ಇದರಿಂದ ಇವರು ಜೀವನ ಸಾಗಿಸಲು ಸಹಕಾರಿಯಾಗಿದೆ.

**೪:೨:೭:೩ ಗೋಸಂಗಿಗಳ ಮೀನು ಮಾರಾಟ :** ಸಂತೆಯಲ್ಲಿ ಗೋಸಂಗಿಗಳು ಮೀನು ಮಾರುವುದರ ಮೂಲಕ ತಮ್ಮ ಬದುಕನ್ನು ಕಂಡುಕೊಂಡಿದ್ದಾರೆ. ಇವರು ತಮ್ಮ ಸುತ್ತಮುತ್ತಲಿನ ಪ್ರದೇಶದ ಕೆರೆ ಮತ್ತು ನದಿಗಳಿಂದ ಮೀನುಗಳನ್ನು ಬೆಳಗ್ಗೆ ಹಿಡಿದು ತಂದು ಸಂತೆಯಲ್ಲಿ ಮಾರಾಟ ಮಾಡುತ್ತಾರೆ. ಇವರು ಸಂತೆಗಳಲ್ಲಿ ಮೀನುಗಳನ್ನು ಮಾರಲು ಪ್ರತ್ಯೇಕವಾದ ಸ್ಥಳದಲ್ಲಿ ಕುಳಿತಿರುತ್ತಾರೆ. ಪ್ರಸ್ತುತ ಕ್ಷೇತ್ರಕಾರ್ಯದಲ್ಲಿ ಕಂಡುಬಂದಂತೆ ಒಂದು ಕೆ.ಜಿ. ಮೀನಿಗೆ ೪೦ ರೂಪಾಯಿಗಳಂತೆ ಮಾರಾಟ ಮಾಡುತ್ತಿದ್ದರು. ಈ ಮೀನಿನ ವ್ಯಾಪಾರದಲ್ಲಿ ಬಂಡವಾಳವಿರುವುದಿಲ್ಲ. ಆದರೆ ಒಣ ಮೀನಿನ ವ್ಯಾಪಾರ ಮಾಡುವಾಗ ಮಾತ್ರ ಬಂಡವಾಳವಿರುತ್ತದೆ. ಈ ವ್ಯಾಪಾರವು ಈ ಸಮುದಾಯದ ಕೆಲವರಿಗೆ ಹೆಚ್ಚು ಲಾಭ ತರುವುದಲ್ಲದೆ ಹಣಕಾಸು ಸ್ಥಿತಿ ಸುಧಾರಿಸಲು ಸಹಾಯಕವಾಗಿದೆ.

**೪:೨:೭:೪ ಗೋಸಂಗಿಗಳ ಔಷಧಿ ಗಿಡಮೂಲಿಕೆಗಳ ಮಾರಾಟ :** ಗೋಸಂಗಿಗಳು ಔಷಧಿ ಗಿಡಮೂಲಿಕೆಗಳನ್ನು ಮತ್ತು ಇದರಿಂದ ತಯಾರಿಸಿದ ಔಷಧಗಳನ್ನು ಸಂತೆಯಲ್ಲಿ ಮಾರಾಟ ಮಾಡುತ್ತಾರೆ. ಆದರೆ ಇವುಗಳಿಗೆ ಆಧುನಿಕ ವ್ಯವಸ್ಥಿತ ಕ್ಲಿನಿಕ್‌ಗಳು ಮತ್ತು ಔಷಧಿ ಅಂಗಡಿಗಳು ಬಹುದೊಡ್ಡ ಪೈಪೋಟಿಯನ್ನು ಒಡ್ಡಿವೆ. ಬಹಳಷ್ಟು ಜನರಿಗೆ ಸಂತೆಯಲ್ಲಿ ಮತ್ತು ಬೀದಿಬದಿಯಲ್ಲಿ ಮಾರುವ ಆರ್ಯುವೇದಿಕ್ ಗಿಡಮೂಲಿಕೆಗಳಲ್ಲಿ ನಂಬಿಕೆ ಇಲ್ಲ. ಆದ್ದರಿಂದ ವ್ಯಾಪಾರದಲ್ಲಿ ಹೆಚ್ಚಿನ ಲಾಭವಿಲ್ಲವಂತಾಗಿದೆ. ಆದರೂ ಸಹಿತ ಗ್ರಾಮೀಣ ಪ್ರದೇಶದ ಜನರು ಆಯುರ್ವೇದದಲ್ಲಿ ನಂಬಿಕೆ ಇಟ್ಟುಕೊಂಡಿದ್ದಾರೆ. ಆದ್ದರಿಂದ ಗ್ರಾಮೀಣ ಪ್ರದೇಶದ ಜನರು ಸಂತೆಯಲ್ಲಿ ಹೆಚ್ಚಾಗಿ ಭಾಗವಹಿಸುವುದರಿಂದ ಗೋಸಂಗಿಗಳಿಗೆ ಇದರಲ್ಲಿ ಸ್ವಲ್ಪ ಲಾಭವನ್ನು ತಂದುಕೊಡುತ್ತಿದೆ.

**೪:೨:೭:೫ ಸುಗಂಧ ದ್ರವ್ಯಗಳ ವ್ಯಾಪಾರ :** ಗೋಸಂಗಿಗಳು ಪ್ರಸಿದ್ಧರಾಗಿರುವುದು ಸುಗಂಧ ದ್ರವ್ಯಗಳನ್ನು ಮಾರುವುದರಿಂದ ಇವರು ದೂರದ ಊರುಗಳಿಂದ ಸುಗಂಧ ದ್ರವ್ಯಗಳನ್ನು ತಂದು ವ್ಯಾಪಾರ ಮಾಡುತ್ತಾರೆ. ಗೋಸಂಗಿ ಸಮುದಾಯದ ಅನೇಕ ಯುವಕರು ಈ ವೃತ್ತಿಯಲ್ಲಿಯೇ ಹೆಚ್ಚಾಗಿ ಕಂಡುಬರುತ್ತಾರೆ. ಆದರೆ ಸಂತೆಗಳಲ್ಲಿನ ಹಳ್ಳಿಗಾಡಿನಿಂದ ಮಾತ್ರವಲ್ಲದೇ ಬಹಳಷ್ಟು ಕಡೆಗಳಿಂದ ಬಹಳಷ್ಟು ಜನರು ಬಂದಿರುವುದರಿಂದ ಇವರ ವ್ಯಾಪಾರವು ಹೆಚ್ಚಾಗಿಯೇ ಆಗುತ್ತದೆ. ಇವರು ದಿನಲೂ ೨೦೦ರಿಂದ ೩೦೦ ರೂಪಾಯಿಗಳ ವ್ಯಾಪಾರ ಮಾಡಿದರೆ, ಸಂತೆಯ ದಿನದಂದು ೩೦೦ರಿಂದ ೪೦೦ ರೂಪಾಯಿಗಳ ವ್ಯಾಪಾರವಾಗುತ್ತದೆ. ಇದರಲ್ಲಿ ಅನೇಕ ವೆಚ್ಚವನ್ನು ತೆಗೆದು ೨೦೦ ರೂಪಾಯಿಗಳ ನಿವ್ವಳ ಲಾಭವಾದರೂ ದೊರೆಯುತ್ತದೆ. ಹೆಚ್ಚಿನ ಲಾಭಕ್ಕಾಗಿ ಸಂತೆಗಳು ಇವರಿಗೆ ಅತ್ಯವಶ್ಯಕವಾಗಿದೆ.

೪:೨:೭:೬ ಆಯ್ದ ಸಂತೆಗಳಲ್ಲಿ ಆಯ್ದುಕೊಂಡ ಗೋಸಂಗಿ ಸಮುದಾಯದ ಸದಸ್ಯರ ವ್ಯಾಪಾರ ವಹಿವಾಟಿನಿಂದ ಬರುವ ಆದಾಯದ ಸರಾಸರಿ ಪ್ರಮಾಣ:

ಕೋಷ್ಟಕ - ೪.೭

ಗೋಸಂಗಿ ಸಮುದಾಯದ ಆಯ್ದ ಸದಸ್ಯರ ವ್ಯಾಪಾರ ವಹಿವಾಟಿನ ಸರಾಸರಿ ಪ್ರಮಾಣ

| ಕ್ರ. ಸಂ. | ಮಾರುವ ಸರಕು | ಮಾರಾಟಗಾರರ ಸಂಖ್ಯೆ | ಬಂಡವಾಳ ಪ್ರಮಾಣ | ವಹಿವಾಟು ವೆಚ್ಚ | ಮಾರಾಟ ಬೆಲೆ | ಲಾಭ | ನಷ್ಟ | ತಲಾವಾರು ಸರಾಸರಿ ಲಾಭ |
|---|---|---|---|---|---|---|---|---|
| ೧. | ಪ್ಲಾಸ್ಟಿಕ್ ವಸ್ತುಗಳ ವ್ಯಾಪಾರ | ೨೧ | ೨೫,೦೦೦ | ೨,೫೦೦ | ೩೨,೦೦೦ | ೪,೫೦೦ | -- | ೨೪೧.೨೮ |
| ೨. | ಪ್ಲಾಸ್ಟಿಕ್ ವಸ್ತುಗಳ ರಿಪೇರಿ | ೨೩ | -- | -- | ೧,೮೪೦ | ೧,೮೪೦ | -- | ೮೦.೦೦ |
| ೩. | ಮೀನು ಮಾರಾಟ | ೧೦ | -- | ೨೦೦ | ೨,೦೦೦ | ೧,೮೦೦ | -- | ೧೮೦.೦೦ |
| ೪. | ಗಿಡಮೂಲಿಕೆಗಳ ವ್ಯಾಪಾರ | ೯ | ೪,೫೦೦ | ೧,೦೦೦ | ೭,೦೦೦ | ೧,೫೦೦ | -- | ೧೬೬.೬೬ |
| ೫. | ಸುಗಂಧ ದ್ರವ್ಯ ವ್ಯಾಪಾರ | ೨೪ | ೧೨,೦೦೦ | ೨,೦೦೦ | ೧೮,೦೦೦ | ೪,೦೦೦ | -- | ೧೬೬.೬೬ |
| | **ಒಟ್ಟು** | **೮೭** | **೪೧,೫೦೦** | **೫,೭೦೦** | **೬೦,೮೪೦** | **೧೩,೬೪೦** | -- | **೧೫೬.೭೮** |

ಸಂಗ್ರಹಣೆ: ಕ್ಷೇತ್ರಕಾರ್ಯ ಆಧರಿತ ಮಾಹಿತಿ

**ವಿಶ್ಲೇಷಣೆ :** ಬಳ್ಳಾರಿ ಜಿಲ್ಲೆಯ ಕೆಲವು ಆಯ್ದ ಸಂತೆಗಳಲ್ಲಿ ಗೋಸಂಗಿ ಬುಡಕಟ್ಟು ಸಮುದಾಯದ ಆಯ್ದ ವಿವಿಧ ಸದಸ್ಯರು ತಮ್ಮ ಜೀವನೋಪಾಯಕ್ಕಾಗಿ ಹಲವಾರು ವಿವಿಧ ವೃತ್ತಿಗಳನ್ನು ಅವಲಂಬಿಸಿದ್ದು, ಅವರಲ್ಲಿ ಹೆಚ್ಚು ಜನರು ಸುಗಂಧ ದ್ರವ್ಯ ವ್ಯಾಪಾರವನ್ನು ಮೈಗೂಡಿಸಿಕೊಂಡಿರುವುದು ಕಂಡುಬರುತ್ತದೆ. ಸುಗಂಧ ದ್ರವ್ಯ ವ್ಯಾಪಾರ ಮಾಡುವ ಒಟ್ಟು ೨೪ ಜನರಲ್ಲಿ ಅವರು ತೊಡಗಿಸಿರುವ ಬಂಡವಾಳ ೧೨,೦೦೦ ರೂ.ಗಳು ಇದಕ್ಕಾಗಿ ಅವರು ಪಡೆಯುವ ನಿವ್ವಳ ಲಾಭ ೧೬೬.೬೬ ರೂ.ಗಳು. ಆದರೆ ಇದೇ ಸಮುದಾಯದ ಆಯ್ದ ಒಟ್ಟು ೨೧ ಸದಸ್ಯರು ೨೫,೦೦೦ ರೂ.ಗಳನ್ನು ಬಂಡವಾಳವಾಗಿ ವಿನಿಯೋಗಿಸಿ ನಿವ್ವಳ ಲಾಭವಾಗಿ ೪,೫೦೦ ರೂ.ಗಳನ್ನು ಪಡೆದು ೨೧೪.೨೮ ರೂ.ಗಳನ್ನು ತಲಾ ಆದಾಯವಾಗಿ ಪಡೆದು ಪ್ರಥಮ ಸ್ಥಾನದಲ್ಲಿದ್ದಾರೆ. ಆದರೆ, ಇದೇ ಬುಡಕಟ್ಟಿನ ಪ್ಲಾಸ್ಟಿಕ್ ವಸ್ತುರಿಪೇರಿ ಮಾಡುವ ವೃತ್ತಿಯನ್ನು ಮೈಗೂಡಿಸಿಕೊಂಡಿರುವ ೨೩ ಸದಸ್ಯರುಗಳು ಯಾವುದೇ ಬಂಡವಾಳ ವಿನಿಯೋಗಿಸದೇ ೧,೮೪೦ ರೂ. ನಿವ್ವಳ ಲಾಭವನ್ನು ಪಡೆದು ಕೇವಲ ೮೦ ರೂ.ಗಳ ಕಡಿಮೆ ತಲಾ ಆದಾಯ ಹೊಂದಿರುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ, ಗೋಸಂಗಿ ಬುಡಕಟ್ಟಿನ ಆಯ್ದ ೮೭ ಜನರ ಪೈಕಿ ಒಟ್ಟಾರೆಯಾಗಿ ಅವರು ತೊಡಗಿಸಿರುವ ೪೧,೫೦೦ ರೂ.ಗಳ ಬಂಡವಾಳಕ್ಕಾಗಿ ೧೩,೬೪೦ ರೂ. ನಿವ್ವಳ ಲಾಭಾಂಶವನ್ನು

ಪಡೆದು ತಲಾ ೧೫೬.೭೮ ರೂ. ಪಡೆಯುತ್ತಿರುವುದು ಸಮೀಕ್ಷೆಯಿಂದ ತಿಳಿದುಬರುತ್ತದೆ. ಆದ್ದರಿಂದ ಗೋಸಂಗಿ ಬುಡಕಟ್ಟಿನ ಸದಸ್ಯರು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವುದು ಕಣ್ಣಿಗೆ ಕಾಣುವ ವಿಷಯವಾಗಿದೆ.

## ೪:೨:೮ ಬಳ್ಳಾರಿ ಜಿಲ್ಲೆಯ ಆಯ್ದ ಸಂತೆಗಳಲ್ಲಿ ಆಯ್ದ ಬುಡಕಟ್ಟು ಸಮುದಾಯಗಳ ಆಯ್ದ ಸದಸ್ಯರುಗಳ ಸರಾಸರಿ ತಲಾ ಆದಾಯ / ಆರ್ಥಿಕ ಸ್ಥಿತಿಯ ಪ್ರಮಾಣ

**ಕೋಷ್ಟಕ - ೪.೮**

**ಬಳ್ಳಾರಿ ಜಿಲ್ಲೆಯ ಆಯ್ದ ಸಂತೆಗಳಲ್ಲಿ ಆಯ್ದ ಬುಡಕಟ್ಟು ಸಮುದಾಯಗಳ ಆಯ್ದ ಸದಸ್ಯರ ವ್ಯಾಪಾರ ವಹಿವಾಟಿನ ಸರಾಸರಿ ಪ್ರಮಾಣ**

| ಕ್ರ. ಸಂ. | ಬುಡಕಟ್ಟುಗಳ ಹೆಸರು | ಸದಸ್ಯರ ಸಂಖ್ಯೆ | ಒಟ್ಟು ಬಂಡವಾಳ ಹೂಡಿಕೆಯ ಪ್ರಮಾಣ | ವಹಿವಾಟು ವೆಚ್ಚ | ಮಾರಾಟ ಮಾಡುವ ಒಟ್ಟು ಬೆಲೆಯ ಪ್ರಮಾಣ | ಮಾರಾಟವಾದ ಸರಕುಗಳಿಂದ ಪಡೆದ ಒಟ್ಟು ಲಾಭಾಂಶ | ಒಟ್ಟು ನಷ್ಟ | ಪ್ರತಿ ಬುಡಕಟ್ಟಿನ ಒಟ್ಟು ಸರಾಸರಿ ಲಾಭ |
|---|---|---|---|---|---|---|---|---|
| ೧. | ಬೇಡ | ೨೮ | ೪೪,೦೦೦ | ೩,೨೦೦ | ೫೮,೫೦೦ | ೧೧,೩೦೦ | -- | ೪೦೩.೫೭ |
| ೨. | ಮೇದ | ೩೧ | ೫೦,೦೦೦ | ೩,೫೦೦ | ೬೧,೦೦೦ | ೦೭,೫೦೦ | -- | ೨೪೧.೯೩ |
| ೩. | ಹಕ್ಕಿಪಿಕ್ಕಿ | ೬೦ | ೨೮,೦೦೦ | ೮೦೦ | ೩೮,೦೦೦ | ೯,೨೦೦ | -- | ೧೫೩.೩೩ |
| ೪. | ರಾಜಗೊಂಡ | ೩೧ | ೯,೦೦೦ | ೧,೮೦೦ | ೧೫,೧೫೦ | ೪,೩೫೦ | -- | ೧೪೦.೩೨ |
| ೫. | ಲಂಬಾಣಿ | ೫೨ | ೬೩,೦೦೦ | ೫,೯೦೦ | ೮೧,೦೦೦ | ೧೨,೧೦೦ | -- | ೨೩೨.೬೯ |
| ೬. | ಕೊರವ | ೨೨ | ೫,೮೦೦ | ೧,೩೫೦ | ೯,೨೧೦ | ೨,೦೬೦ | -- | ೦೯೩.೬೩ |
| ೭. | ಗೋಸಂಗಿ | ೮೭ | ೪೧,೫೦೦ | ೫,೭೦೦ | ೬೦,೮೪೦ | ೧೩,೬೪೦ | -- | ೧೫೬.೭೮ |
| | **ಒಟ್ಟು, ಸರಾಸರಿ** | **೩೧೧** | **೨,೪೧,೩೦೦** | **೨೨೨೫೦** | **೩೨೩೭೦೦** | **೬೦೧೫೦** | -- | **೧೯೩.೪೦** |

ಸಂಗ್ರಹಣೆ: ಕ್ಷೇತ್ರಕಾರ್ಯ ಆಧರಿತ ಮಾಹಿತಿ

**ವಿಶ್ಲೇಷಣೆ :** ಬಳ್ಳಾರಿ ಜಿಲ್ಲೆಯ ಕೆಲವು ಆಯ್ದ ಸಂತೆಗಳಲ್ಲಿ ಆಯ್ದ ಕೆಲವು ಬುಡಕಟ್ಟುಗಳನ್ನು ಸಮೀಕ್ಷಿಸಿ, ಸಂದರ್ಶಿಸಲಾಗಿ, ಒಟ್ಟಾರೆ ೭ ಬುಡಕಟ್ಟುಗಳಲ್ಲಿ ಬೇಡ ಬುಡಕಟ್ಟು ಸಮುದಾಯದ ಕೇವಲ ೨೮ ಜನ ಸದಸ್ಯರು ೪೪,೦೦೦ ರೂ. ಬಂಡವಾಳ ವಿನಿಯೋಗಿಸಿ ೧೧,೩೦೦ ರೂ.ಗಳ ನಿವ್ವಳ ಲಾಭಾಂಶ ಪಡೆದು ತಲಾ ೪೦೩.೫೭ ರೂ.ಗಳ ಆದಾಯವನ್ನು ಪಡೆಯುತ್ತಿದ್ದಾರೆ. ಆದರೆ, ಗೋಸಂಗಿ ಬುಡಕಟ್ಟಿನ ೮೭ ಜನ ಸದಸ್ಯರು ೪೧,೫೦೦ ರೂ.ಗಳ ಬಂಡವಾಳ ವಿನಿಯೋಗಿಸಿ ೧೩,೬೪೦ ರೂ. ಲಾಭಾಂಶ ಪಡೆದರೂ ೧೫೬.೭೮ ತಲಾ ಆದಾಯ ಪಡೆಯುತ್ತಿರುವುದು ಕಂಡುಬರುತ್ತದೆ. ಈ ಮೇಲಿನ ಎಲ್ಲಾ ಬುಡಕಟ್ಟುಗಳಲ್ಲಿ ಅತ್ಯಂತ ಕಡಿಮೆ ಸಂಖ್ಯೆಯನ್ನು ಸಂತೆಯಲ್ಲಿ ಪಾಲ್ಗೊಳ್ಳುವ ಕೊರವ ಸಮುದಾಯದ ಕೇವಲ ೨೨ ಜನ ಸದಸ್ಯರು ಅತ್ಯಂತ ಕಡಿಮೆಯ ೫,೮೦೦ ರೂ. ಬಂಡವಾಳ ತೊಡಗಿಸಿ ೨,೦೬೦ ರೂ. ಬಂಡವಾಳ ಪಡೆದು ಕೇವಲ ೯೩.೬೩ ರೂ.ಗಳ ತಲಾ ಆದಾಯ ಪಡೆದು ಸಂತೆಯಲ್ಲಿ ವ್ಯವಹರಿಸುವ ಬುಡಕಟ್ಟುಗಳಲ್ಲೇ ಕಡಿಮೆ ಮಟ್ಟದ

ತಲಾ ಆದಾಯ ಪಡೆಯುತ್ತಿರುವುದು ಸಮೀಕ್ಷೆಯಿಂದ ತಿಳಿದುಬರುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ಇನ್ನುಳಿದ ಬುಡಕಟ್ಟು ಸಮುದಾಯಗಳು ಸರಾಸರಿ ತಲಾ ಆದಾಯದಲ್ಲಿದ್ದು, ಹೆಚ್ಚಿನ ತಲಾ ಆದಾಯ ಹೊಂದಿರುವ ಬುಡಕಟ್ಟು, ಬೇಡ ಬುಡಕಟ್ಟು ಸಮುದಾಯ ಎಂದು ಕಂಡುಬಂದರೆ, ಕಡಿಮೆ ತಲಾ ಆದಾಯದಲ್ಲಿ ಕಂಡುಬರುವ ಬುಡಕಟ್ಟು ಕೊರವ ಬುಡಕಟ್ಟು. ಇದರಿಂದ ಆಯಾ ಬುಡಕಟ್ಟಿನ ಬಂಡವಾಳ ತೊಡಗಿಸುವಿಕೆಯ ಪ್ರಮಾಣ ಮತ್ತು ಪಾಲ್ಗೊಳ್ಳುವ ಜನಸಂಖ್ಯೆ ಹಾಗೂ ಅವರು ಪಡೆಯುವ ತಲಾ ಆದಾಯ ಸರಾಸರಿ ಪ್ರಮಾಣವನ್ನು ಕಂಡುಕೊಳ್ಳಬಹುದಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ತಿಳಿಸಿದಂತೆ ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳು ಸಂತೆಯಲ್ಲಿ ವ್ಯಾಪಾರ ವಹಿವಾಟನ್ನು ಮಾಡುತ್ತ ತಮ್ಮ ಬದುಕನ್ನು ರೂಪಿಸಿಕೊಂಡಿದ್ದಾರೆ. ಅಷ್ಟೇ ಅಲ್ಲದೆ ಸಂತೆಯಲ್ಲಿ ಅನೇಕ ಸಮುದಾಯಗಳು ವ್ಯಾಪಾರವನ್ನು ಮಾಡುತ್ತಿವೆ.

### ೪:೩ ಸಂತೆಯಲ್ಲಿ ಬುಡಕಟ್ಟು ಸಮುದಾಯದ ಗ್ರಾಹಕರು

ಸಂತೆಯಲ್ಲಿ ವ್ಯಾಪಾರಗಾರರಿಗೆ ಇರುವಷ್ಟೇ ಪ್ರಾಮುಖ್ಯತೆ ಗ್ರಾಹಕರಿಗೂ ಇರುತ್ತದೆ. ಗ್ರಾಹಕರೇ ಇರದೆ ಹೋದರೆ ವ್ಯಾಪಾರ ವಹಿವಾಟುಗಳು ನಡೆಯುವುದಿಲ್ಲ. ಅಂತೆಯೇ ಸಂತೆಯಲ್ಲಿ ಅನೇಕ ಸಮುದಾಯಗಳು ತಮಗೆ ಅತ್ಯವಶ್ಯಕವಾದ ವಸ್ತುಗಳನ್ನು ಕೊಳ್ಳಲು ಬರುತ್ತಾರೆ. ಇಲ್ಲಿ ಜಾತಿ ಧರ್ಮಗಳ ಭೇದವಿಲ್ಲದೆ ವಸ್ತುಗಳ ವ್ಯಾಪಾರ ವಹಿವಾಟು ನಡೆಯುತ್ತದೆ. ಉದಾಹರಣೆಗೆ ಅತ್ಯಂತ ಉಚ್ಚ ಜಾತಿಯವರು ಎಂದು ಪರಿಗಣಿತರಾದವರು ಕೆಳವರ್ಗದ ಜನರಲ್ಲಿ ವಸ್ತುಗಳನ್ನು ಖರೀದಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಸಂತೆಯು ಜಾತಿ ಸಂಘರ್ಷವನ್ನು ತೊಡೆದು ಹಾಕಲು ಸಹಾಯಕಾರಿಯಾಗಿದೆ.

ಸಂತೆಯಲ್ಲಿ ಗ್ರಾಹಕರು ಮತ್ತು ವ್ಯಾಪಾರಗಾರರು ಒಬ್ಬರನ್ನೊಬ್ಬರು ಅವಲಂಬಿಸಿದ್ದಾರೆ. ವ್ಯಾಪಾರಗಾರರು ತಮ್ಮ ವಸ್ತುಗಳ ವ್ಯಾಪಾರ ಮಾಡಿ ಬಂದ ಹಣದಿಂದ ಬದುಕು ಸಾಗಿಸುವುದು ಅನಿವಾರ್ಯ. ಅಂತೆಯೆ ಗ್ರಾಹಕರು ಕೂಡಾ ತಮ್ಮ ದಿನನಿತ್ಯ ಅವಶ್ಯಕ ವಸ್ತುಗಳನ್ನು ಕೊಂಡು ಜೀವನ ನಿರ್ವಹಿಸುವುದು ಸಹ ಅನಿವಾರ್ಯವಾಗಿದೆ. ವ್ಯಾಪಾರಗಾರರು ಸಂತೆಗೆ ತರುವ ವಸ್ತುಗಳನ್ನು ಸಾಮಾನ್ಯವಾಗಿ ತಯಾರಕರು, ರೈತರು ಅಥವಾ ಮಧ್ಯವರ್ತಿಗಳಿಂದ ಹಾಗೂ ಸಗಟು ವ್ಯಾಪಾರಿಗಳಿಂದ ಖರೀದಿಸಿ ತರುತ್ತಾರೆ. ಆ ವಸ್ತುಗಳಿಗೆ ಮೂಲಬೆಲೆ, ಸಾರಿಗೆ ವೆಚ್ಚ, ಜಾಗತಿ ವೆಚ್ಚದ ಜೊತೆಗೆ ಲಾಭವನ್ನು ಕೂಡಿಸಿ ವಸ್ತುಗಳ ಬೆಲೆಯನ್ನು ನಿಗದಿಪಡಿಸುತ್ತಾರೆ. ಗ್ರಾಹಕರು ವ್ಯಾಪಾರಗಾರರು ನಿಗದಿಪಡಿಸಿದ ಬೆಲೆಯನ್ನು ಕೊಟ್ಟು ವಸ್ತುಗಳನ್ನು ಕೊಳ್ಳುವುದಿಲ್ಲ. ಬದಲಿಗೆ ಚೌಕಾಸಿಯನ್ನು ಮಾಡುತ್ತಾರೆ. ಗ್ರಾಹಕರ ಚೌಕಾಸಿಯನ್ನು ನಿರೀಕ್ಷಿಸಿಯೇ ವ್ಯಾಪಾರಗಾರರು ತಮಗೆ ಲಾಭವಾಗುವ ರೀತಿಯಲ್ಲಿ ಇದ್ದಾಗ ಮಾತ್ರ ವ್ಯಾಪಾರ ಮಾಡುತ್ತಾರೆ.

ಸಂತೆಯಲ್ಲಿ ಗ್ರಾಹಕರಾಗಿ ಬರುವಂತಹ ವಿವಿಧ ಸಮುದಾಯಗಳಲ್ಲಿ ಬುಡಕಟ್ಟು ಸಮುದಾಯವು ಒಂದು. ಅಧ್ಯಯನದ ದೃಷ್ಟಿಯಿಂದ ಇವರನ್ನು ಕೂಲಿಕಾರ್ಮಿಕರು, ಉದ್ಯೋಗಸ್ಥರು ಹಾಗೂ ಸಂಪ್ರದಾಯ ಆರಾಧಕರು ಎಂದು ವರ್ಗೀಕರಿಸಿ, ಈ ಕೆಳಗೆ ಚರ್ಚಿಸಲಾಗಿದೆ.

### ೪:೩:೧ ಕೃಷಿ ಕೂಲಿಕಾರ ಮತ್ತು ಕಾರ್ಮಿಕ ಗ್ರಾಹಕರು

ಬುಡಕಟ್ಟು ಹಾಗೂ ಅಲೆಮಾರಿ ಸಮುದಾಯಗಳು ಒಂದೆಡೆ ಸ್ಥಿರವಾಗಿ ನೆಲೆನಿಂತು ಕೃಷಿ ಮತ್ತು ಗೃಹ ಕೈಗಾರಿಕೆಯಲ್ಲಿ ನಿರತರಾಗಿರುವುದನ್ನು ಕಾಣುತ್ತೇವೆ. ಬಳ್ಳಾರಿ ಜಿಲ್ಲೆಯಲ್ಲಿ ಕೃಷಿಕೂಲಿಗಳಾಗಿ ಬದುಕು ನಡೆಸುತ್ತಿರುವ ಬುಡಕಟ್ಟುಗಳಲ್ಲಿ ಬೇಡರು, ಹಕ್ಕಿಪಿಕ್ಕಿಯವರು ಹಾಗೂ ಅಲ್ಪ ಪ್ರಮಾಣದಲ್ಲಿ ಮೇದರು ಇನ್ನುಳಿದಂತೆ ಅಲೆಮಾರಿ ಸಮುದಾಯಗಳಾದ ಹಗಲುವೇಷಗಾರರು, ಸುಡುಗಾಡುಸಿದ್ಧರು ಮುಂತಾದ ಸಮುದಾಯಗಳು ಆಧುನಿಕ ಬದುಕಿನಲ್ಲಿ ಒಂದೆಡೆ ನಿಂತು ಕೃಷಿಕೂಲಿಕಾರರಾಗಿ ಜೀವನ ಸಾಗಿಸುತ್ತಿದ್ದಾರೆ. ಇವರೆಲ್ಲರೂ ನಿತ್ಯೋಪಯೋಗಿ ವಸ್ತುಗಳನ್ನು ಕೊಳ್ಳುವುದಕ್ಕೆ ಸಂತೆಯನ್ನು ಅವಲಂಬಿಸಿದ್ದಾರೆ. ಭಾರತ ಕೃಷಿ ಪ್ರಧಾನ ದೇಶ. ಆದ್ದರಿಂದ ಭಾರತದಲ್ಲಿ ಕೃಷಿನಿರತರಾದವರ ಜನಸಂಖ್ಯೆ ಶೇಕಡ ೬೭ ರಷ್ಟಿದೆ. ಸಾಂಪ್ರದಾಯಿಕ ಮತ್ತು ಅವೈಜ್ಞಾನಿಕ ವಿಧಾನದ ಕೃಷಿಯಿಂದ ರೈತರೂ ಪಡೆಯುವ ಇಳುವರಿ ಅತ್ಯಂತ ಕಡಿಮೆ. ಆದಕಾರಣ ಕೃಷಿಕರ ಹಾಗೂ ಕೃಷಿಕೂಲಿಗಳ ಬದುಕು ಅಷ್ಟೇನು ಉತ್ತಮವಾಗಿಲ್ಲ. ಬುಡಕಟ್ಟು ಕೃಷಿಕರ ಮತ್ತು ಕೃಷಿಕೂಲಿಗಳ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿಲ್ಲ. ಮತ್ತೊಂದೆಡೆ ಪ್ರಕೃತಿ ವಿಕೋಪಗಳಾದ ಅತಿವೃಷ್ಟಿ, ಅನಾವೃಷ್ಟಿ ಪರಿಸ್ಥಿತಿಗಳು ಸಹಾ ಜನರನ್ನು ತೊಂದರೆಗೀಡು ಮಾಡುವುದು ಸಾಮಾನ್ಯವಾಗಿದೆ. ಇಂತಹ ಸನ್ನಿವೇಶದಲ್ಲಿ ಬದುಕುತ್ತಿರುವ ಬುಡಕಟ್ಟು ಸಮುದಾಯಗಳಲ್ಲಿರುವ ಸಣ್ಣ ಕೃಷಿಕರು ಹಾಗೂ ಕೂಲಿಗಳು ಆರ್ಥಿಕವಾಗಿ ಹಿಂದುಳಿದಿರುವುದು ಕಂಡುಬರುತ್ತದೆ.

ಒಟ್ಟಿನಲ್ಲಿ ನಾಲ್ಕು ಜನರ ಸಮಕ್ಷಮದಲ್ಲಿ ನಾವು ಅವರಂತೆ ಬದುಕಬೇಕು ಎಂಬ ತತ್ವವನ್ನು ನಂಬಿದ ಈ ಬುಡಕಟ್ಟು ಜನರು ತಮ್ಮ ದೈಹಿಕ ಸಾಮರ್ಥ್ಯವನ್ನೇ ನಂಬಿ ಕೂಲಿ ಮಾಡಿ ಅದರಿಂದ ಬಂದ ಹಣದಲ್ಲಿ ಬದುಕುವುದು ಅನಿವಾರ್ಯವಾಗಿದೆ. ಇವರು ದಿನಕ್ಕೆ ಅಥವಾ ವಾರಕ್ಕೆ ಒಮ್ಮೆ ಕೂಲಿಯನ್ನು ಪಡೆಯುವುದರಿಂದ ವಾರದ ಸಂತೆಯಲ್ಲಿ ಇವರು ತಮಗೆ ಅಗತ್ಯವಾದ ಆಹಾರ ಇತರೆ ಸಾಮಗ್ರಿಗಳನ್ನು ಕೊಂಡುಕೊಳ್ಳುವರು. ಕೃಷಿಕರಾಗಲಿ ಅಥವಾ ಕೂಲಿ ಕಾರ್ಮಿಕರಾಗಲಿ ಸಂತೆಯ ದಿನದಂದು ಅರ್ಧ ಇಲ್ಲವೆ ಪೂರ್ಣದಿನ ರಜೆ ಪಡೆಯುವುದುಂಟು. ಆದ್ದರಿಂದ ಇವರ ಕೂಲಿ ಬಟವಾಡೆ ಹಿಂದಿನ ದಿನವೇ ನಡೆಯುತ್ತದೆ. ಈ ವ್ಯವಸ್ಥೆ ಬಳ್ಳಾರಿ ಜಿಲ್ಲೆಯಲ್ಲಿ ಸಂತೆ ನಡೆಯುವ ಎಲ್ಲಾ ಪ್ರದೇಶಗಳಿಗೆ ಅನ್ವಯವಾಗುತ್ತದೆ. ಉದಾಹರಣೆಗೆ ಹೊಸಪೇಟೆ ಮತ್ತು ಸುತ್ತಮುತ್ತಲ ಗ್ರಾಮಗಳಲ್ಲಿ ಕೂಲಿಕಾರ್ಮಿಕರ ಕೂಲಿ ಬಟವಾಡೆ ಶನಿವಾರ ನಡೆಯುವುದು. ಕಾರಣ ಭಾನುವಾರ ಹೊಸಪೇಟೆಯಲ್ಲಿ ಸಂತೆ ಕೂಡುತ್ತದೆ. ಅದೇ ರೀತಿ ಕೂಡ್ಲಿಗಿಯಲ್ಲಿ ಶುಕ್ರವಾರ ಸಂತೆ ಕಟ್ಟುವುದರಿಂದ ಅದರ ಹಿಂದಿನ ದಿನವೇ ಕೂಲಿಕಾರ್ಮಿಕರ ಬಟವಾಡೆ ಮಾಡುವರು.

ಕೃಷಿಕರು ಹಾಗೂ ಕೂಲಿಕಾರ್ಮಿಕರಿಗೆ ಸಂತೆಯೇ ವಾರದ ಜೀವನಾಧಾರ ಸಾಮಗ್ರಿಗಳನ್ನು ಖರೀದಿಸುವ ವ್ಯಾಪಾರ ಕೇಂದ್ರ. ಇದು ಅವರ ಆರ್ಥಿಕ ಸ್ಥಿತಿಯನ್ನು ಹಾಗೂ ಕುಟುಂಬ ಸದಸ್ಯರ ಸಂಖ್ಯೆಯನ್ನು ಅವಲಂಬಿಸಿರುತ್ತದೆ. ಬುಡಕಟ್ಟುಗಳು ಮತ್ತು ಅಲೆಮಾರಿ ಸಮುದಾಯಗಳು ಇಂದು ಒಂದೆಡೆ ನೆಲೆ ನಿಂತಿದ್ದಾರೆ ಎಂಬುದನ್ನು ಈಗಾಗಲೇ ತಿಳಿಸಲಾಗಿದೆ. ಇವರಲ್ಲಿ ಅನೇಕರು ಕೃಷಿಕರು ಹಾಗೂ ಕೂಲಿಕಾರ್ಮಿಕರು.

ಈ ಬುಡಕಟ್ಟು ಕೃಷಿಕರು ವ್ಯವಸಾಯವನ್ನು ಮಾಡಿ ಬಂದ ಹಣದಿಂದ ಜೀವನ ಸಾಗಿಸುವರು. ಆದರೆ ಇವರು ಬೆಳೆದಂತ ಬೆಳೆಗಳು ಅನಿಶ್ಚಿತತೆಯಿಂದ ಕೂಡಿರುತ್ತದೆ. ಇದರಿಂದ ಇವರ ಆದಾಯದಲ್ಲಿ ನಿಶ್ಚಿತತೆ ಇರುವುದಿಲ್ಲ. ಇದೇ ರೀತಿ ಕೂಲಿಕಾರ್ಮಿಕರಿಗೂ ಸಹ ಒಂದು ದಿನ ಕೆಲಸ ಸಿಕ್ಕರೆ ಮತ್ತೊಂದು ದಿನ ಸಿಗುವುದಿಲ್ಲ. ಈ ಕಾರಣದಿಂದ ಸಂತೆಯಲ್ಲಿ ಖಚಿತವಾದ ಆದಾಯದಿಂದ ವ್ಯಾಪಾರ ಮಾಡಲು ಬರುವುದಿಲ್ಲ. ಆದರೂ ಸಹ ಬಂದ ಆದಾಯದಲ್ಲಿಯೇ ಸಂತೆಯಲ್ಲಿ ಜೀವನಾವಶ್ಯಕ ವಸ್ತುಗಳನ್ನು ಖರೀದಿಸಿ ಜೀವನ ಸಾಗಿಸುತ್ತಾರೆ. ಇದು ಇವರಿಗೆ ಅನಿವಾರ್ಯವೂ ಕೂಡ. ಇನ್ನು ಬುಡಕಟ್ಟುಗಳ ಕುಟುಂಬದಲ್ಲಿ ಅಧಿಕ ಸಂಖ್ಯೆಯ ಸದಸ್ಯರು ಇದ್ದರೆ, ಸಂತೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜೀವನಾವಶ್ಯಕ ವಸ್ತುಗಳನ್ನು ಕೊಳ್ಳುತ್ತಾರೆ. ಅದೇ ರೀತಿ ಕಡಿಮೆ ಸಂಖ್ಯೆಯ ಸದಸ್ಯರಿದ್ದರೆ ಕಡಿಮೆ ಸಂಖ್ಯೆಯ ವಸ್ತುಗಳನ್ನು ಕೊಳ್ಳುತ್ತಾರೆ.

ಕೃಷಿಕ ಮತ್ತು ಕೂಲಿಕಾರ್ಮಿಕ ಬುಡಕಟ್ಟು ಹಾಗೂ ಅಲೆಮಾರಿ ಸಮುದಾಯವು ತಮ್ಮ ಕೆಲಸಕಾರ್ಯಗಳನ್ನು ಮುಗಿಸಿ ಕುಟುಂಬಸಮೇತವಾಗಿ ಜೀವನಾವಶ್ಯಕ ವಸ್ತುಗಳನ್ನು ಕೊಳ್ಳಲು ಸಂತೆಗೆ ಮಧ್ಯಾಹ್ನ ೧೨ ಗಂಟೆಯಿಂದ ೪ ಗಂಟೆ ಸಮಯದಲ್ಲಿ ಬರುವುದೇ ಹೆಚ್ಚು. ಈ ರೀತಿ ಬರಲು ಕಾರಣ ಮಧ್ಯಾಹ್ನ ೧೨ ಗಂಟೆಯ ಒಳಗೆ ತಮ್ಮ ಕೃಷಿ ಕೂಲಿಯನ್ನು (ಹಣವನ್ನು) ಪಡೆದು ವ್ಯಾಪಾರ ವಹಿವಾಟಿಗೆ ಬರಲು ಸಾಧ್ಯವಾಗುತ್ತಿದೆ.

### ೪:೩:೨ ಉದ್ಯೋಗಸ್ಥ ಗ್ರಾಹಕರು

ಇತ್ತೀಚೆಗೆ ಬುಡಕಟ್ಟು ಸಮುದಾಯದಲ್ಲಿ ಕೆಲವರು ಶಿಕ್ಷಣ ಪಡೆದು ಸರ್ಕಾರಿ ಮತ್ತು ಖಾಸಗಿ ವಲಯಗಳಲ್ಲಿ ಉದ್ಯೋಗದಲ್ಲಿದ್ದಾರೆ. ಇವರು ಉದ್ಯೋಗದಿಂದ ತಿಂಗಳಿಗೆ ನಿಶ್ಚಿತವಾದ ವೇತನವನ್ನು ಪಡೆಯುತ್ತಾರೆ. ಆದ್ದರಿಂದ ತಮಗೆ ಬೇಕಾದ ಅತ್ಯವಶ್ಯಕ ವಸ್ತುಗಳನ್ನು ಕೊಳ್ಳಲು ಹಣವನ್ನು ಕಾಯ್ದಿರಿಸಿರುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ಸರ್ಕಾರಿ ಮತ್ತು ಖಾಸಗಿ ವಲಯದಲ್ಲಿ ಉದ್ಯೋಗ ಮಾಡುವಂತ ಬುಡಕಟ್ಟುಗಳಲ್ಲಿ ಎರಡು ಪ್ರಕಾರಗಳು ಇವೆ. ಅವುಗಳೆಂದರೆ ಸ್ಥಳೀಯ ಉದ್ಯೋಗಿಗಳು ಮತ್ತು ಬೇರೆ ಕಡೆಗಳಿಂದ ಉದ್ಯೋಗದ ಮೇಲೆ ಬಂದವರು. ಈ ಎರಡು ಪ್ರಕಾರದ ಬುಡಕಟ್ಟುಗಳು ತಮ್ಮ ಅತ್ಯವಶ್ಯಕವಾದ ವಸ್ತುಗಳನ್ನು ಕೊಳ್ಳಲು ಸಂತೆಯನ್ನು ಅವಲಂಬಿಸಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಬುಡಕಟ್ಟು ಉದ್ಯೋಗಸ್ಥರಾದವರ ಪ್ರಮಾಣ ತುಂಬಾ ಕಡಿಮೆ ಇದೆ. ಇದ್ದುದರಲ್ಲಿಯೇ ಬೇಡ ಬುಡಕಟ್ಟು ಜನರು ಖಾಸಗಿ ಮತ್ತು ಸರ್ಕಾರಿ ಉದ್ಯೋಗದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇನ್ನುಳಿದಂತೆ ಕಡಿಮೆ ಪ್ರಮಾಣದಲ್ಲಿ ಲಂಬಾಣಿ ಜನರು ಇದ್ದಾರೆ.

ಆಧುನಿಕ ಸಮಾಜದಲ್ಲಿ ಸರ್ಕಾರಿ ಹುದ್ದೆಗಳಲ್ಲಿ ಎ.ಬಿ.ಸಿ.ಡಿ. ಎಂಬ ಬೇರೆ ಬೇರೆ ಗುಂಪಿನ ಹುದ್ದೆಗಳಿವೆ. ಆದರೆ ಬುಡಕಟ್ಟು ಸಮುದಾಯದವರು ಬಿ.ಸಿ ಮತ್ತು ಡಿ ಹುದ್ದೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇವರ ಆದಾಯವು ಖಚಿತವಾಗಿರುವುದರಿಂದ ವಾರಕ್ಕೊಮ್ಮೆ ನಡೆಯುವ ಸಂತೆಗಳಿಗೆ ತಮ್ಮ

ನಿತ್ಯ ಬದುಕಿಗೆ ಅವಶ್ಯಕವಾದ ವಸ್ತುಗಳನ್ನು ಕೊಳ್ಳಲು ಹಣವನ್ನು ಮೀಸಲಿಟ್ಟಿರುತ್ತಾರೆ. ಖಾಸಗಿ ಮತ್ತು ಸರ್ಕಾರಿ ಹುದ್ದೆಯಲ್ಲಿರುವ ಬುಡಕಟ್ಟು ಜನರು ರಜೆ ಸಿಗದ ಕಾರಣ ಸಂತೆಗೆ ಬರುವುದಿಲ್ಲ. ಬದಲಾಗಿ ಮನೆಯ ಹೆಣ್ಣುಮಕ್ಕಳು ನಿತ್ಯೋಪಯೋಗಿ ವಸ್ತುಗಳನ್ನು ಕೊಳ್ಳಲು ಸಂತೆಗೆ ಬರುತ್ತಾರೆ. ಇವರು ಬೆಳಗ್ಗೆ ೮ ಗಂಟೆಯಿಂದ ೧೦ ಗಂಟೆಯ ಒಳಗೆ ಬರುತ್ತಾರೆ. ಈ ಸಮಯದಲ್ಲಿ ಜನಜಂಗುಳಿಯು ಕಡಿಮೆ ಇದ್ದು, ತಾಜಾ ತರಕಾರಿ, ಹಣ್ಣುಹಂಪಲಗಳು ದೊರೆಯುತ್ತವೆ. ಇನ್ನು ಉಳಿದಂತೆ ನಾಲ್ಕನೆಯ ದರ್ಜೆಯ ನೌಕರರು ಕಡಿಮೆ ಬೆಲೆಯಲ್ಲಿ ಹೆಚ್ಚು ವಸ್ತುಗಳನ್ನು ಪಡೆಯುವ ಮನೋಭಾವವನ್ನು ಹೊಂದಿರುತ್ತಾರೆ. ಅದರಂತೆಯೇ ಒಂದು ಹಂತದವರೆಗೆ ಚೌಕಾಸಿಯನ್ನು ವ್ಯಾಪಾರಗಾರರೊಂದಿಗೆ ಮಾಡಿ ವಸ್ತುಗಳನ್ನು ಖರೀದಿಸುತ್ತಾರೆ. ಇದೇ ರೀತಿ ಬೇರೆ ಪ್ರದೇಶದಿಂದ ಬಂದಂತಹ ಬುಡಕಟ್ಟು ಉದ್ಯೋಗಸ್ಥರು ದಿನವಹಿ ಮಾರುಕಟ್ಟೆಯನ್ನು ಹೆಚ್ಚಾಗಿ ಅವಲಂಬಿಸಿದರು ಕೂಡಾ ಸಂತೆಯಲ್ಲಿ ಕಡಿಮೆ ಬೆಲೆಗೆ ವಸ್ತುಗಳನ್ನು ಖರೀದಿಸುವುದನ್ನು ರೂಢಿಸಿಕೊಂಡಿದ್ದಾರೆ.

### ೪:೩:೩ ಬುಡಕಟ್ಟು ಸಾಂಪ್ರದಾಯಿಕ ಆರಾಧಕರು

ಸಂತೆಯು ಎಲ್ಲಾ ವ್ಯಾಪಾರ ವಹಿವಾಟುಗಳ ಆಶ್ರಯತಾಣ. ಇಲ್ಲಿ ಎಲ್ಲಾ ತರಹದ ಗ್ರಾಹಕರು ಬರುತ್ತಾರೆ. ಅಂತೆಯೆ ತಲ-ತಲಾಂತರದಿಂದ ಸಾಂಪ್ರದಾಯಿಕವಾಗಿ ಸಂತೆಗೆ ಗ್ರಾಹಕರಾಗಿ ಬರುವವರು ಇದ್ದಾರೆ. ಈ ರೀತಿ ಬರುವವರಲ್ಲಿ ಬುಡಕಟ್ಟು, ಅಲೆಮಾರಿ ಹಾಗೂ ಹಿಂದುಳಿದ ಸಮುದಾಯಗಳೇ ಹೆಚ್ಚು. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಬೇಡ ಬುಡಕಟ್ಟಿನ ಜನರು ಹೆಚ್ಚಾಗಿ ಸಂತೆಯಲ್ಲಿ ಸಾಂಪ್ರದಾಯಿಕ ಆರಾಧಕ ಗ್ರಾಹಕರಾಗಿ ಕಂಡುಬರುತ್ತಾರೆ. ಹಾಗೂ ಅಲೆಮಾರಿ ಸಮುದಾಯಗಳಾದ ಕಿನ್ನರಿ ಜೋಗಿಗಳು, ಬುಡುಬುಡಿಕೆಯವರು ಸಹ ಸಾಂಪ್ರದಾಯಿಕ ಆರಾಧಕರಾಗಿ ಸಂತೆಗೆ ಬರುತ್ತಾರೆ.

ಬೇಡ ಬುಡಕಟ್ಟಿನಿಂದ ಕವಲೊಡೆದವರಾದ ಮ್ಯಾಸಬೇಡರಲ್ಲಿ ಜೋಗಪ್ಪ ಜೋಗಮ್ಮಗಳಾಗುವ ಪದ್ಧತಿಯಿದೆ. ಇವರನ್ನು ದೈವಾಂಶ ಸಂಭೂತರೆಂದು, ದೇವಿ ಆರಾಧಕರೆಂದು ಬೇಡರಲ್ಲಿ ಪ್ರತೀತಿ ಇದೆ. ಆದ್ದರಿಂದ ಇವರನ್ನು ಸಾಮಾನ್ಯ ಜನರು ಭಯ ಭಕ್ತಿಯಿಂದ ಕಾಣುತ್ತಾರೆ. ಈ ಜೋಗಪ್ಪ ಜೋಗಮ್ಮನವರು ಬುಟ್ಟಿಯಲ್ಲಿ ದೇವಿ ಫೋಟೋ ಅಥವಾ ವಿಗ್ರಹವನ್ನು ಇಟ್ಟುಕೊಂಡು, ಇದನ್ನು ತಲೆಯ ಮೇಲೆ ಹೊತ್ತು, ಕೆಂಪು, ಹಸಿರು, ಬಿಳಿ ಅಥವಾ ಹಳದಿ ಸೀರೆಯನ್ನು ಉಟ್ಟು ಸಂತೆಯಲ್ಲಿ ಮತ್ತು ಬೀದಿ ಬೀದಿಗಳಲ್ಲಿ ಭಿಕ್ಷೆ ಬೇಡುತ್ತಾರೆ. ಇವರು ಸಾಮಾನ್ಯವಾಗಿ ಸಂತೆಗೆ ಬೆಳಗಿನ ಸಮಯದಲ್ಲಿ ಹೋಗುತ್ತಾರೆ. ಕಾರಣ ವ್ಯಾಪಾರ ವಹಿವಾಟುಗಳು ಪ್ರಾರಂಭವಾಗುವ ಮುನ್ನ ಸಂತೆಯಲ್ಲಿಯ ವ್ಯಾಪಾರಿಗಳು ಈ ಜೋಗಪ್ಪ ಜೋಗಮ್ಮನವರಿಗೆ ತಮ್ಮ ಹತ್ತಿರವಿರುವ ವಸ್ತುಗಳನ್ನು ಕೊಟ್ಟರೆ ವ್ಯಾಪರ ವಹಿವಾಟು ಅಧಿಕವಾಗಿ ಲಾಭ ದೊರೆಯುತ್ತದೆ ಎಂದು ನಂಬಿದ್ದಾರೆ. ಸಂತೆಯಲ್ಲಿಯ ವ್ಯಾಪಾರಿಗಳ ಈ ರೀತಿಯ ನಂಬಿಕೆಯೇ ಜೋಗಪ್ಪ ಜೋಗಮ್ಮನವರ ಜೀವನ ನಿರ್ವಹಣೆಗೆ ನೇರವಾಗುತ್ತದೆ. ಈ ರೀತಿ ಬಂದ ಹಣ ಮತ್ತು ವಸ್ತುಗಳಿಂದ ಜೋಗಪ್ಪ ಮತ್ತು ಜೋಗಮ್ಮನವರು ಜೀವನ ಸಾಗಿಸುತ್ತಿದ್ದಾರೆ.

ಬಳ್ಳಾರಿ ಜಿಲ್ಲೆಯ ಇನ್ನು ಕೆಲವೊಂದು ಬುಡಕಟ್ಟು ಅಲೆಮಾರಿ ಮತ್ತು ಹಿಂದುಳಿದ ಸಮುದಾಯಗಳು ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ಸಂತೆಯಲ್ಲಿಯೇ ವ್ಯಾಪಾರ ಮಾಡುತ್ತಾರೆ. ಉದಾಹರಣೆಗೆ ಕಂಪ್ಲಿಯಲ್ಲಿಯ ಬುಡಕಟ್ಟು ಸಮುದಾಯವಾದ ಹಕ್ಕಿಪಿಕ್ಕಿಯವರು ತಮ್ಮ ಕುಲದೈವದ ಜಾತ್ರೆಗೆ ಬೇಕಾದಂತಹ ವಸ್ತುಗಳನ್ನು ಸಂತೆಯಲ್ಲಿಯೇ ಕೊಳ್ಳುತ್ತಾರೆ. ಬೇಡ ಮತ್ತು ಮೇದ ಬುಡಕಟ್ಟುಗಳು ಹಬ್ಬ ಮತ್ತು ಹರಿದಿನಗಳಲ್ಲಿ ಸಂತೆಯಲ್ಲಿಯೇ ವ್ಯಾಪಾರ ಮಾಡುತ್ತಾರೆ. ಈ ರೀತಿ ಸಂತೆಯ ವ್ಯಾಪಾರಕ್ಕಾಗಿ ಹಣವನ್ನು ಕೂಡಿಸಿಟ್ಟುಕೊಂಡಿರುತ್ತಾರೆ. ಒಟ್ಟಿನಲ್ಲಿ ಸಾಮಾನ್ಯ ದಿನಗಳ ಸಂತೆಗಿಂತ ಹಬ್ಬಹರಿದಿನಗಳಲ್ಲಿ ಮಾಡುವಂತ ಸಂತೆಯು ವಿಭಿನ್ನವಾಗಿ ಮತ್ತು ಹೆಚ್ಚು ವಸ್ತುಗಳನ್ನು ಖರೀದಿಸುತ್ತಾರೆ. ಹಬ್ಬ ಹರಿದಿನಗಳ ಸಂತೆಯಲ್ಲಿ ವ್ಯಾಪಾರ ಮಾಡುವುದಕ್ಕೆ ಹೆಚ್ಚಾಗಿ ಗಂಡಸರೆ ಹೋಗುತ್ತಾರೆ. ಇದೇ ರೀತಿ ಬುಡಕಟ್ಟು ಸಮುದಾಯಗಳು ಹೊರತಾಗಿಲ್ಲ.

### ೪:೪ ಸಂತೆಯಲ್ಲಿ ಬುಡಕಟ್ಟು ಮನರಂಜಕರು

ಸಂತೆಯಲ್ಲಿ ಕೇವಲ ವ್ಯಾಪಾರ ವಹಿವಾಟು ಮಾತ್ರವಲ್ಲದೇ ಮನರಂಜನೆಯನ್ನು ನೀಡುವವರು ಇರುತ್ತಾರೆ. ಸಂತೆಗೆ ಬಂದ ಜನರಿಗೆ ಆಟ, ಜಾದು ಮುಂತಾದವುಗಳನ್ನು ತೋರಿಸುವುದರ ಮೂಲಕ ಅವರಿಗೆ ಮನರಂಜನೆಯನ್ನು ನೀಡಿ ಆ ಮೂಲಕ ಹಣವನ್ನು ಗಳಿಸಿ ಜೀವನ ನಡೆಸುತ್ತಾರೆ. ಈ ರೀತಿ ಮಾಡುವವರಲ್ಲಿ ಬುಡಕಟ್ಟುಗಳು ಇದ್ದಾರೆ. ಡೊಂಬರು, ಸುಡುಗಾಡು ಸಿದ್ಧರು, ಹಾವಾಡಿಗರು, ಕರಡಿ ಕುಣಿಸುವವರು, ಹಗಲುವೇಷಗಾರರು ಮುಂತಾದ ಬುಡಕಟ್ಟು ಹಾಗೂ ಅಲೆಮಾರಿ ಸಮುದಾಯದವರು ಮನರಂಜನೆ ನೀಡುವುದರ ಮೂಲಕ ಸಂಪಾದನೆಯಲ್ಲಿ ತೊಡಗಿವೆ. ಸಂತೆಯಲ್ಲಿ ಮನರಂಜನೆ ನೀಡುವುದು ಪ್ರಾಚೀನ ಕಾಲದಿಂದಲೂ ನಡೆದುಬಂದಿದೆ. ಆದರೆ ಈಗ ಇದು ಕಡಿಮೆಯಾಗುತ್ತಿದೆ.

### ೪:೪:೧ ಡೊಂಬರ ಸಮುದಾಯ

**೪:೪:೧:೧ ಪರಿಚಯ :** "ಡೊಂಬರು ತಮ್ಮ ಕಸರತ್ತು ಪ್ರದರ್ಶನವನ್ನು ಮಾಡುತ್ತಾ ಊರಿಂದ ಊರಿಗೆ ಅಲೆಯುವ ಅಲೆಮಾರಿ ಸಮುದಾಯವಾಗಿದೆ."[೨೦] "ಡೊಂಬಿಗೆ ನೆಲೆ ಇಲ್ಲ, ಡಂಬಿಗೆ ಬೆಲೆ ಇಲ್ಲ."[೨೧] ಈ ಗಾದೆಯಿಂದ ಡೊಂಬರಿಗೆ ಸ್ಥಿರವಾದ ನೆಲೆ ಇರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಅಲ್ಲದೇ ವಲಸೆ ಜೀವನವನ್ನು ಸೂಚಿಸುತ್ತದೆ. ೧೯೯೧ರ ಜನಣಗತಿಯ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ೧,೩೪೩ ಜನ ಡೊಂಬರಿದ್ದರು. ಈಗ ಇವರ ಜನಸಂಖ್ಯೆ ಹೆಚ್ಚಾಗಿದೆ. ಇವರು ಅವಲಂಬಿಸಿರುವ ಕಸುಬು ದೈಹಿಕ ಕಸರತ್ತು ಮತ್ತು ಚಮತ್ಕಾರ ಆಟಗಳ ಪ್ರದರ್ಶನ. ಈ ಕಾರಣಕ್ಕೆ ಇವರು ಅನಿವಾರ್ಯವಾಗಿ ವಲಸೆ ಬದುಕನ್ನು ಒಪ್ಪಿಕೊಳ್ಳಬೇಕಾಯಿತು. ಇವರು ಜನರ ಮನರಂಜಕರಾಗಿದ್ದರು. ಆದರೆ ಮನರಂಜನೆಗೆ ಬೇರೆಯದೇ ರೀತಿಯ ಮಾರ್ಗವನ್ನು ಹುಟ್ಟಿಕೊಂಡಾಗ ಡೊಂಬರು ಬೇಡವಾದರು. ಆಗ ಇವರು ಅನಿವಾರ್ಯವಾಗಿ

ಬೇರೊಂದು ಕಸುಬನ್ನು ರೂಢಿಸಿಕೊಳ್ಳಬೇಕಾಯಿತು. ಅಲೆಮಾರಿಯಾಗಿ ಬದುಕುವುದನ್ನು ನಿಲ್ಲಿಸಿ ಒಂದೆಡೆ ನೆಲೆ ನಿಂತರು. ಕರ್ನಾಟಕದಲ್ಲಿ ಇವರು ಕೋಲಾರ, ತುಮಕೂರು, ಶಿವಮೊಗ್ಗ, ದಾವಣಗೆರೆ, ಬೆಳಗಾವಿ, ಬಿಜಾಪುರ, ಗುಲ್ಬರ್ಗ ಜಿಲ್ಲೆಗಳಲ್ಲಿ ಖಾಯಂ ಆಗಿ ನೆಲೆಸಿದ್ದಾರೆ. ಜೊತೆಗೆ ಈ ಕಸುಬನ್ನೇ ಮುಂದುವರೆಸುತ್ತಾ ಅಲೆಮಾರಿ ಬದುಕು ಸಾಗಿಸುತ್ತಿರುವ ಜನರು ಶೇ. ೧೦ರಷ್ಟು ಇದ್ದಾರೆ. ಈ ದೊಂಬರಾಟವು ಫ್ರಾನ್ಸ್ವಾಸ್ ಬೆರ್ನ್ಸೇ ಎಂಬ ವಿದೇಶಿಯ ಪ್ರವಾಸಿಯ ಲೇಖನದಲ್ಲಿ ಔರಂಗಜೇಬನ ಕಾಲದ ಸಂತೆಯಲ್ಲಿ ದೊಂಬರಾಟ ನಡೆಯುತ್ತಿತ್ತು[೨೨] ಎಂದು ಹೇಳಿದ್ದಾನೆ. ಆದ್ದರಿಂದ ದೊಂಬರಾಟವು ತುಂಬಾ ಪ್ರಾಚೀನವಾದುದಾಗಿದೆ.

**೪:೪:೧:೨ ಸಂತೆಯಲ್ಲಿ ದೊಂಬರಾಟ :** ಬಳ್ಳಾರಿ ಜಿಲ್ಲೆಯಲ್ಲಿ ಬಹಳಷ್ಟು ಕುಟುಂಬಗಳು ಇರದಿದ್ದರೂ, ಬೇರೆ ಜಿಲ್ಲೆಗಳಿಂದ ಡೊಂಬರು ಬಂದು ತಮ್ಮ ಕಲೆಯಾದ ದೈವಿಕ ಕಸರತ್ತುಗಳ ಪ್ರದರ್ಶನವನ್ನು ಸಂತೆಯಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿ ಮತ್ತು ಶಾಲೆಗಳಲ್ಲಿ ತೋರಿಸುತ್ತಾರೆ. ಆದರೆ ಸಂತೆಗಳಲ್ಲೇ ಹೆಚ್ಚಾಗಿ ಪ್ರದರ್ಶನ ಮಾಡುತ್ತಾ, ಸಂತೆಯಲ್ಲಿಯೇ ತಮ್ಮ ಬದುಕನ್ನು ಕಂಡುಕೊಂಡಿದ್ದಾರೆ. ಸಂತೆಯು ನಿಶ್ಚಿತವಾದ ದಿನ ನಡೆಯುವುದರಿಂದ ಹಾಗೂ ಸಂತೆಯಲ್ಲಿ ಹೆಚ್ಚು ಜನರು ಕೂಡುವುದರಿಂದ ಹೆಚ್ಚು ಆದಾಯವನ್ನು ತಮ್ಮ ಪ್ರದರ್ಶನದಿಂದ ಪಡೆದುಕೊಳ್ಳುತ್ತಾರೆ. ಡೊಂಬರು ಮಾಡುವಂತ ಪ್ರದರ್ಶನವನ್ನು ಜಾದು, ಕೈಚಳಕ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಸಂತೆಯಲ್ಲಿ ದೊಂಬರು ಹಾಕುವಂತ ಪ್ರದರ್ಶನವೆಂದರೆ ಸೈಕಲ್ ತಿರಿಗಿಸುವುದು, ಹಗ್ಗದ ಮೇಲೆ ನಡೆಯುವುದು, ಬಾಟಲ್ ಮೇಲೆ ಬಾಯಿ ಇಟ್ಟು ಕಾಲುಗಳನ್ನು ಮೇಲೆ ಮಾಡುವುದು, ಕಬ್ಬಿಣದ ಬಳೆಗಳಲ್ಲಿ ನುಸುಳುವುದು, ಜೋಕರ್‌ವೇಷ ತೊಡುವುದು, ಬೆಂಕಿಯನ್ನು ಕೈಗಚ್ಚಿಕೊಳ್ಳುವುದು, ಕೋಳಿ ತತ್ತಿ ಕಿವಿಹಿಂದಕ್ಕೆ ಅಂಟಿಸುವುದು, ದೇಹಮಣಿಸಿ ಕಣ್ಣಿನ ರೆಪ್ಪೆಯಿಂದ ನೆಲದ ಮೇಲಿರುವ ಸೂಜಿ ತೆಗೆಯುವುದು, ಮೈ ಜುಮ್ಮೆನ್ನಿಸುವ ರೋಮಾಂಚನಕಾರಿ ಪ್ರದರ್ಶನವನ್ನು ಕೊಡುತ್ತಾರೆ. ಇವರು ಈ ರೀತಿ ಆಟ ಪ್ರದರ್ಶನ ಮಾಡುವಾಗ ಡೊಂಬ ಹೆಂಗಸು ಡೋಲು ಬಾರಿಸಿದರೆ, ಪುರುಷರು ಪ್ರದರ್ಶನ ನೀಡುತ್ತಾರೆ. ಅಂತೆಯೇ ಮಕ್ಕಳು ಭಿಕ್ಷೆಯ ಹಣ ಸಂಗ್ರಹಿಸುತ್ತಾರೆ. ಈ ಎಲ್ಲಾ ಕಸರತ್ತುಗಳನ್ನು ಸಂತೆಯಲ್ಲಿ ಮಾತ್ರವಲ್ಲದೇ ಬೀದಿ ಬದಿಗಳಲ್ಲೂ ಪ್ರದರ್ಶನ ನೀಡುತ್ತಾರೆ. ಆದರೆ ಸಂತೆಗೆ ಅಧಿಕ ಜನ ಬರುವುದರಿಂದ ಇವರ ಆದಾಯವೂ ಸಹ ಹೆಚ್ಚಾಗಿರುತ್ತದೆ. ಆದ್ದರಿಂದ ಡೊಂಬರು ಸಂತೆಯಲ್ಲಿಯೇ ತಮ್ಮ ಪ್ರದರ್ಶನವನ್ನು ತೋರಿಸಲು ಹೆಚ್ಚು ಇಷ್ಟಪಡುತ್ತಾರೆ. ಕೇವಲ ಒಂದು ಸಂತೆಯಲ್ಲಿ ಮಾತ್ರ ತಮ್ಮ ಕಸರತ್ತು ಪ್ರದರ್ಶಿಸದೆ ದಿನದಿಂದ ದಿನಕ್ಕೆ ಬೇರೆ ಬೇರೆ ಹತ್ತು ಹಲವಾರು ಸಂತೆಗಳನ್ನು ತಿರುಗಾಡಿ ತಮ್ಮ ಪ್ರದರ್ಶನ ನೀಡುತ್ತಾರೆ. ಒಟ್ಟಿನಲ್ಲಿ ಸಂತೆಯು ಇವರಿಗೆ ಅಧಿಕ ಆದಾಯವನ್ನು ತಂದುಕೊಡುವ ಕೇಂದ್ರವಾಗಿದೆ.

### ೪:೪:೨ ಹಗಲುವೇಷಗಾರರು

**೪:೪:೨:೧ ಪರಿಚಯ :** ಹಗಲುವೇಷಗಾರರ ಹೆಸರೇ ಸೂಚಿಸುವಂತೆ ಇವರು ವೇಷ ತೊಟ್ಟು ಊರೂರು ಅಲೆದು ಪ್ರದರ್ಶನ ನೀಡುತ್ತಾ ಜನರಿಗೆ ಮನರಂಜನೆ ನೀಡುವವರಾಗಿದ್ದಾರೆ. ಇವರು ಅರೆ ಅಲೆಮಾರಿಗಳು.

ಆದರೆ ಇಂದು ಒಂದು ಕಡೆ ನೆಲೆ ನಿಂತು ಜೀವನ ಸಾಗಿಸುತ್ತಿದ್ದಾರೆ. ಕರ್ನಾಟಕದಲ್ಲಿ ಕೊಪ್ಪಳ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ತುಮಕೂರು, ಕೋಲಾರ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.[೨೩] ೧೯೯೧ರ ಜನಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ೧೮,೫೯೫ ಜನಸಂಖ್ಯೆ ಇವರದ್ದಿದೆ. ಹಗಲು ವೇಷಗಾರರು ಹೆಚ್ಚಾಗಿ ಪೌರಾಣಿಕ ಪಾತ್ರಗಳನ್ನು ಕಟ್ಟಿ ಪ್ರದರ್ಶನ ಮಾಡುತ್ತಾರೆ.[೨೪] ಇವರು ವೇಷಗಳನ್ನು ತೊಟ್ಟಾಗ, ಪ್ರದರ್ಶನ ಮಾಡುವಾಗ ಅನೇಕ ಸಂಗೀತ ವಾದ್ಯಗಳನ್ನು ಬಳಸುತ್ತಾರೆ. ಇವರಲ್ಲಿ ಪ್ರತಿಯೊಬ್ಬರಿಗೂ ಹಾಡಲು ಬರುತ್ತದೆ. ತಂಬೂರಿ, ಬುಡಿಗೆ, ಗಗ್ಗರ, ಹಾರ್ಮೋನಿಯಂ ಹಾಗೂ ತಬಲ ಮುಂತಾದ ಸಂಗೀತ ವಾದ್ಯದ ಉಪಕರಣವನ್ನು ಬಳಸುತ್ತಾರೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿಯೂ ಕಂಡುಬರುತ್ತಾರೆ. ಇಲ್ಲಿ ಕಂಡುಬರುವ ಬಹಳಷ್ಟು ಹಗಲುವೇಷಗಾರರು ತಮ್ಮ ವೃತ್ತಿಯನ್ನು ತೊರೆದು, ಕೃಷಿ ಮತ್ತು ಕೈಗಾರಿಕೆಗಳಲ್ಲಿ ಕೂಲಿಕಾರ್ಮಿಕರಾಗಿ ಬದುಕು ನಡೆಸುತ್ತಿದ್ದಾರೆ. ಆದರೂ ಸಹ ಇನ್ನುಳಿದ ಹಗಲು ವೇಷಗಾರರು ತಮ್ಮ ವೃತ್ತಿಯನ್ನೇ ಸಂತೆ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಮುಂದುವರೆಸಿದ್ದಾರೆ.

**೪:೪:೨:೨ ಸಂತೆ ಮತ್ತು ಹಗಲುವೇಷಗಾರರ ಪ್ರದರ್ಶನ ಕಲೆ :** ಹಗಲುವೇಷಗಾರರು ಒಮ್ಮೆ ಮುಖಕ್ಕೆ ಬಣ್ಣ ಬಳಿದರೆ ಆ ಬಣ್ಣವನ್ನು ಐದು, ಏಳು, ಒಂಬತ್ತು ದಿನಗಳವರೆಗೆ ಅಳಿಸಿಹಾಕುವುದಿಲ್ಲ. ಆದ್ದರಿಂದ ಇವರು ದಿನಾಲು ಒಂದಿಲ್ಲ ಒಂದು ಸ್ಥಳದಲ್ಲಿ ತಮ್ಮ ನಾಟಕ ಪ್ರದರ್ಶನವನ್ನು ಮಾಡುತ್ತಲೇ ಇರುತ್ತಾರೆ. ಅಂತೆಯೇ ಸಂತೆಯಲ್ಲಿಯೂ ಕೂಡಾ ತಮ್ಮ ಕಲೆಯನ್ನು ಪ್ರದರ್ಶನವನ್ನು ಮಾಡುತ್ತಿದ್ದಾರೆ. ಸಂತೆಗೆ ಸುತ್ತಮುತ್ತಲಿನ ಗ್ರಾಮೀಣ ಪ್ರದೇಶದ ಜನ ಹೆಚ್ಚಾಗಿ ಇವರ ಕಲೆಯನ್ನು ಇಷ್ಟಪಡುವುದರಿಂದ ಸಂತೆಯು ಈ ಇಬ್ಬರನ್ನು ಮುಖಾಮುಖಿಯಾಗಿಸುವ ಸೂಕ್ತವಾದ ವೇದಿಕೆಯಾಗಿದೆ. ಅಲ್ಲದೆ ಸಂತೆಯಲ್ಲಿ ಅಧಿಕ ಜನ ಬರುವುದರಿಂದ ಹಗಲುವೇಷಗಾರರಿಗೆ ಹೆಚ್ಚಿನ ಆದಾಯವಿದೆ. ಸಂತೆಯಲ್ಲಿ ಇವರು ಪ್ರದರ್ಶನವೊಂದಕ್ಕೆ ೧೦೦ರಿಂದ ೨೦೦ ರೂಪಾಯಿಗಳವರೆಗೆ ಆದಾಯ ದೊರೆಯುತ್ತದೆ. ಇದೇ ಇವರ ಜೀವನ ನಿರ್ವಹಣೆಗೆ ಆಸರೆಯಾಗಿದೆ. ಸಂತೆಯನ್ನು ಬಿಟ್ಟು ಬೇರೆ ಪ್ರದೇಶಗಳಲ್ಲಿ ಪ್ರದರ್ಶನ ಮಾಡುವಾಗ ಇಷ್ಟೊಂದು ಹಣ ಗಳಿಸಲು ಸಾಧ್ಯವಾಗುವುದಿಲ್ಲ. ಇವರು ಸಂತೆಯಲ್ಲಿ ತಮ್ಮ ಕಲೆಯನ್ನು ಪ್ರದರ್ಶನ ಮಾಡುವಾಗ ಸುಮಾರು ೪೦ಕ್ಕೂ ಅಧಿಕ ವಿವಿಧ ವೇಷಗಳನ್ನು ಹಾಕುತ್ತಾರೆ. ಇವರು ಹಾಕುವ ವೇಷಗಳಲ್ಲಿ ಮುಖ್ಯವಾದವು. ಮೋಹಿನಿ ಭಸ್ಮಾಸುರ, ಭೀಮ, ಆಂಜನೇಯ, ರಾಮ, ಸೀತೆ, ಲಕ್ಷ್ಮಣ, ಸನ್ಯಾಸಿ ಇನ್ನೂ ಮುಂತಾದವುಗಳು.

ಸಂತೆಗಳು ನಡೆಯುವ ಹಿಂದಿನ ದಿನವೇ ಇವರು ಸಂತೆಯಲ್ಲಿ ಪ್ರದರ್ಶಿಸಿದಬೇಕಾದ ಪಾತ್ರಗಳ ಬಗ್ಗೆ ಅಭ್ಯಾಸವನ್ನು ನಡೆಸಿ ಮುಖಕ್ಕೆ ಬಣ್ಣವನ್ನು ಹಾಕಿಕೊಳ್ಳುತಾರೆ. ಇವರು ಸಂತೆಯಲ್ಲಿ ಪ್ರದರ್ಶನವನ್ನು ಮಾಡುವುದು ಹಗಲಿನಲ್ಲಿ ಮಾತ್ರ. ಆದ್ದರಿಂದ ಇವರನ್ನು ಹಗಲುವೇಷಗಾರರು ಎಂದು ಕರೆಯುತ್ತಾರೆ. ಒಟ್ಟಿನಲ್ಲಿ ಸಂತೆಯು ಇವರ ಉದರ ಪೋಷಣೆಗೆ ಅವಕಾಶ ಕಲ್ಪಿಸಿಕೊಟ್ಟಿದೆ.

### ೪:೪:೩ ಸುಡಗಾಡು ಸಿದ್ಧರು

**೪:೪:೩:೧ ಪರಿಚಯ :** ಆಂಧ್ರ ಮೂಲದವರೆನ್ನಲಾಗುವ ಅಲೆಮಾರಿ ಗುಂಪಿನ ಸುಡುಗಾಡು ಸಿದ್ಧರು ಹೊಟ್ಟೆಪಾಡಿಗಾಗಿ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ವ್ಯಾಪಿಸಿದ್ದಾರೆ. ಅವರು ಹೆಚ್ಚಾಗಿ ವಿಜಾಪುರ, ಬಳ್ಳಾರಿ, ಗುಲಬರ್ಗಾ, ಶಿವಮೊಗ್ಗ, ಹಾಸನ, ಚಿಕ್ಕಮಗಳೂರು ಹಾಗೂ ಧಾರವಾಡ ಜಿಲ್ಲೆಗಳಲ್ಲಿ ವಾಸವಾಗಿರುವುದು ತಿಳಿದುಬರುತ್ತದೆ. ಕರ್ನಾಟಕದುದ್ದಕ್ಕೂ ವ್ಯಾಪಿಸಿರುವ ಅವರ ಬದುಕು, ಜೀವನ ವಿಧಾನ, ಸಂಪ್ರದಾಯ, ಆಚರಣೆಗಳು ಒಂದೇ ಬಗೆಯಾಗಿವೆ. ಸಾಮಾನ್ಯವಾಗಿ ಊರ ಹೊರಗೆ ತಮ್ಮದೇ ಆದ ಜನ ಸಮುದಾಯದಲ್ಲಿ ಈ ಜನ ವಾಸಿಸುತ್ತಾರೆ.[೨೫] ಕಳೆದ ಹಲವು ದಶಕಗಳಿಂದಲೂ ಊರು ಅಲೆಯುವುದರಲ್ಲಿಯೇ ಕಾಲ ಕಳೆದು, ಸ್ವಂತ ಸೂರಿಲ್ಲದೆ, ತಾತ್ಕಾಲಿಕ ನೆಲೆ ಇದ್ದರೂ, ಊರಿನ ಸುಡುಗಾಡಿನ ಸಮೀಪ ನೆಲೆಸಿರುವ ಸುಡುಗಾಡು ಸಿದ್ಧರ ಬದುಕು ಅತಂತ್ರವಾಗಿದೆ.[೨೬] ಸುಡುಗಾಡು ಸಿದ್ಧರು ಎಂಬ ಹೆಸರು ಬಸವಣ್ಣರ ಕಾಲದಲ್ಲಿ ಬಂದಿದ್ದೆಂಬ ಪ್ರತೀತಿ ಇದೆ. ವಿಜಯ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡಂತೆ ಇವರ ಜನಸಂಖ್ಯೆ ಐದು ಲಕ್ಷ.[೨೭] ಸುಡುಗಾಡು ಸಿದ್ಧರ ಮುಖ್ಯ ಕಸುಬುಗಳು ಜ್ಯೋತಿಷ್ಯ ಹೇಳುವುದು ನಾಟಿ ಔಷಧಿ ಕೊಡುವುದು, ಕೈಚಳಕದ ಆಟಗಳನ್ನು ಪ್ರದರ್ಶಿಸುವುದು. ಇವರು ಕೈಚಳಕದ ಆಟಕ್ಕೆ ಪ್ರಸಿದ್ಧರು. ಇವರು ಸಂತೆಗಳಲ್ಲಿ ಮತ್ತು ಸಾರ್ವಜನಿಕ ಪ್ರದೇಶಗಳಲ್ಲಿ ತಮ್ಮ ಪ್ರದರ್ಶನವನ್ನು ಮಾಡುತ್ತಿರುತ್ತಾರೆ.

**೪:೪:೩:೨ ಸುಡುಗಾಡು ಸಿದ್ಧರು ಸಂತೆಗಳಲ್ಲಿ ತೋರುವ ಕೈ ಚಳಕದ ಆಟದ ಪ್ರದರ್ಶನ :** ಸುಡುಗಾಡು ಸಿದ್ಧರು ಸಂತೆಗಳಲ್ಲಿ ಮತ್ತು ಜನ ಸೇರುವ ಸ್ಥಳದಲ್ಲಿ ತಮ್ಮ ಕಲೆಯನ್ನು ಪ್ರದರ್ಶಿಸುತ್ತಾರೆ. ಸುಡುಗಾಡು ಸಿದ್ಧರು ತಮ್ಮ ಕೈಚಳಕದ ಆಟಕ್ಕೆ 'ಲಾಗಗಳು ಹಾಕು' ಎನ್ನುತ್ತಾರೆ.[೨೮] ಜನಕ್ಕೆ ಮನರಂಜನೆಯನ್ನು ಕೊಡುವುದೇ ಆ ಆಟದ ಮುಖ್ಯ ಉದ್ದೇಶ. ಸುಡುಗಾಡು ಸಿದ್ಧರು ಸಂತೆಗೆ ತಮ್ಮ ಆಟವನ್ನು ಪ್ರದರ್ಶಿಸಲು ಬರುವಾಗ ಪೂರ್ಣ ವೇಷಧಾರಿಗಳಾಗಿ ಹೆಗಲಿಗೆ ಉದ್ದನೆಯ ಜೋಳಿಗೆಯನ್ನು ತೂಗುಬಿಟ್ಟು, ಹಣೆಗೆ ವಿಭೂತಿ, ಕುಂಕುಮ, ತಲೆಗೆ ಕಿರೀಟ, ತುರಾಯಿ, ಕೊರಳಲ್ಲಿ ರುದ್ರಾಕ್ಷಿ ಮಾಲೆ, ಮೈ ತುಂಬಾ ಬಣ್ಣ ಬಣ್ಣದ ಬಟ್ಟೆ ತೊಟ್ಟು ಬರುತ್ತಾರೆ. ಸಂತೆಯ ಒಂದು ಸ್ಥಳದಲ್ಲಿ ತಮ್ಮ ಆರಾಧ್ಯ ದೈವ ಮಲ್ಲಿಕಾರ್ಜುನನನ್ನು ನೆನೆದು ತಾವು ತಂದಿದ್ದ ಜೋಳಿಗೆಯಿಂದ ಒಂದೊಂದೇ ವಸ್ತುಗಳನ್ನು ತೆಗೆದು ಮಾಯ ಮಾಡಿ ಬೇರೊಂದು ವಸ್ತುಗಳನ್ನು ತೋರಿಸುತ್ತಿರುತ್ತಾರೆ. ಇದನ್ನು ಸಂತೆಗೆ ಬಂದ ಜನ ಸಮೂಹದ ಎದುರಿಗೆ ನಡೆಸುತ್ತಾರೆ. ಇವರ ಕೈಚಳಕ ಮತ್ತು ವಾಕ್ಚಾತುರ್ಯದಿಂದ ಸಂತೆಗೆ ಬಂದ ಜನರನ್ನು ಬೆರಗುಗೊಳಿಸುವಂತೆ ಮಾಡುತ್ತಾರೆ. ಇವರ ವಾಕ್ಚಾತುರ್ಯದಿಂದ ಮತ್ತು ನಡವಳಿಕೆಯಿಂದ ಸಂತೆಗೆ ಬಂದ ಜನರಿಗೆ ತಮಾಷೆ ಎನಿಸಿದರೂ ಸಹ ಇವರ ಕೈಚಳಕವನ್ನು ಆಶ್ಚರ್ಯಚಕಿತರಾಗಿ ನೋಡುತ್ತಾರೆ. ಇವರ ಪ್ರದರ್ಶನ ಮುಗಿದ ಬಳಿಕ ಸಂತೆಗೆ ಬಂದಂತ ಜನರು ಹಣವನ್ನು ಕೊಡುತ್ತಾರೆ. ಈ ಹಣದಿಂದಲೆ ಇವರು ಬದುಕು ನಡೆಸುತ್ತಾರೆ. ಈ ರೀತಿಯ ಪ್ರದರ್ಶನದಿಂದ ಇವರಿಗೆ ಕನಿಷ್ಟ ಪಕ್ಷ ೫೦ ರೂಪಾಯಿಯಿಂದ ೧೦೦ ರೂಪಾಯಿಗಳವರೆಗೆ ಆದಾಯ ದೊರೆಯುತ್ತದೆ. ಒಟ್ಟಿನಲ್ಲಿ ಸಂತೆಗೆ ಬಂದ ಜನರಿಗೆ ಮನರಂಜನೆ ನೀಡುತ್ತಾ ಬಂದ ಹಣದಿಂದ ಜೀವನ ಸಾಗಿಸುತ್ತಾರೆ.

### ೪:೪:೪ ಕರಡಿ ಕುಣಿಸುವವರು ಮತ್ತು ಹಾವಾಡಿಗರು

**೪:೪:೪:೧ ಪರಿಚಯ:** ಕರಡಿ ಕುಣಿಸುವವರು ಹೆಚ್ಚಾಗಿ ಗೊರವಯ್ಯ ಮತ್ತು ಮೊಂಡ ಸಮುದಾಯದವರು. ಇದೇ ರೀತಿ ಹಾವಾಡಿಗರು ಹೆಚ್ಚಾಗಿ ಕೊರಚರು ಮತ್ತು ಮುಸ್ಲಿಂ ಜನವರ್ಗದವರಾಗಿದ್ದಾರೆ. ಮೇಲೆ ತಿಳಿಸಿದ ಸಮುದಾಯಗಳು ಕರ್ನಾಟಕದಾದ್ಯಂತ ಕಂಡುಬರುವ ಸಮುದಾಯಗಳು. ಅದರಲ್ಲಿ ಗೊರವಯ್ಯ, ಮೊಂಡ, ಕೊರಚ ಸಮುದಾಯಗಳು ಅಲೆಮಾರಿ ಸಮುದಾಯಗಳಾಗಿವೆ. ಇವರು ತಮ್ಮ ಪ್ರದರ್ಶನಗಳನ್ನು ಊರಿಂದ ಊರಿಗೆ ತೋರಿಸುತ್ತಾ ಅಲೆಯುವವರಾಗಿದ್ದಾರೆ. ಆದರೆ ಪ್ರಸ್ತುತ ದಿನಮಾನಗಳಲ್ಲಿ "ವನ್ಯಜೀವಿ ಸಂರಕ್ಷಣಾ ಕಾಯ್ದೆ" ಜಾರಿಗೆ ಬಂದ ಮೇಲೆ ತಮ್ಮ ವೃತಿಯನ್ನು ಬಿಟ್ಟು ಬೇರೆ ತೆರನಾದ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಆದರೂ ಸಹಿತ ಕಾನೂನಿನ ಕಣ್ಣು ತಪ್ಪಿಸಿ ಸಂತೆಗಳಲ್ಲಿ ಕರಡಿ ಕುಣಿಸುವ, ಹಾವಾಡಿಸುವ ವೃತ್ತಿಯನ್ನು ಮುಂದುವರೆಸಿದ್ದಾರೆ.

**೪:೪:೪:೨ ಕರಡಿ ಕುಣಿಸುವ ಹಾಗೂ ಹಾವಾಡಿಸುವ ಮನರಂಜನಾ ಪ್ರದರ್ಶನ ಕಲೆಗಳು :** ಹಾವಾಡಿಗರು ವಿಷ ಸರ್ಪಗಳನ್ನು, ಅದರಲ್ಲೂ ನಾಗರಹಾವುಗಳನ್ನು ಹಿಡಿದು ತಂದು, ಅದರ ವಿಷದ ಹಲ್ಲುಗಳನ್ನು ಕಿತ್ತುಹಾಕಿ, ಈ ಹಾವುಗಳನ್ನು ಸಂತೆಯಲ್ಲಿ ಪ್ರದರ್ಶನಕ್ಕೆ ಇಟ್ಟು ಆಟವಾಡಿಸುತ್ತಾರೆ. ಹಾವಾಡಿಸುವಾಗ ಇವರ ಕೈಯಲ್ಲಿ ಯಾವಾಗಲೂ "ಪುಂಗಿ" ಎಂಬ ವಾದ್ಯವಿರುತ್ತದೆ. ಕಾರಣ ಪುಂಗಿಯಿಂದ ಹಾವಾಡಿಸುವುದು ಮಾತ್ರವಲ್ಲದೆ ಸಂತೆಗೆ ಬಂದ ಜನರ ಗಮನವನ್ನು ತಮ್ಮತ್ತ ಸೆಳೆಯುವುದೇ ಆಗಿದೆ. ಇವರು ಕೊಡುವ ಪ್ರದರ್ಶನವನ್ನು ಸಂತೆಗೆ ಬಂದ ಜನ ನೋಡಿ ತೃಪ್ತಿಪಟ್ಟು ಹಣ ಕೊಡುತ್ತಾರೆ. ಹೀಗೆ ಸಂಗ್ರಹಿಸಿದ ಹಣದಿಂದ ತಮ್ಮ ಜೀವನ ಸಾಗಿಸುತ್ತಿದ್ದಾರೆ. ಇದೇ ರೀತಿ ಕರಡಿ ಕುಣಿಸುವವರು ಸಹ ಕಾಡಿನಿಂದ ಕರಡಿಗಳನ್ನು ಹಿಡಿದು ತಂದು ಮಾತು ಕಲಿಸಿ ಸಂತೆಯಲ್ಲಿ ಪ್ರದರ್ಶನಕ್ಕೆ ಇಡುತ್ತಾರೆ. ಅಲ್ಲದೆ ಕರಡಿ ಕೂದಲನ್ನು ಮಾರುತ್ತಾರೆ. ಅಲ್ಲದೆ ಚಿಕ್ಕಮಕ್ಕಳನ್ನು ಕರಡಿಯ ಮೇಲೆ ಕೂಡಿಸುತ್ತಾರೆ ಹಾಗೂ ತಾಯಿತ ಕಟ್ಟುತ್ತಾರೆ. ಹೀಗೆ ಬಂದ ಹಣದಿಂದ ತಮ್ಮ ಜೀವನ ಸಾಗಿಸುತ್ತಾರೆ. ಈ ಎಲ್ಲಾ ಕಾರಣದಿಂದ ಸಂತೆಯು ಇವರ ಬದುಕನ್ನು ನಡೆಸುವುದಕ್ಕೆ ಅತ್ಯವಶ್ಯಕವಾಗಿ ಬೇಕಾಗಿದೆ.

### ೪:೫ ಬುಡಕಟ್ಟು ಭಿಕ್ಷುಕರು

ಸಂತೆಯಲ್ಲಿ ವ್ಯಾಪಾರಗಾರರು, ಗ್ರಾಹಕರು, ಮನರಂಜನೆ ನೀಡುವವರ ಜೊತೆಗೆ ಭಿಕ್ಷಾಟನೆ ಮಾಡುವವರು ಸಹ ಇದ್ದಾರೆ. ಭಿಕ್ಷಾಟನೆ ಮಾಡುವವರಲ್ಲಿ ನಾಲ್ಕು ಪ್ರಕಾರಗಳಿವೆ. ಅವು ಅಂಗವಿಕಲ ಭಿಕ್ಷುಕರು, ಅಸಹಾಯಕ ಭಿಕ್ಷುಕರು, ಸಾಂಪ್ರದಾಯಿಕ ಭಿಕ್ಷುಕರು ಹಾಗೂ ಮೈಗಳ್ಳರು. ಅಂಗವಿಕಲರು ಮತ್ತು ಅಸಹಾಯಕ ಭಿಕ್ಷುಕರಿಗೆ ದುಡಿಯಲು ಶಕ್ತಿ ಇಲ್ಲದವರಾಗಿದ್ದರಿಂದ ಇವರ ಪೋಷಣೆಗೆ ಸುಲಭ ಉಪಾಯ ಭಿಕ್ಷೆ ಬೇಡುವುದಾಗಿದೆ. ಸಾಂಪ್ರದಾಯಿಕ ಭಿಕ್ಷಾಟನೆಯೂ ತಲತಲಾಂತರದಿಂದ ದೈವಕಾರ್ಯನಿಮಿತ್ತ ಸಂತೆಯಲ್ಲಿ ಮುಂದುವರೆದಿದೆ. ಆದರೆ ಮೈಗಳ್ಳರು ಮಾತ್ರ ಭಿಕ್ಷೆ ಬೇಡುವುದು ಅನಾರೋಗ್ಯಕರವಾದ

ಸಂಗತಿಯಾಗಿದೆ. ಆದರೆ ಕಾನೂನಿನ ಪ್ರಕಾರ ಭಿಕ್ಷೆ ಅಪರಾಧ. ಬುಡಕಟ್ಟು, ಅಲೆಮಾರಿ, ಅರೆ ಅಲೆಮಾರಿಗಳಂತ ಸಮುದಾಯಗಳಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಕೋಟ್ಯಂತರ ರೂಪಾಯಿಗಳನ್ನು ಖರ್ಚು ಮಾಡಿ ಹಲವಾರು ಯೋಜನೆಗಳನ್ನು ಜಾರಿಗೆ ತಂದು ಅವರ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ. ಆದ್ದರಿಂದ ಇವರು ಆ ಸೌಲಭ್ಯಗಳನ್ನು ಪಡೆದುಕೊಂಡು ಎಲ್ಲರಂತೆ ನೆಮ್ಮದಿ ಜೀವನ ಪಾಲಿಸಬೇಕೆಂಬುದು ಸರ್ಕಾರದ ಉದ್ದೇಶ. ಇದರಿಂದ ಭಿಕ್ಷೆ ಬೇಡುವವರ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತಿದೆ. ಆದರೂ ಸಹ ಭಾರತದಲ್ಲಿ ನಿರೀಕ್ಷೆಗೂ ಮೀರಿ ಭಿಕ್ಷುಕರು ಇದ್ದಾರೆ. ಇದರಲ್ಲಿ ಬುಡಕಟ್ಟು ಸಮುದಾಯದವರೇ ಹೆಚ್ಚು. ಇವರು ಸಂತೆಯಲ್ಲಿ ಭಿಕ್ಷೆ ಬೇಡುವ ಪರಿಯನ್ನು ಈ ಮುಂದಿನಂತೆ ತಿಳಿಯೋಣ.

**೪:೫:೧ ಸಂತೆಯಲ್ಲಿ ಬುಡಕಟ್ಟು ಧಾರ್ಮಿಕ ಆಚರಣಾ ಭಿಕ್ಷುಕರು**

ಸಂತೆಯಲ್ಲಿ ತಲ-ತಲಾಂತರಗಳಿಂದ ಧಾರ್ಮಿಕ ಆರಾಧಕರಾಗಿ ಭಿಕ್ಷೆ ಬೇಡುವ ಅನೇಕ ಬುಡಕಟ್ಟು ಹಾಗೂ ಅಲೆಮಾರಿ ಸಮುದಾಯಗಳು ಇವೆ. ಅವುಗಳೆಂದರೆ ಬೇಡ ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳಾದ ದುರುಗ-ಮುರುಗಿಯವರು, ಬುಡ-ಬುಡಕೆ, ಕಿನ್ನರಿಜೋಗಿ ಮುಂತಾದ ಸಮುದಾಯಗಳು ಸಂತೆಯಲ್ಲಿ ಸಾಂಪ್ರದಾಯಿಕವಾಗಿ ಧಾರ್ಮಿಕ ಆರಾಧಕ ಭಿಕ್ಷುಕರಾಗಿದ್ದಾರೆ. ಇವರು ದೇವರ ಸ್ಮರಣೆ ಮಾಡುತ್ತಾ ವಿಶೇಷ ವೇಷಭೂಷಣಗಳಿಂದ ಸಂತೆಗಳಲ್ಲಿ ಭಿಕ್ಷಾಟನೆ ಮಾಡುತ್ತಾರೆ. ಭಾರತವೂ ಸಕಲ ಧರ್ಮಗಳನ್ನು ಒಳಗೊಂಡಿರುವ ದೇಶವಾಗಿದೆ. ಈ ಎಲ್ಲಾ ಧರ್ಮದ ಕೆಲವು ಜನರು ಧರ್ಮದ ಪ್ರಚಾರದ ಹಿನ್ನೆಲೆಯಲ್ಲಿ ಇಂದು ಸಂತೆಯಲ್ಲಿ ಭಿಕ್ಷಾಟನೆಯಲ್ಲಿ ತೊಡಗಿದ್ದಾರೆ. ದುಡಿತವಿಲ್ಲದೇ ಕೇವಲ ಭಿಕ್ಷೆಯಿಂದಲೇ ಹಣ ಬರುವುದರಿಂದ ಈ ವೃತ್ತಿ ಇವರಿಗೆ ಅನುಕೂಲಕರವಾಗಿ ಪರಿಣಮಿಸಿದೆ.

೧. ಬೇಡ ಬುಡಕಟ್ಟಿನಿಂದ ಕವಲೊಡೆದವರಾದ ಮ್ಯಾಸಬೇಡರಲ್ಲಿ ಕೆಲವರು ಸಂತೆ ಮತ್ತು ಊರುಗಳಲ್ಲಿ ಧಾರ್ಮಿಕವಾಗಿ ಭಿಕ್ಷೆ ಬೇಡುತ್ತಾರೆ. ಮ್ಯಾಸಬೇಡರಲ್ಲಿ ಜೋಗಪ್ಪ ಮತ್ತು ಜೋಗಮ್ಮನವರು ಹೆಣ್ಣುದೇವರ ಆರಾಧಕರಾಗಿದ್ದು, ಈ ದೇವರ ಹೆಸರಿನಲ್ಲಿ ಸಂತೆಗಳಲ್ಲಿ ಭಿಕ್ಷೆ ಬೇಡುತ್ತಿದ್ದಾರೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ ಮತ್ತು ಕೂಡ್ಲಿಗಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇವರು ದೇವರ ಹೆಸರಲ್ಲಿ ಮಂಗಳವಾರ ಮತ್ತು ಶುಕ್ರವಾರ ಪೂಜೆಯನ್ನು ಮಾಡುತ್ತಾರೆ. ಈ ದಿನಗಳಲ್ಲಿ ಸುತ್ತಮುತ್ತಲಿನ ಪ್ರದೇಶದಲ್ಲಿ ನಡೆಯುವಂತ ಸಂತೆಗಳಿಗೆ ಹೋಗಿ ಭಿಕ್ಷೆ ಬೇಡುತ್ತಾರೆ. ಸಂತೆಯಲ್ಲಿ ಬೇಡಿದ ಭಿಕ್ಷೆಯಿಂದ ಬಂದ ಹಣದಲ್ಲಿ ಜೀವನ ಸಾಗಿಸುತ್ತಿದ್ದಾರೆ. ಇವರು ಸಂತೆಯಲ್ಲಿ ಭಿಕ್ಷೆ ಬೇಡುವಾಗ "ಉದೋ ಉದೋ" ಎನ್ನುತ್ತಾ ಭಿಕ್ಷೆ ಬೇಡುತ್ತಾರೆ. ಜೋಗಪ್ಪ ಮತ್ತು ಜೋಗಮ್ಮನವರು ಸಂತೆಯಲ್ಲಿ ಭಿಕ್ಷೆ ಬೇಡುವುದು ತಲ-ತಲಾಂತರಗಳಿಂದ ನಡೆದುಕೊಂಡುಬಂದ ಪದ್ಧತಿಯಾಗಿದೆ. ಇವರಿಗೆ ಭಿಕ್ಷೆ ನೀಡುವುದರಿಂದ ತಮ್ಮ ವ್ಯಾಪಾರವು ಅಧಿಕಗೊಳ್ಳುವುದು ಎಂಬ ನಂಬಿಕೆಯು ಸಂತೆಯ ವ್ಯಾಪಾರಗಾರರಲ್ಲಿ ಇದೆ. ಈ ಕಾರಣದಿಂದ ಜೋಗಪ್ಪ, ಜೋಗಮ್ಮನವರಿಗೆ ಭಿಕ್ಷೆಯನ್ನು ಸಂತೆಯ ವ್ಯಾಪಾರಿಗಳು ಕೇವಲ ಹಣವನ್ನು ಮಾತ್ರವಲ್ಲದೆ ತರಕಾರಿ, ಬಟ್ಟೆ, ಧಾನ್ಯ ಇನ್ನೂ

ಮುಂತಾದ ವಸ್ತುಗಳನ್ನು ಕೊಡುತ್ತಾರೆ. ಜೋಗಪ್ಪ ಮತ್ತು ಜೋಗಮ್ಮನವರು ಎಂದೂ ಸಹ ಬೇಯಿಸಿದ ಪದಾರ್ಥಗಳನ್ನು ಭಿಕ್ಷೆಯಾಗಿ ಪಡೆಯುವುದಿಲ್ಲ. ಈ ರೀತಿಯಾಗಿ ಸಂತೆಯಲ್ಲಿ ಭಿಕ್ಷೆಯಿಂದ ಬಂದ ಆದಾಯದಿಂದ ಇವರು ಜೀವನ ಸಾಗಿಸುತ್ತಾರೆ.

೨. ದುರುಗ-ಮುರುಗಿಯವರು ಅಲೆಮಾರಿ ಸಮುದಾಯವಾಗಿದ್ದು, ಇವರು ಇಂದು ಒಂದೆಡೆ ನೆಲೆನಿಂತು ಊರ ಹೊರಗಡೆಯ ಬಯಲಿನಲ್ಲಿಯೇ ಇವರ ವಾಸ.[೨೯] ೧೯೯೧ರ ಜನಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಇವರ ಜನಸಂಖ್ಯೆ ಕೇವಲ ೩ ಜನ. ಆದರೆ ಈಗ ೨೦,೦೦೦೦ ಕ್ಕೂ ಅಧಿಕ ಜನಸಂಖ್ಯೆ ಇವೆಯೆಂದು ತಿಳಿಯಲಾಗಿದೆ. ಇವರು "ಪೋತರಾಜ"ನ ವೇಷತೊಟ್ಟು, ಸಂತೆಯಲ್ಲಿ ಭಿಕ್ಷೆ ಬೇಡುತ್ತಾರೆ. ಇದು ಸಹ ಸಾಂಪ್ರದಾಯಿಕವಾದ ಆರಾಧನ ಭಿಕ್ಷಾಟನೆಯಾಗಿದೆ. ಸಾಮಾನ್ಯವಾಗಿ ಸಂತೆಯಲ್ಲಿ ಭಿಕ್ಷೆ ಬೇಡಲು ದುರುಗಮುರಗಿಯವರು ಕುಟುಂಬ ಸಮೇತವಾಗಿ ಹೋಗುತ್ತಾರೆ. ಪೋತರಾಜನ ವೇಷತೊಟ್ಟ, ದುರುಗಮುರಗಿಯ ಮಧ್ಯ ವಯಸ್ಕರು ಸಂತೆಯಲ್ಲಿ ಕಾಲಿಗೆ ಗೆಜ್ಜೆ ಕಟ್ಟಿ, ತಲೆಕೂದಲು ಬಿಚ್ಚಿಕೊಂಡು, ನಡುವಿಗೆ ಕೆಂಪು, ಹಳದಿ ಬಟ್ಟೆ ಸುತ್ತಿಕೊಂಡು, ಮುಖಕ್ಕೆ ಅರಿಶಿನ ಬಣ್ಣ ಕರೆದುಕೊಂಡು, ರಕ್ತ ಸೋರುವಂತೆ ರಟ್ಟೆಗೆ ಲಪ್ಪ ಹೊಡೆದುಕೊಂಡರೆ, ಅವನ ಹೆಂಡತಿಯು ಡೋಲನ್ನು ಬಾರಿಸುವುದರ ಜೊತೆಗೆ ತಲೆಯ ಮೇಲೆ ಬುಟ್ಟಿಯಲ್ಲಿ ದೇವಿ ವಿಗ್ರಹವನ್ನು ಇಟ್ಟುಕೊಂಡಿರುತ್ತಾಳೆ. ಇವರ ಮಕ್ಕಳು ಸಂತೆಗೆ ಬಂದ ಇವರನ್ನು ವೀಕ್ಷಿಸುವಂತ ಜನರಿಂದ ಹಣವನ್ನು ಪಡೆಯುತ್ತಾರೆ. ಈ ರೀತಿಯಲ್ಲಿ ತಮ್ಮ ಸುತ್ತಮುತ್ತಲಿನ ಸಂತೆಗಳಿಗೂ ಸಹ ಹೋಗಿ ಭಿಕ್ಷೆಯನ್ನು ಬೇಡುತ್ತಿರುತ್ತಾರೆ. ದುರ್ಗಮ್ಮ ಮತ್ತು ಮರ್ಗಮ್ಮ ಎಂಬ ಹೆಣ್ಣು ದೇವರು ಇವರ ಆರಾಧ್ಯ ದೈವಗಳಾಗಿವೆ. ಒಂದು ಕಾಲದಲ್ಲಿ ದುರ್ಗಾದೇವಿಯ ಪ್ರಚಾರಕ್ಕಿದ್ದ ಈ ಜನ ಈಗ ಕೇವಲ ಆ ದೇವಿಯ ಹೆಸರಿನ ಮೇಲೆ ಸಂತೆಯಲ್ಲಿ ಭಿಕ್ಷೆ ಬೇಡಿ ಹೊಟ್ಟೆ ಹೊರೆದುಕೊಳ್ಳುವ ತತ್ವಕ್ಕೆ ಬಂದಿದ್ದಾರೆ. ಸಂತೆಯಲ್ಲಿ ಭಿಕ್ಷಾಟನೆಯಿಂದ ಬಂದಂತಹ ಹಣದಿಂದಲೇ ಜೀವನ ಸಾಗಿಸುತ್ತಾರೆ.

೩. ಬುಡುಬುಡಿಕೆಯವರು ಅಲೆಮಾರಿ ಸಮುದಾಯವಾಗಿದ್ದು ಸಂತೆಗಳಲ್ಲಿ ಸಾಂಪ್ರದಾಯಿಕ ಆಚರಣೆಗಾಗಿಯೇ ಭಿಕ್ಷೆ ಬೇಡುತ್ತಿದ್ದಾರೆ. ಇವರು ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಕಂಪ್ಲಿ, ಸಿರುಗುಪ್ಪ, ಕೂಡ್ಲಿಗಿಯ ಸುತ್ತಮುತ್ತಲಿನ ಹಳ್ಳಿಗಳಲ್ಲಿನ ಹೆಚ್ಚಾಗಿ ಕಂಡುಬರುತ್ತಾರೆ. ಇವರು ಸಂತೆಯಲ್ಲಿ ಬುಡಬುಡಕೆ ಎಂಬ ವಾದ್ಯವನ್ನು ಬಾರಿಸುತ್ತಾ ಭಿಕ್ಷೆಯನ್ನು ಬೇಡುತ್ತಾರೆ. ಸಂತೆಯಲ್ಲಿ ಭಿಕ್ಷಾಟನೆಗೆ ಬುಡಬುಡಿಕೆಯವರು ಹೊರಟಾಗ ತಲೆಗೆ ಪೇಟ, ಉದ್ದನೆಯ ನಿಲುವಂಗಿ, ಕೋಟು, ಕಚ್ಚೆಪಂಚೆ, ಸೊಂಟಕ್ಕೆ ವಸ್ತ್ರ, ಕಂಕುಳಲ್ಲಿ ಹಿಂದುಮುಂದು ಇಳಿಬಿಟ್ಟಿರುವ ಜೋಳಿಗೆ ಚೀಲಗಳು, ಕೈಕಡಗ ಮುಂತಾದ ವೇಷಭೂಷಣವನ್ನು ತೊಡುವುದರ ಜೊತೆಗೆ ಬುಡಬುಡಕೆಯ ವಾದ್ಯವನ್ನು ತರುತ್ತಾರೆ. ಇದರಿಂದ ಸಂತೆಗೆ ಬಂದ ಜನರು ಇವರತ್ತ ಹೆಚ್ಚು ಆಕರ್ಷಿತರಾಗಿ ಹಣ, ವಸ್ತ್ರ, ಧಾನ್ಯ ಮುಂತಾದವುಗಳನ್ನು ಕೊಡುತ್ತಾರೆ. ಇವರು "ಶುಭವಾಗುತ್ತೆತಿ ತಾಯಿ" ಎಂಬ ಶಬ್ದದಿಂದಲೇ ಸಂತೆಯಲ್ಲಿ ಭಿಕ್ಷೆಯನ್ನು ಬೇಡುತ್ತಾರೆ. ಇದರಿಂದ ಬಂದ ಆದಾಯದಿಂದ ಜೀವನ ಸಾಗಿಸುತ್ತಾರೆ. ಇನ್ನು ಕೆಲವು ಬುಡಬುಡಕೆಯವರು ಭಿಕ್ಷಾಟನೆಯನ್ನು ತೊರೆದು ಗಿಣಿಶಾಸ್ತ್ರವನ್ನು ಇಟ್ಟುಕೊಂಡು ಸಂತೆಯಲ್ಲಿ ಜೀವನವನ್ನು ಸಾಗಿಸುತ್ತಿದ್ದಾರೆ.

೬. ಕಿನ್ನರಿ ಜೋಗಿಯವರು ಅಲೆಮಾರಿ ಸಮುದಾಯವಾಗಿದ್ದು, ಸಂತೆಯಲ್ಲಿ ಸಾಂಪ್ರದಾಯಿಕ ಆರಾಧಕರಾಗಿ ಭಿಕ್ಷೆ ಬೇಡುವವರಲ್ಲಿ ಇವರು ಸಹ ಇದ್ದಾರೆ. ಬಳ್ಳಾರಿ ಜಿಲ್ಲೆಯ ಕಿನ್ನರಿ ಜೋಗಿಗಳು ಸುಂಕಪ್ಪ ಎಂಬ ದೈವದ ಆರಾಧಕರಾಗಿದ್ದಾರೆ. ಈ ದೈವದ ಹೆಸರಿನಲ್ಲಿಯೇ ಚಿಕ್ಕವರಿರುವಾಗ ಬೋಧನೆ ನಡೆದು ಸಂತೆಗಳಲ್ಲಿ ಭಿಕ್ಷೆಗೆ ಬರುತ್ತಾರೆ. ಕಿನ್ನರಿ ಜೋಗಿಗಳೆಂದರೆ ಕಿನ್ನರಿ ಹಿಡಿದು ಹಾಡುತ್ತಾ ಬರುವವರಾಗಿದ್ದಾರೆ.[೩೦] ಸಂತೆಗೆ ಭಿಕ್ಷೆಯನ್ನು ಬೇಡಲು ಇವರು ಒಬ್ಬಂಟಿಗರಾಗಿಯೇ ಬರುತ್ತಾರೆ. ತಲೆಗೆ ಪೇಟ, ಉದ್ದನೆಯ ನಿಲುವಂಗಿ, ಮೇಲೆ ಕರಿ ಕೋಟನ್ನು ಧರಿಸಿ, ಕೈಯಲ್ಲಿ ಕಿನ್ನರಿ ಹಿಡಿದು, ಮಹಾಭಾರತದ ಪಾಂಡವರ ಕಥೆಗೆ ಸಂಬಂಧಪಟ್ಟ ಹಾಡುಗಳನ್ನು ಹಾಡುತ್ತಾ ಸಂತೆಗೆ ಭಿಕ್ಷೆ ಬೇಡಲು ಬರುತ್ತಾರೆ. ಇವರ ಕೈಯಲ್ಲಿ ಇರುವ ಕಿನ್ನರಿಯು ಸಂತೆಗೆ ಬಂದ ಜನರನ್ನು ತನ್ನತ್ತ ಸೆಳೆಯುತ್ತದೆ. ಸಂತೆಯಲ್ಲಿ ಭಿಕ್ಷೆ ಬೇಡಿ ಬಂದ ಆದಾಯದಿಂದ ಜೀವನ ಸಾಗಿಸುತ್ತಿದ್ದಾರೆ.

**೪:೫:೨ ಸಂತೆಯಲ್ಲಿ ಬುಡಕಟ್ಟು ಸಾಮಾನ್ಯ ಭಿಕ್ಷುಕರು**

ಬುಡಕಟ್ಟು ಸಮುದಾಯ ಮತ್ತು ಅಲೆಮಾರಿ ಸಮುದಾಯದಲ್ಲಿ ಕೆಲವರು ತುಂಬಾ ನಿಕೃಷ್ಟ ಸ್ಥಿತಿಯಲ್ಲಿ ದೈನಂದಿನ ಜೀವನವನ್ನು ಸಾಗಿಸುತ್ತಿದ್ದಾರೆ. ಕುಂಟರು, ಕುರುಡರು, ಕಿವುಡರು, ಬುದ್ಧಿಮಾಂದ್ಯರು, ವೃದ್ಧರು ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಬಡವರಾದ ಬುಡಕಟ್ಟು ಮತ್ತು ಅಲೆಮಾರಿ ಸಮುದಾಯದವರು ದುಡಿಯಲು ಶಕ್ತಿಯಿದ್ದಾಗ್ಯೂ ಕೂಡಾ ಒಪ್ಪತ್ತಿನ ಊಟಕ್ಕೂ ಗತಿ ಇಲ್ಲ. ಇಂತಹ ಪರಿಸ್ಥಿತಿಯಲ್ಲಿ ಅಂಗವಿಕಲರಿಗೆ, ವೃದ್ಧರಿಗೆ, ಬುದ್ಧಿಮಾಂದ್ಯ ಇರುವವರಿಗೆ ಯಾರು ತಾನೇ ಹಸಿವು ನೀಗಿಸಿಯಾರು. ಇಂಥ ಜನರು ಸಂತೆಯಲ್ಲಿ ಭಿಕ್ಷಾಟನೆ ಮಾಡಿ ಬಂದ ಆದಾಯದಿಂದ ಜೀವನ ಸಾಗಿಸುತ್ತಿದ್ದಾರೆ. ಈ ರೀತಿಯ ಬುಡಕಟ್ಟು ಭಿಕ್ಷುಕರು ಸಂತೆಯಲ್ಲಿ ಭಿಕ್ಷೆ ಬೇಡುವಾಗ ಹರಿದ ಕೊಳಕಾದ ಬಟ್ಟೆಯನ್ನು ತೊಟ್ಟಿರುತ್ತಾರೆ. ಇದು ಇವರಿಗೆ ಅನಿವಾರ್ಯವೂ ಕೂಡಾ. ಇದರಿಂದ ಸಂತೆಗೆ ಬಂದ ಜನ ತುಂಬಾ ನಿಕೃಷ್ಟರಾಗಿ ಕಾಣುತ್ತಾರೆ. ಇವರ ಈ ಸ್ಥಿತಿಯ ಬಗ್ಗೆ ಮರುಕ ಹುಟ್ಟಿ ಸಂತೆಗೆ ಬಂದ ಜನರು ಹಣ, ಬಟ್ಟೆ, ತಿನ್ನುವಂತ ಆಹಾರವನ್ನು ಕೊಡುತ್ತಾರೆ. ಇದೇ ಈ ಭಿಕ್ಷುಕರಿಗೆ ಆಧಾರವಾಗಿರುತ್ತದೆ.

ಸಂತೆಯಲ್ಲಿ ಅನೇಕ ಸಮುದಾಯದ ಜನರು ಭಿಕ್ಷೆ ಬೇಡುತ್ತಾರೆ. ಇದರಲ್ಲಿ ಬುಡಕಟ್ಟು ಅಂಗವಿಕಲ ಭಿಕ್ಷುಕರು ಇದ್ದಾರೆ. ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡಂತೆ ಬೇಡ ಬುಡಕಟ್ಟು ಮತ್ತು ಲಂಬಾಣಿ ಸಮುದಾಯದ ಅಂಗವಿಕಲರು ಭಿಕ್ಷೆ ಬೇಡುವುದು ಕಂಡುಬಂದಿದೆ. ಅಲ್ಲದೆ, ಇತರೆ ಜಾತಿಯ ಅಂಗವಿಕಲರು ಸಹ ಸಂತೆಯಲ್ಲಿ ಭಿಕ್ಷೆಯನ್ನು ಬೇಡುತ್ತಿದ್ದಾರೆ. ಕ್ಷೇತ್ರಕಾರ್ಯದಲ್ಲಿ ಅಂಗವಿಕಲ ಬುಡಕಟ್ಟುಗಳನ್ನು ವಿಚಾರಣೆ ಮಾಡಿದಾಗ "ತಮ್ಮ ಮನೆಯಲ್ಲಿ ಯಾವುದೇ ದಿನನಿತ್ಯದ ಖರ್ಚಿಗೆ ಹಣ ಕೊಡುವುದಿಲ್ಲ" ಎಂದು ಸಂತೆಯಲ್ಲಿ ಭಿಕ್ಷೆ ಬೇಡುವುದಾಗಿ ಬೇಡ ಬುಡಕಟ್ಟು ಸಮುದಾಯದ ವೆಂಕಟೇಶ ಎಂಬುವವನು ತಿಳಿಸುತ್ತಾನೆ. ಆದರೆ ಲಂಬಾಣಿ ಜನಾಂಗದ ರಾಮಮೂರ್ತಿ ಎಂಬ ೩೫ ವರ್ಷದ ಅಂಗವಿಕಲ ಭಿಕ್ಷುಕನು "ತನಗೆ

ತಂದೆತಾಯಿ ಇಲ್ಲವೆಂದು, ಹೆಂಡತಿ ಕೂಲಿ ಮಾಡಿದರೆ ತಾನು ಸಂತೆಯಲ್ಲಿ ಭಿಕ್ಷೆ ಬೇಡಿ ಬಂದ ಹಣದಿಂದ ಜೀವನ ಸಾಗಿಸುವುದಾಗಿ" ಹೇಳುತ್ತಾನೆ. ಇದೇ ರೀತಿ ಬೇಡ ಬುಡಕಟ್ಟಿನ ಕರಿಯಪ್ಪ ಎಂಬುವವನು ತನಗೆ ಕಣ್ಣುಗಳು ಕಾಣದೆ ಇರುವುದರಿಂದ, ಬೇರೆ ರೀತಿಯ ಕೆಲಸಗಳನ್ನು ಮಾಡಲಾಗದೇ ಸಂತೆಯಲ್ಲಿ ಭಿಕ್ಷಾಟನೆ ಮಾಡುವುದಾಗಿ ತಿಳಿಸುತ್ತಾರೆ. ಹೀಗೆ ಹಲವಾರು ಅಂಗವಿಕಲರು ಬುಡಕಟ್ಟಿನವರು ತಾವು ಭಿಕ್ಷೆ ಬೇಡುವುದಕ್ಕೆ ಕಾರಣವನ್ನು ಕೊಡುತ್ತಾರೆ. ಸಂತೆಗೆ ಬರುವಂತ ಅನೇಕ ಜನರಿಗೆ ಈ ಅಂಗವಿಕಲರು ತಮ್ಮ ಊನವಾದ ಅಂಗವನ್ನು ತೋರಿಸುತ್ತಾ ಭಿಕ್ಷೆ ಬೇಡುತ್ತಾರೆ. ಇವರಿಗೆ ಬೇರೆ ಸ್ಥಳಗಳಿಗಿಂತ ಸಂತೆಯಲ್ಲಿಯೇ ಅಧಿಕ ಹಣ ದೊರೆಯುತ್ತದೆ ಎಂದು ಹೇಳುತ್ತಾರೆ. ಅಂಗವಿಕಲ ಬುಡಕಟ್ಟು ಭಿಕ್ಷುಕರಿಗೆ ಸಂತೆಯು ಜೀವನಾಧಾರವನ್ನು ಒದಗಿಸುವ ಕೇಂದ್ರವಾಗಿದೆ.

ಸಂತೆಯಲ್ಲಿ ಅಂಗವಿಕಲ ಬುಡಕಟ್ಟು ಭಿಕ್ಷುಕರು ಇದ್ದಂತೆ ಬುಡಕಟ್ಟು ಸಮುದಾಯದ ವೃದ್ಧ ಭಿಕ್ಷುಕರು ಸಹ ಇದ್ದಾರೆ. ಈ ವೃದ್ಧ ಭಿಕ್ಷುಕರು ತಮಗೆ ದುಡಿಯಲು ಶಕ್ತಿಯಿಲ್ಲದೇ, ಸಾಕಲು ಮಕ್ಕಳು ಇಲ್ಲದೇ, ಅನಿವಾರ್ಯ ಪರಿಸ್ಥಿತಿಯಲ್ಲಿ ಸಂತೆಯಲ್ಲಿ ಭಿಕ್ಷೆ ಬೇಡಿ ಜೀವನ ಸಾಗಿಸುತ್ತಿದ್ದಾರೆ. ಈ ರೀತಿಯಲ್ಲಿ ಸಂತೆಯಲ್ಲಿ ಕಂಡುಬರುವ ಬುಡಕಟ್ಟು ಮತ್ತು ಅಲೆಮಾರಿ ಸಮುದಾಯಗಳೆಂದರೆ ಬೇಡರು, ಹಕ್ಕಿಪಿಕ್ಕಿ, ಹಂಡಿ ಜೋಗಿ ಎಂಬ ಗೊಂದಲಿಗರು, ಲಂಬಾಣಿಯವರು, ಮುಂತಾದ ಸಮುದಾಯದವರು. ಈ ಸಮುದಾಯಗಳಲ್ಲಿ ಕೆಲವು ವೃದ್ಧರಿಂದ ಮಕ್ಕಳಿದ್ದರೂ ಕೂಡಾ ಹೆಚ್ಚಿನ ಹಣದ ಆಸೆಗೆ ಭಿಕ್ಷೆ ಬೇಡುವ ಹವ್ಯಾಸದವರು ಇದ್ದಾರೆ. ಇನ್ನುಳಿದಂತೆ ಅನೇಕ ಅಸಹಾಯಕ ವೃದ್ಧರೇ ಹೆಚ್ಚಾಗಿ ಸಂತೆಯಲ್ಲಿ ಭಿಕ್ಷೆ ಬೇಡುತ್ತಾರೆ. ಆದ್ದರಿಂದ ಸಂತೆಯು ಬುಡಕಟ್ಟು ವೃದ್ಧರಿಗೂ ಕೂಡಾ ಆಸರೆಯಾಗಿದೆ. ಸಂತೆಯಲ್ಲಿ ಬುಡಕಟ್ಟು ಅಂಗವಿಕಲರು, ವೃದ್ಧ ಭಿಕ್ಷುಕರು ಇದ್ದ ಹಾಗೆ ಬುಡಕಟ್ಟು ಬುದ್ಧಿಮಾಂದ್ಯ ಭಿಕ್ಷುಕರು ಇದ್ದಾರೆ. ಇವರಿಗೆ ಪ್ರಾಪಂಚಿಕ ಜ್ಞಾನದ ಅರಿವೇ ಇರುವುದಿಲ್ಲ. ಮೇಲಾಗಿ ತಾವು ಭಿಕ್ಷೆ ಬೇಡುತ್ತಿದ್ದೇವೆ ಎಂಬ ಜ್ಞಾನವೇ ಇರುವುದಿಲ್ಲ. ಸಂತೆಗೆ ಬಂದ ಗ್ರಾಹಕರಲ್ಲಿಗೆ ಹೋಗಿ ಏನೂ ಮಾತನಾಡದೆ ಇದ್ದು ಅವರನ್ನೇ ದಿಟ್ಟಿಸಿ ನೋಡುವುದು ಮುಂತಾದ ಚಟುವಟಿಕೆಯಿಂದ ತಮಗೆ ಹಸಿವೆ ಆಗಿದೆ ಎಂಬುದನ್ನು ತೋರಿಸಿಕೊಡುತ್ತಾರೆ. ಸಂತೆಗೆ ಬಂದ ಜನರು ಇವರ ಹುಚ್ಚಾಟವನ್ನು ನೋಡಿ ಮರುಕ ಪಟ್ಟು ಹಣ ಅಥವಾ ಆಹಾರ ಪದಾರ್ಥಗಳನ್ನು ಕೊಟ್ಟು ಹೋಗುತ್ತಾರೆ. ಇವರು ಹರಿದ ಕೊಳಕು ಬಟ್ಟೆ, ಒಮ್ಮೊಮ್ಮೆ ಅರೆನಗ್ನರಾಗಿ ತಿರುಗುತ್ತಿರುತ್ತಾರೆ. ಇದರಿಂದ ಸಂತೆಗೆ ಬಂದವರು ಇವರಿಗೆ ಆಹಾರ ಒದಗಿಸುತ್ತಾರೆ. ಹೀಗಾಗಿ ಸಂತೆಯು ಇವರ ಜೀವನಾಧಾರಕ್ಕೆ ಆದಾಯ ಮೂಲದ ತಾಣವಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ೫ನೇ ಅಧ್ಯಾಯವಾದ ಸಂತೆಯಲ್ಲಿ ಬುಡಕಟ್ಟು ಸಮುದಾಯದ ಪಾತ್ರ ಎಂಬುದರ ಅಡಿಯಲ್ಲಿ ಅನೇಕ ಬುಡಕಟ್ಟುಗಳಾದ ಬೇಡ, ಮೇದ, ಹಕ್ಕಿಪಿಕ್ಕಿ, ರಾಜಗೊಂಡ, ಲಂಬಾಣಿ, ಕೊರವ, ಗೋಸಾಯಿ ಮುಂತಾದವುಗಳಲ್ಲಿನ ಪರಿಚಯ, ಅವುಗಳು ಮೈಗೂಡಿಸಿಕೊಂಡಿರುವ ವೃತ್ತಿಗಳು,

ಆ ವೃತ್ತಿಗಳಿಗೆ ಅವರು ಹಾಕಿರುವ ಬಂಡವಾಳ, ಆ ಬಂಡವಾಳದಿಂದ ಬರುವ ನಿವ್ವಳ ಆದಾಯ ಮುಂತಾದವುಗಳ ಹಿನ್ನೆಲೆಯಲ್ಲಿ ಅವರ ಆರ್ಥಿಕ ಸ್ಥಿತಿಯು ಕಂಡುಬರುವುದಾದರೂ. ಅದೇ ಬುಡಕಟ್ಟುಗಳ ಇನ್ನಿತರ ಸದಸ್ಯರು ಆರ್ಥಿಕ ಸ್ಥಿತಿಯು ಶೋಚನೀಯ ಎಂಬ ಪರಿಜ್ಞಾನದ ಅರಿವು ಮರೆಯುವಂತಿಲ್ಲ ಎಂಬ ಸತ್ಯ ಅಷ್ಟೇ ರಹಸ್ಯ. ಅದರಂತೆ, ಸಂತೆಯಲ್ಲಿ ಪಾಲ್ಗೊಳ್ಳುವ ಬುಡಕಟ್ಟು ಸಮುದಾಯದ ಗ್ರಾಹಕರು ತಮ್ಮ ವಿವೇಚನೆಯಂತೆ ಬುಡಕಟ್ಟು ಸಮುದಾಯದೊಂದಿಗೆ ವ್ಯವಹರಿಸುವ ರೀತಿಯನ್ನು ಮನಗಾಣಬಹುದು. ಅಲ್ಲದೇ ಸಂತೆಯಲ್ಲಿ ಮನರಂಜನೆ ನೀಡುವ ವೃತ್ತಿಯನ್ನು ಅಳವಡಿಸಿಕೊಂಡಿರುವ ದೊಂಬರು, ಹಗಲುವೇಷಗಾರರು, ಸುಡುಗಾಡು ಸಿದ್ಧರು, ಕರಡಿ ಕುಣಿಸುವವರು ಮುಂತಾದವರ ಪರಿಚಯ ಮತ್ತು ಅವರು ನೀಡುವ ಮನರಂಜನೆಯಿಂದಾಗುವ ಪರಿಣಾಮ ಮುಂತಾದವುಗಳನ್ನು ಅವಲೋಕಿಸಲಾಗಿದ್ದು, ಅದರಿಂದ ಪ್ರಸ್ತುತ ಸಮಾಜಕ್ಕೆ ದೊರಕುವ ಸೌಂದರ್ಯಪ್ರಜ್ಞೆಯ ಆರಾಧನೆಗೆ ಸೃಷ್ಟಿ ನೀಡುವ ಕಾರ್ಯವನ್ನು ಮರೆಮಾಚುವಂತಿಲ್ಲ. ಅಂದರೆ, ಅದರ ಪಾತ್ರ ವೈಶಿಷ್ಟ್ಯತೆಯು ಮಹತ್ವವುಳ್ಳದ್ದು ಎಂದು ಒಪ್ಪಿಕೊಳ್ಳಬಹುದಾಗಿದೆ. ಅದರಂತೆ, ಸಂತೆಯಲ್ಲಿ ಬುಡಕಟ್ಟು ಭಿಕ್ಷುಕರು ತಮ್ಮ ಜೀವನೋಪಾಯಕ್ಕಾಗಿ ಮತ್ತು ಧರ್ಮದ ಸಮರ್ಪಕ ಆಚರಣೆಗಾಗಿ ವೃತ್ತಿಯನ್ನು ಮೈಗೂಡಿಸಿಕೊಂಡು ಸಂಸ್ಕೃತಿಯ ಉಳಿವಿಗಾಗಿ ಶ್ರಮಿಸುವ ಅನೇಕ ಬುಡಕಟ್ಟು ಸಮುದಾಯಗಳನ್ನು ಈ ಅಧ್ಯಯನದ ಅಡಿಯಲ್ಲಿ ಅತ್ಯಂತ ಸ್ಪಷ್ಟವಾಗಿ ಗಮನಿಸಬಹುದಾದ ಅಂಶವಾಗಿದೆ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಸಂತೆಯಿಂದ ಬುಡಕಟ್ಟುಗಳಿಗೆ ಅನೇಕ ರೀತಿಯಲ್ಲಿ ಅನುಕೂಲವಿದೆ. ಅದರಂತೆ ಬುಡಕಟ್ಟು ವಹಿವಾಟಿಕೆಯಿಂದ ಸಂತೆಗೂ ಅನುಕೂಲವಿದೆ ಎಂಬುದನ್ನು ಮನಗಂಡಾಗ, ಇವೆರಡರ ನಡುವಿನ ಅನುಕೂಲತೆಯ ಪ್ರಮಾಣ ಅಲ್ಪಮಟ್ಟಿನದಾಗಿದೆ ಎಂಬ ಅಂಶ ತಿಳಿದುಬರುತ್ತದೆ.

## ಟಿಪ್ಪಣಿಗಳು

೧. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪು.೧೧೫, ೧೯೯೯

೨. ಜಗದೀಶ ಕುಮಾರ, ಜೇಡ ಬುಡಕಟ್ಟಿನ ಬೇಟೆ ಆಚರಣೆ ಒಂದು ಸಮಾಜಶಾಸ್ತ್ರೀಯ ಅಧ್ಯಯನ, (ಅಪ್ರಕಟಿತ ಎಂ.ಫಿಲ್. ಸಂಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ), ಪು.೫, ೨೦೦೪

೩. ಕಪ್ಲಬಾಳ ಪನ್ನಂಗಧರ, ಮೇದರ ಸಂಸ್ಕೃತಿ ಮತ್ತು ವಾಣಿಜ್ಯ ಅಧ್ಯಯನ, (ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ), ಪು.೬, ೨೦೦೪

೪. ಎಚ್.ಜೆ. ಲಕ್ಕಪ್ಪಗೌಡ (ಸಂ.), ಲೇ. ಡಾ. ಡಿ.ಆರ್. ಪಾಂಡುರಂಗ, ಕರ್ನಾಟಕ ಬುಡಕಟ್ಟುಗಳು ಸಂಪುಟ ೨, ಮೇದರು, ಪು.೨, ೨೦೦೦

೫. ಮೇದರ ಸಂಸ್ಕೃತಿ ಮತ್ತು ವಾಣಿಜ್ಯ ಅಧ್ಯಯನ, (ಅಪ್ರಕಟಿತ ಪಿಎಚ್.ಡಿ. ಪ್ರಬಂಧ), ಪು.೫, ೨೦೦೪

೬. ಎಚ್.ಜೆ. ಲಕ್ಕಪ್ಪಗೌಡ (ಸಂ.), ಲೇ. ಡಾ. ಡಿ.ಆರ್. ಪಾಂಡುರಂಗ, ಕರ್ನಾಟಕ ಬುಡಕಟ್ಟುಗಳು, ಸಂಪುಟ ೨, ಮೇದರು, ಪು.೩೮, ೨೦೦೦

೭. ಎಚ್.ಜೆ. ಲಕ್ಕಪ್ಪಗೌಡ (ಸಂ.), ಲೇ. ಡಾ. ಡಿ.ಆರ್. ಪಾಂಡುರಂಗ, ಕರ್ನಾಟಕ ಬುಡಕಟ್ಟುಗಳು, ಸಂಪುಟ ೨, ಮೇದರು, ಪು.೪೨, ೨೦೦೦

೮. ಎಚ್.ಜೆ. ಲಕ್ಕಪ್ಪಗೌಡ (ಸಂ.), ಲೇ. ಡಾ. ಡಿ.ಬಿ. ನಾಯಕ, ಕರ್ನಾಟಕ ಬುಡಕಟ್ಟುಗಳು, ಸಂ.೨, ಹಕ್ಕಿಪಿಕ್ಕಿಯರು, ಪು.೧೮೬, ೨೦೦೦

೯. ಡಾ. ಕೆ.ಎಂ. ಮೈತ್ರಿ, ಬುಡಕಟ್ಟು ಕುಲಕಸುಬುಗಳು, ಪು.೮೧, ೨೦೦೨

೧೦. ಎಚ್.ಜೆ. ಲಕ್ಕಪ್ಪಗೌಡ (ಸಂ.), ಲೇ. ಡಾ. ಡಿ.ಬಿ. ನಾಯಕ, ಕರ್ನಾಟಕ ಬುಡಕಟ್ಟುಗಳು, ಸಂ.೨, ಹಕ್ಕಿಪಿಕ್ಕಿಯರು, ಪು.೨೧೧, ೨೦೦೦

೧೧. ಸುದರ್ಶನ ಕುಮಾರ ಎಂ., ಬದಲಾಗುತ್ತಿರುವ ಸಮಾಜದಲ್ಲಿ ಹಕ್ಕಿಪಿಕ್ಕಿ ಸಮುದಾಯದ ಆರ್ಥಿಕ ಸ್ಥಿತಿಗತಿ, (ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ), ಪು.೯೮, ೨೦೦೨

೧೨. ಡಾ. ಕೆ.ಎಂ. ಮೈತ್ರಿ, ಬುಡಕಟ್ಟು ಕುಲಕಸುಬುಗಳು, ಪು.೭೨, ೨೦೦೨

೧೩. ಅದೇ.,.....ಪು.೭೬

೧೪. ಪ್ರಹ್ಲಾದ್ ಬೆಟಗೇರಿ, ಅಡವಿ ಚೆಂಚರ ಸಂಸ್ಕೃತಿ, ಪು.೮೦, ೧೯೯೩

೧೫. ಡಾ.ಡಿ.ಬಿ.ನಾಯಕ, ಗಿರಿಜನ ಸಿರಿ, ಪು.೮೮, ೨೦೦೩

೧೬. ವಿಜಯಲಕ್ಷ್ಮಿ ಆರ್., ಲಂಬಾಣಿಗರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ, (ಅಪ್ರಕಟಿತ ಎಂ.ಫಿಲ್. ಪ್ರಬಂಧ), ಪು.೦೨, ೨೦೦೪

೧೭. ಎಚ್.ಜೆ. ಲಕ್ಕಪ್ಪಗೌಡ (ಸಂ.), ಲೇ. ಡಾ. ಪಿ.ಕೆ. ಖಂಡೋಬಾ. ಕರ್ನಾಟಕ ಬುಡಕಟ್ಟುಗಳು, ಸಂ.೨, ಪು.೧೧೦- ೧೧೨, ೨೦೦೦

೧೮. ಮಾನಸ, ಕೊರವರ ಸಂಸ್ಕೃತಿ, ಪು.೯, ೧೯೯೩

೧೯. ಎಚ್.ಜೆ. ಲಕ್ಕಪ್ಪಗೌಡ (ಸಂ.), ಲೇ. ಡಾ. ಬಿ.ಪಿ. ರಾಮಯ್ಯ, ಕರ್ನಾಟಕ ಬುಡಕಟ್ಟುಗಳು ಸಂಪುಟ ೨, ಕೊರವರು, ಪು.೨೯೦, ೨೦೦೦

೨೦. ದೇವೇಂದ್ರ ಕುಮಾರ ಸಿ. ಹಕಾರಿ, ಡೊಂಬರ ಸಂಸ್ಕೃತಿ, ಪು.೨೧, ೧೯೯೩

೨೧. ಎಚ್.ಜೆ. ಲಕ್ಕಪ್ಪಗೌಡ (ಸಂ.), ಕರ್ನಾಟಕ ಬುಡಕಟ್ಟುಗಳು ಸಂಪುಟ ೨. ಲೇ. ಕೇಶವನ್ ಪ್ರಸಾದ್ ಕೆ, ಡೊಂಬರು, ಪು.೫೦೧, ೫೦೨, ೨೦೦೦

೨೨. ಎಚ್.ಎಲ್. ನಾಗೇಗೌಡ (ಸಂ.), ಪ್ರವಾಸಿ ಕಂಡ ಇಂಡಿಯಾ ಸಂಪುಟ ೫, ಪು.೧೭೦, ೧೯೭೫

೨೩. ಎಚ್.ಜೆ. ಲಕ್ಕಪ್ಪಗೌಡ (ಸಂ.), ಕರ್ನಾಟಕ ಬುಡಕಟ್ಟುಗಳು ಸಂಪುಟ ೨, ಲೇ. ಯಳನಾಡು ಅಂಜನಪ್ಪ, ಹಗಲುವೇಷಗಾರರು, ಪು.೪೬೨, ೨೦೦೦

೨೪. ಯಳನಾಡು ಅಂಜನಪ್ಪ, ಹಗಲುವೇಷದವರ ಸಂಸ್ಕೃತಿ, ಪು.೭೩, ೧೯೯೩

೨೫. ಡಾ.ಪಿ.ಕೆ. ಖಂಡೋಬ, ಸುಡಗಾಡು ಸಿದ್ಧರ ಸಂಸ್ಕೃತಿ, ಪು.೭, ೧೯೯೩

೨೬. ವಿಜಯ ಕರ್ನಾಟಕ ಪತ್ರಿಕೆ, ದಿನಾಂಕ ೨೭.೧.೨೦೦೫, ಗಂಗಾವತಿ ಆವೃತ್ತಿ, ಪು.೦೩

೨೭. ವಿಜಯ ಕರ್ನಾಟಕ ಪತ್ರಿಕೆ, ದಿನಾಂಕ ೨೬.೧೨.೨೦೦೫, ಗಂಗಾವತಿ ಆವೃತ್ತಿ, ಪು.೦೫

೨೮. ಎಚ್.ಜೆ. ಲಕ್ಕಪ್ಪಗೌಡ (ಸಂ.), ಕರ್ನಾಟಕ ಬುಡಕಟ್ಟುಗಳು ಸಂಪುಟ ೨, ಲೇ. ಡಾ. ಪಿ.ಕೆ. ಖಂಡೋಬಾ, ಸುಡುಗಾಡು ಸಿದ್ಧರು, ಪು.೫೫೪, ೨೦೦೦

೨೯. ಗೀತಾ ನಾಗಭೂಷಣ, ದುರುಗ ಮುರಗಿಯವರ ಸಂಸ್ಕೃತಿ, ಪು. ೫, ೨೬, ೨೭, ೧೯೯೩

೩೦. ಎಚ್.ಜೆ. ಲಕ್ಕಪ್ಪಗೌಡ (ಸಂ.), ಕರ್ನಾಟಕ ಬುಡಕಟ್ಟುಗಳು ಸಂಪುಟ ೨, ಲೇ. ಹಿ.ಚಿ. ಬೋರಲಿಂಗಯ್ಯ, ಕಿನ್ನರಿ ಜೋಗಿಯರು, ಪು.೧೦೦, ೨೦೦೦

ಅಧ್ಯಾಯ ೫

# ಉಪಸಂಹಾರ

ಸಂತೆಗಳು, ಆಧುನಿಕಪೂರ್ವ ಭಾರತ ಅಥವಾ ಕರ್ನಾಟಕದ ಉತ್ಪಾದಕ ಸಮುದಾಯಗಳ ಆರ್ಥಿಕ ಚಟುವಟಿಕೆಗಳನ್ನು ಪ್ರಮುಖವಾಗಿ ಸಂಘಟಿಸಿದವು. ದುಡಿವ ಸಮುದಾಯಗಳು ತಮಗೆ ಸಂಬಂಧಿಸಿದ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವುದು, ಹೆಚ್ಚುವರಿಯನ್ನು ಮಾರಾಟ ಮಾಡುವುದು ಮತ್ತು ತಮಗೆ ಬೇಕಾದ ವಸ್ತುಗಳನ್ನು ಕೊಳ್ಳುವುದಕ್ಕಾಗಿಯೇ ರೂಪುಗೊಂಡ ಈ ಕೇಂದ್ರಗಳು ಗ್ರಾಮಗಳ ಆರ್ಥಿಕ ಚಟುವಟಿಕೆಗಳನ್ನು ನಿರ್ಣಾಯಕವಾಗಿ ಪ್ರಭಾವಿಸಿದವು. ಮಧ್ಯಕಾಲೀನ ಭಾರತದಲ್ಲಿ ಅನಿವಾರ್ಯವಾಗಿ ಮುಖ್ಯವಾಹಿನಿಯ ಜೊತೆ ಒಡನಾಡಬೇಕಾದ ಬುಡಕಟ್ಟುಗಳೂ ಸಹ ಈ ಸಂತೆಗಳಿಂದ ಆಕರ್ಷಿತವಾದವು. ಆರ್ಥಿಕ ಕಾರಣಗಳಿಗೆ ಮುಖ್ಯವಾಹಿನಿಯ ಜೊತೆ ಮುಖಾಮುಖಿಯಾಗಬೇಕಾದ ಬುಡಕಟ್ಟುಗಳ ಜೀವನ ವಿಧಾನದಲ್ಲೂ ಅನೇಕ ಬದಲಾವಣೆಗಳು ಸಂಭವಿಸಿದವು.

ಸಂತೆಗಳು ಮುಖ್ಯವಾಗಿ ಗ್ರಾಮೀಣ ಜನರ ಆರ್ಥಿಕತೆಯ ಭಾಗವಾಗಿ ಹುಟ್ಟಿಕೊಂಡವು. ಇವು ಮುಖ್ಯವಾಗಿ ಗುಡಿಕೈಗಾರಿಕೆಗಳನ್ನು, ಕುಶಲಕರ್ಮಿಗಳನ್ನು, ಕೃಷಿಕರನ್ನು ಮತ್ತು ಮನರಂಜಕ ಸಮುದಾಯಗಳನ್ನು ಅನೇಕ ವಿಧದಲ್ಲಿ ಪೋಷಿಸಿದವು. ಅಲ್ಲದೆ ವಿವಿಧ ಉತ್ಪಾದಕ ಸಮುದಾಯಗಳನ್ನು ಸಂಘಟಿಸಿದವು ಮತ್ತು ಈ ಶ್ರಮಜೀವಿಗಳ ಆರ್ಥಿಕ ಚಟುವಟಿಕೆಗಳ ವೇದಿಕೆಗಳಾದವು. ಮುಖ್ಯವಾಗಿ ಸಂತೆಗಳು, ಭಾರತದ ಅಲಕ್ಷಿತ ಉತ್ಪಾದಕ ಶಕ್ತಿಗಳನ್ನು ಒಗ್ಗೂಡಿಸಿದವು. ಮೇಲೆ ಹೇಳಿದಂತೆ ಬುಡಕಟ್ಟುಗಳು ಮತ್ತು ಅಂಚಿನ ಸಮುದಾಯಗಳು ಈ ಬಗೆಯ ಆರ್ಥಿಕ ಚಟುವಟಿಕೆಗಳ ಭಾಗವಾಗಿ ಬದುಕಲೇಬೇಕಾದ ಅನಿವಾರ್ಯತೆ ಸೃಷ್ಟಿಯಾಗಿತ್ತು. ಜೊತೆಗೆ ಬುಡಕಟ್ಟುಗಳಿಗೆ ಮುಖ್ಯವಾಹಿನಿಯ ಸಂಪರ್ಕವೂ ಅವಶ್ಯವಾಗಿತ್ತು. ಬುಡಕಟ್ಟುಗಳು ಆರ್ಥಿಕವಾಗಿ ಮುಖ್ಯಪ್ರವಾಹದ ಜೊತೆ ಅನುಸಂಧಾನ ಮಾಡಿದಾಗೆಲ್ಲ, ಅವುಗಳ ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ರೂಪಾಂತರಗಳು ಸಂಭವಿಸತೊಡಗಿದವು. ಈ ರೂಪಾಂತರಗಳು ಅನುಸಂಧಾನ ಮತ್ತು ಸಂಘರ್ಷಗಳಿಂದಲೂ ಸಂಭವಿಸಿದವು. ಒಟ್ಟಿನಲ್ಲಿ ಸಂತೆಗಳೆಂಬ ಆರ್ಥಿಕ ಚಟುವಟಿಕೆಗಳ ಕೇಂದ್ರಗಳು ಬುಡಕಟ್ಟುಗಳನ್ನು ಮುಖ್ಯವಾಹಿನಿಯ ಜೊತೆ ಬೆರತು ಹೋಗಲು ಪ್ರೇರೇಪಿಸಿದವು.

ಈ ಕಾರಣಕ್ಕಾಗಿ ಆದಿವಾಸಿಗಳಿಗೆ ಸಂತೆಗಳೆಂದರೆ, ಮುಖ್ಯವಾಹಿನಿಗೆ ಸೇರುವ ದ್ವಾರಗಳಂತೆ ಪರಿಣಮಿಸಿದವು. ಸಂತೆಗಳ ಒಟ್ಟು ಸ್ವರೂಪ ಈ ದೇಶದ ಅಲಕ್ಷಿತ ಆರ್ಥಿಕ ಚಟುವಟಿಕೆಗಳನ್ನು

ಸಂಘಟಿಸುವಲ್ಲಿ ನಿರ್ಧಾರವಾಯಿತು. ಹೀಗಾದ ಮಾತ್ರಕ್ಕೆ ಸಂತೆಗಳು ಬುಡಕಟ್ಟುಗಳ ಸಾಮಾಜಿಕಾರ್ಥಿಕ ಬದುಕಿನಲ್ಲಿ ನಿರ್ಣಯಾತ್ಮಕ ಪರಿಣಾಮವನ್ನೇನೂ ಬೀರಲಿಲ್ಲ. ಅಲ್ಲದೆ, ಸಂತೆಗಳು ಬುಡಕಟ್ಟುಗಳ ಬದುಕಲ್ಲಿ ಅಗಾಧ ಪರಿಣಾಮಗಳನ್ನೇನೂ ತರಲಿಲ್ಲ. ಸಂತೆಗಳೂ ಸಹ ಕಾಲಾಂತರದಲ್ಲಿ ಸ್ಥಳೀಯ ಚಿಕ್ಕ ಬಂಡವಾಳಶಾಹಿಗಳ ಕೈಗೊಂಬೆಗಳಾದವು. ಆಧುನಿಕ ಯಂತ್ರಗಳು ಉತ್ಪಾದಿಸುವ ಥಳುಕಿನ ವಸ್ತುಗಳು ಸಂತೆಯಲ್ಲಿ ಮಾರಾಟವಾಗತೊಡಗಿದ ಮೇಲೆ ಬುಡಕಟ್ಟುಗಳು ಉತ್ಪಾದಿಸಿದ ವಸ್ತುಗಳಿಗೆ ಸಹಜವಾಗಿಯೇ ಬೇಡಿಕೆ ಕಡಿಮೆಯಾಯಿತು. ಮುಖ್ಯವಾಹಿನಿಯ ಜೊತೆ ಬೆರೆಯಲು ಬುಡಕಟ್ಟುಗಳಿಗೆ ಸಹಕರಿಸಿದ ಸಂತೆಗಳು ಒಟ್ಟಾರೆಯಾಗಿ, ಆರ್ಥಿಕವಾಗಿ ಆದಿವಾಸಿಗಳಿಗೆ ಪೂರಕವಾಗೇನೂ ಇರಲಿಲ್ಲ. ಆದರೆ ಆದಿವಾಸಿಗಳು ಮುಖ್ಯವಾಹಿನಿಯ ಜೊತೆಗೆ ಬೆರೆಯುವ ನಿಟ್ಟಿನಲ್ಲಿ ಸಂತೆಗಳು ಬುಡಕಟ್ಟುಗಳ ಬದುಕಲ್ಲಿ ಮಹತ್ತರ ಪಾತ್ರ ವಹಿಸಿವೆ.

## ೫:೧ ಫಲಿತಗಳು

೧. ಸಂತೆಗಳು ಪ್ರಾಚೀನ ಕಾಲದಿಂದಲೂ ಕಂಡುಬರುತ್ತಿದ್ದು, ತನ್ನ ವಹಿವಾಟು, ವ್ಯಾಪ್ತಿ, ಸ್ವರೂಪದಲ್ಲಿ ಬದಲಾವಣೆಯನ್ನು ಹೊಂದುತ್ತಾ ಆಧುನಿಕತೆಯನ್ನು ಮೈಗೂಡಿಸಿಕೊಳ್ಳುತ್ತಾ ಸಂಕೀರ್ಣತೆಗೊಳ್ಳುತ್ತಿವೆ.

೨. ಜಾಗತೀಕರಣ ಸಂದರ್ಭದಲ್ಲಿ ಹೊಸದಾಗಿ ಆವಿಷ್ಕಾರಗೊಂಡ ವಸ್ತುಗಳಿಗೆ ನಗರ ಪ್ರದೇಶದ ಮಾರುಕಟ್ಟೆ ಅಥವಾ ಸಂಸ್ಥೆಗಳು ಮಾರಾಟ ಸ್ಥಾನಗಳಾದರೆ, ಗ್ರಾಮಾಂತರ ಪ್ರದೇಶದ ಜನರ ನಿತ್ಯೋಪಯೋಗಿ ಅಥವಾ ಜೀವನಾವಶ್ಯಕ ವಸ್ತುಗಳನ್ನು ಪೂರೈಸುವಂತವು ಗ್ರಾಮೀಣ ಪ್ರದೇಶದ ಸಂತೆಗಳಾಗಿವೆ.

೩. ಸಂತೆಯಲ್ಲಿ ಭಾಗವಹಿಸುವ ಬುಡಕಟ್ಟು ಸಮುದಾಯದವರು ಸಣ್ಣ ವ್ಯಾಪಾರಿಗಳಾಗಿದ್ದು, ತಮ್ಮ ವಸ್ತುಗಳಿಗೆ ಆಧುನಿಕ ಕೈಗಾರಿಕೆಗಳು ಒಡ್ಡುತ್ತಿರುವ ಪೈಪೋಟಿಯನ್ನು ಎದುರಿಸಲಾಗದೇ, ಇವರ ಆರ್ಥಿಕ ಸ್ಥಿತಿಗತಿಗಳು ತುಂಬಾ ಸಹಜ ಸ್ಥಿತಿಯಲ್ಲಿವೆ.

೪. ಸಂತೆಗಳ ವಹಿವಾಟಿನ ಮೊತ್ತವು ಆ ಪ್ರದೇಶದ ಜನಸಂಖ್ಯೆ ಜನಸಂಪರ್ಕ, ವಾಹನ ಸೌಲಭ್ಯ (ಸಂಚಾರ ಸೌಲಭ್ಯ) ಮತ್ತು ಆರ್ಥಿಕ ಸುಸ್ಥಿತಿಯ ಅಂಶಗಳನ್ನು ಅವಲಂಬಿಸಿರುತ್ತವೆ.

೫. ಯಾವ ಸರಕು ಯಾವ ದಿನಮಾನಗಳಲ್ಲಿ ಬೇಡಿಕೆಯ ಅಂಶವನ್ನು ಒಳಗೊಂಡಿದೆ, ಯಾವ ಸ್ಥಳಗಳಿಗೆ ಯಾವ ಸರಕು ಅತ್ಯವಶ್ಯಕ ಎಂಬುದರ ಹಿನ್ನೆಲೆಯಲ್ಲಿ ಸಂತೆಗಳು ಅಂತಹ ಸರಕನ್ನು ತನ್ನಲ್ಲಿ ಮಾರಾಟ ವಸ್ತುವನ್ನಾಗಿ ಬಳಸಿಕೊಂಡಿರುತ್ತದೆ.

೬. ಸಂತೆಯಲ್ಲಿ ಮುಖ್ಯವಾಹಿನಿಯಲ್ಲಿರುವ ಸಮುದಾಯಗಳು ವಹಿಸುವ ಪಾತ್ರದಷ್ಟೆ ಬುಡಕಟ್ಟು ಸಮುದಾಯಗಳು ಸಹ ಪಾತ್ರವಹಿಸುತ್ತವೆ.

೭. ಸಂತೆಯಲ್ಲಿ ಬುಡಕಟ್ಟು ಸಮುದಾಯಗಳು ಜೀವನೋಪಾಯ ಮಾರ್ಗವಾಗಿ ಅನೇಕ ವ್ಯವಹಾರ ಚಟುವಟಿಕೆಗಳ ಕಾಯಕವನ್ನು ಕಂಡುಕೊಂಡಿದ್ದಾರೆ.

೮. ಸಂತೆಯಲ್ಲಿ ದುಡಿಯುವ ಕೂಲಿಕಾರ್ಮಿಕರುಗಳಿಗೆ ಸಂತೆಗಳೇ ಜೀವನಾಧಾರದ ಮೂಲಗಳಾಗಿವೆ.

೯. ಸಂತೆಯಲ್ಲಿ ವ್ಯಾಪಾರ ಮಾಡುವಂತ ಬುಡಕಟ್ಟು ಸಮುದಾಯಗಳ ಬದುಕು ಅಷ್ಟೇನು ಉತ್ತಮವಾಗಿಲ್ಲ. ಕಾರಣ ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ತುಂಬಾ ಹಿಂದುಳಿದವರಾಗಿದ್ದಾರೆ. ಅಂತೆಯೇ ವ್ಯಾಪಾರ ವಹಿವಾಟಿನಲ್ಲೂ ತುಂಬಾ ಹಿಂದುಳಿದಿದ್ದಾರೆ.

೧೦. ಸಂತೆಗಳು ಬುಡಕಟ್ಟುಗಳಿಗೆ ಮುಖ್ಯವಾಹಿನಿಗೆ ಸೇರುವ ದ್ವಾರಗಳಂತೆ ಗೋಚರಿಸುತ್ತವೆ.

೧೧. ಸಂತೆಗಳು ಬುಡಕಟ್ಟುಗಳ ಉತ್ಪಾದನೆಗಳನ್ನು ಮಾರಲು ಅವಕಾಶ ಮಾಡಿಕೊಟ್ಟು ಅವುಗಳ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು ಉತ್ತಮಗೊಳ್ಳಲು ಕಾರಣವಾಗಿದೆ.

೧೨. ಕೆಲವು ಸಂದರ್ಭದಲ್ಲಿ ಸಂತೆಗಳು, ಬುಡಕಟ್ಟುಗಳ ಒಟ್ಟು ಆರ್ಥಿಕ ಚಟುವಟಿಕೆಗಳಿಗೆ ಒಸ್ಸಡೆ ಮತ್ತು ರೂಪಾಂತರಗಳಿಗೆ ಕಾರಣವಾಗಿದೆ.

೧೩. ಸಂತೆಗಳಿಂದ ಬುಡಕಟ್ಟುಗಳಿಗೆ ಅನೇಕ ರೀತಿಯಲ್ಲಿ ಅನುಕೂಲವಿದೆ ಅದರಂತೆ ಬುಡಕಟ್ಟುಗಳು ಪಾಲ್ಗೊಳ್ಳುವಿಕೆ ಮತ್ತು ಅವರ ವಹಿವಾಹಿನಿಯಿಂದ ಸಂತೆಗಳಿಗೂ ಅನುಕೂಲವಿದೆ. ಆದರೆ ಇವೆರಡರ ನಡುವಿನ ಪ್ರಮಾಣ ಅಲ್ಪಮಟ್ಟದ್ದಾಗಿದೆ.

## ೫:೨ ಸಲಹೆಗಳು

೧. ಬುಡಕಟ್ಟು ಅಂಗವಿಕಲರು, ಅಸಹಾಯಕರು ಮತ್ತು ವೃದ್ಧರಿಗೆ ಸಂತೆಯಲ್ಲಿ ಸಣ್ಣ ವ್ಯಾಪಾರ ಮಾಡುವುದಕ್ಕೆ ಸರ್ಕಾರ ಸೌಲಭ್ಯವನ್ನು ಕೊಡುವುದರ ಮೂಲಕ ಭಿಕ್ಷಾಟನೆಯಂಥ ಅನಿಷ್ಟ ಪದ್ಧತಿಯನ್ನು ಹೋಗಲಾಡಿಸಬಹುದು.

೨. ಸಂತೆಗಳು ವಿಶಾಲವಾದ ಪ್ರದೇಶದಲ್ಲಿ ವ್ಯವಸ್ಥಿತವಾಗಿ ನಡೆಸುವುದರ ಮೂಲಕ ವ್ಯಾಪಾರಗಾರರಿಗೆ, ಗ್ರಾಹಕರಿಗೆ ಮತ್ತು ಆಡಳಿತ ವ್ಯವಸ್ಥೆಗೆ ಲಾಭಕಾರವಾಗಿರುತ್ತದೆ.

೩. ಸಂತೆಯಲ್ಲಿ ಪಾಲ್ಗೊಳ್ಳುವ ಸಾರ್ವಜನಿಕರಿಗೆ ಪ್ರಾಥಮಿಕ ಸೌಲಭ್ಯವನ್ನು ಒದಗಿಸುವುದು.

೪. ಆಯಾ ಸಂತೆ ನಡೆಯುವ ಪ್ರದೇಶದಲ್ಲಿ ವಿಶೇಷ ಸಾರಿಗೆ ಸೌಲಭ್ಯವನ್ನು ಒದಗಿಸುವುದರ ಮೂಲಕ ವ್ಯಾಪಾರ ವಹಿವಾಟನ್ನು ಹೆಚ್ಚಿಸಬಹುದು.

೫. ದನಗಳ ವ್ಯಾಪಾರವನ್ನು ವ್ಯವಸ್ಥಿತವಾಗಿ ನಡೆಸುವುದರ ಮೂಲಕ ರೈತರಿಗೆ ಹೆಚ್ಚು ಹೆಚ್ಚು ಅನುಕೂಲಗಳನ್ನು ಕಲ್ಪಿಸಿಕೊಡುವುದು.

೬. ಪ್ರಾಣಿಗಳನ್ನು ಬಳಸಿಕೊಂಡು ಸಂತೆಯಲ್ಲಿ ಮನರಂಜನೆ ನೀಡುವಂತ ವ್ಯಕ್ತಿಗಳಿಗೆ ಪರ್ಯಾಯ ದುಡಿಮೆಯಲ್ಲಿ ತೊಡಗಲು ಅವಕಾಶ ಕಲ್ಪಿಸುವುದು.

೭. ಬುಡಕಟ್ಟು ಸಮುದಾಯಗಳು ಸಿದ್ಧಪಡಿಸುವ ಗೃಹ ಕೈಗಾರಿಕೆ ವಸ್ತುಗಳನ್ನು ಅಭಿವೃದ್ಧಿಪಡಿಸಿ, ಆಧುನಿಕ ವಸ್ತುಗಳ ಪೈಪೋಟಿಗೆ ಸಮರ್ಥಗೊಳಿಸುವುದು.

೮. ಸ್ಥಳೀಯ ಸಂಸ್ಥೆಗಳು ಸಂತೆಯಲ್ಲಿ ವ್ಯಾಪಾರಸ್ಥರಿಂದ ವಸೂಲಿ ಮಾಡುವ ಕಂದಾಯವು ಬಂಡವಾಳಶಾಹಿ ವ್ಯಾಪಾರಿಗಳಿಗೆ ಅಧಿಕ ಹಾಗೂ ಚಿಕ್ಕ ವ್ಯಾಪಾರಗಳಿಗೆ ಅಲ್ಪ ಪ್ರಮಾಣದಲ್ಲಿ ಕಂದಾಯವನ್ನು ನಿಗದಿಪಡಿಸಬೇಕು.

೯. ಸಂತೆಯ ವ್ಯಾಪಾರಿಗಳನ್ನು ಮಧ್ಯವರ್ತಿಗಳಿಂದ ಮುಕ್ತಗೊಳಿಸುವುದು.

"ಸಂತೆ ಮತ್ತು ಬುಡಕಟ್ಟು ಸಮುದಾಯಗಳು" ಎಂಬ ಶೀರ್ಷಿಕೆ ಅಡಿಯಲ್ಲಿ ಅಧ್ಯಯನ ಕೈಗೊಂಡು ಕಂಡುಕೊಂಡ ಅಂಶಗಳನ್ನು ಒಂದೊಂದು ಅಧ್ಯಾಯದಲ್ಲೂ ಚರ್ಚಿಸಲಾಗಿದೆ. ಬುಡಕಟ್ಟು ಸಮುದಾಯಗಳನ್ನು ಗ್ರಾಮೀಣ ಆರ್ಥಿಕ ಜೀವನಾಡಿಯಾದ ಸಂತೆಗಳ ಜೊತೆಗಿಟ್ಟು, ಸಾಂಕೇತಿಕವಾಗಿ ನೋಡಲಾಗಿದೆ. ಆದರೆ ಸಂತೆ ಎಂಬುದು ಇಡೀ ಮಾನವ ಸಮುದಾಯಕ್ಕೆ ಅತ್ಯವಶ್ಯವಾದ ಜೀವಂತ ಆರ್ಥಿಕ ಚಟುವಟಿಕೆ ಎಂಬುದರಲ್ಲಿ ಯಾವುದೇ ಸಂಶಯವಿಲ್ಲ. ಭಾರತವು ಹಳ್ಳಿಗಳಿಂದ ಕೂಡಿದ ರಾಷ್ಟ್ರ. ಶೇಕಡ ೬೦ರಷ್ಟು ಜನರು ಹಳ್ಳಿಗಳಲ್ಲಿಯೇ ವಾಸಿಸುತ್ತಿದ್ದಾರೆ. ಗ್ರಾಮ, ಹೋಬಳಿ, ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರ ಪ್ರದೇಶಗಳಲ್ಲೂ ಸಂತೆಗಳು ಇಂದಿಗೂ ತಮ್ಮ ಇರುವಿಕೆಯನ್ನು ಸಾಬೀತುಪಡಿಸುತ್ತಿವೆ ಎಂದರೆ ಸಂತೆಗಳ ಅಗತ್ಯತೆಯನ್ನು ಹೇಳುತ್ತದೆ. ಕಾಲದಿಂದ ಕಾಲಕ್ಕೆ ಸಂತೆಯಲ್ಲಿ ಮಾರಾಟ ಮಾಡುವ ಸಾಮಾನು-ಸರಂಜಾಮುಗಳಲ್ಲಿ ಬೇರ್ಪಡೆ-ಸೇರ್ಪಡೆ ಆಗಬಹುದು. ಆದರೆ ಸಂತೆ ಸಂತೆಯೇ ಹೊರತು ಬೇರೇನು ಆಗುವುದು ಸಾಧ್ಯವಿಲ್ಲ. ಏಕೆಂದರೆ ಸಂತೆಯ ಅಗತ್ಯತೆಯನ್ನು ಕಂಡುಕೊಂಡು ಮುಂದುವರಿಸುತ್ತಿರುವವರು ಮಾನವರೇ ಮುಂದೆಯೂ ಅದರೇ, ಮುಂದುವರೆಸಬೇಕಾದವನು ಅವನೇ. ಆದ್ದರಿಂದ ಮಾನವರ ಅಂತ್ಯದವರೆಗೂ ಜೀವಂತವಾಗಿ ಉಳಿಯುವ ಆರ್ಥಿಕ ವ್ಯವಸ್ಥೆಯಲ್ಲಿ ಸಂತೆಯು ಒಂದು ಎಂಬುದು ಪ್ರಸ್ತುತ ಅಧ್ಯಯನದಿಂದ ಮನವರಿಕೆಯಾಗುತ್ತದೆ. ಒಟ್ಟಾರೆ ಸಂತೆಯಿಂದ ಬುಡಕಟ್ಟು ಸಮುದಾಯಗಳಿಗೆ ಅನೇಕ ರೀತಿಯ ಲಾಭಗಳಾಗಿದ್ದು ಇದನ್ನು ಈ ಮೊದಲೇ ತಿಳಿಸಲಾಗಿದೆ. ಆದರೆ ಸಂತೆಗೆ ಬುಡಕಟ್ಟು ಸಮುದಾಯಗಳಿಂದ ಅಲ್ಪ ಪ್ರಮಾಣದ ಲಾಭವಾಗಿದ್ದಂತೂ ಖಂಡಿತ. ಕಾಲಮಿತಿಯಲ್ಲಿ ಸಂತೆ ಮತ್ತು ಬುಡಕಟ್ಟು ಸಮುದಾಯಗಳ ಚಿತ್ರಣವನ್ನು ವೈಜ್ಞಾನಿಕ ಹಂತದಲ್ಲಿ ಮೂಡಿಸಲು ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಈ ಮಧ್ಯೆ ನನಗೆ ಅರಿವಿಲ್ಲದಂತೆ ಉಳಿದ ವಿಷಯಗಳನ್ನು ಮುಂದಿನ ಅಧ್ಯಯನಕಾರರಿಗೆ ಬಿಡಲಾಗಿದೆ.

# ಅನುಬಂಧಗಳು

## ೧. ಪರಾಮರ್ಶನ ಗ್ರಂಥಗಳು


೧. ಅರ್ಜುನ ಗೊಳಸಂಗಿ, ೧೯೯೫, ಗೊಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ, ಮಲ್ಲಿಕಾರ್ಜುನ ಪ್ರಕಾಶನ, ಗೊಳಸಂಗಿ, ವಿಜಾಪುರ ಜಿಲ್ಲೆ

೨. ಯರ್ರಿಸ್ವಾಮಿ ಎನ್.ಟಿ., ೧೯೯೬, ಗ್ರಾಮೀಣ ಅಭಿವೃದ್ಧಿಗೆ ಹೊಸ ಆಯಾಮ, ಪ್ರಶಾಂತ ಪ್ರಕಾಶನ, ಹನುಮಂತಪುರ, ಚಿತ್ರದುರ್ಗ ಜಿಲ್ಲೆ

೩. ಕಪ್ಪಲಬಾಳ ಪನ್ನಂಗಧರ, ೨೦೦೪, ಮೇದರ ಸಂಸ್ಕೃತಿ ಮತ್ತು ವಾಣಿಜ್ಯ ಅಧ್ಯಯನ, (ಅಪ್ರಕಟಿತ ಪಿಎಚ್.ಡಿ. ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೪

೪. ಕರಿಶೆಟ್ಟಿ ರುದ್ರಪ್ಪ, ೧೯೯೫, ಮ್ಯಾಸನಾಯಕ ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೫. ಕಲ್ಲೂರ್ ಎಂ.ಎಸ್., ಪ್ರಭಾಕರ ಶಿಶಿಲ ಬಿ., ೨೦೦೧, ಅಂತರಾಷ್ಟ್ರೀಯ ಅರ್ಥಶಾಸ್ತ್ರ, ಕಲಾ ಪ್ರಕಾಶನ, ಬೆಂಗಳೂರು

೬. ಕಾಳೇಗೌಡ ನಾಗವಾರ, ಹುಚ್ಚಪ್ಪ ಮಾಸ್ತರ ಎನ್. (ಸಂ.), ೨೦೦೦, ಗಿರಿಜನ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೭. ಕೆಂಪೇಗೌಡ, ೧೯೭೫, ಚನ್ನರಾಯ ಪಟ್ಟಣ ತಾಲೂಕಿನ ಶನಿವಾರದ ಸಂತೆ ಗ್ರಾಮೀಣ ಪ್ರದೇಶಗಳ ಆರ್ಥಿಕಾಭಿವೃದ್ಧಿಯ ಮೇಲೆ ಇದರ ಪ್ರಭಾವ (ಅಪ್ರಕಟಿತ ಪಿಎಚ್.ಡಿ. ಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೮. ಕೃಷ್ಣಮೂರ್ತಿ ಹನೂರು, ೧೯೯೯, ಮ್ಯಾಸಬೇಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೯. ಕೃಷ್ಣಮೂರ್ತಿ ಹೊಸಬೀಡು ಎಚ್.ಆರ್., ೨೦೦೨, ಭಾರತದ ಆರ್ಥಿಕ ವ್ಯವಸ್ಥೆ, ಸಪ್ನ ಬುಕ್ ಹೌಸ್, ಬೆಂಗಳೂರು

೧೦. ಖಂಡೋಬಾ ಪಿ.ಕೆ., ೧೯೮೮, ಲಂಬಾಣಿ ಸಂಸ್ಕೃತಿ, ದಿ. ತೇಜಸಿಂಗ್ ರಾಠೋಡ್ ಮೆಮೊರಿಯಲ್ ಟ್ರಸ್ಟ್, ಗುಲಬರ್ಗಾ

೧೧. ಗಂಗಾಧರ ದೈವಜ್ಞ, ೨೦೦೦, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨. ಗಣೇಶ್ ಕೆ.ಆರ್., ಶೇಷಶಾಸ್ತ್ರಿ ಆರ್. (ಸಂ.), ೨೦೦೧, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೫, ಆಂದ್ರಪ್ರದೇಶದ ಕನ್ನಡ ಶಾಸನಗಳು ಭಾಗ ೧ ಮತ್ತು ೨. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

೧೩. ಗಣೇಶ ವ್ಹಿ. ಜಿತೂರಿ, ೧೯೯೯, ಕರ್ನಾಟಕದ ಮಾರಾಟ ತೆರಿಗೆ ಕಾಯ್ದೆ ೧೯೫೭, ಸರಸ್ವತಿ ಪಬ್ಲಿಷರ್ಸ್, ಹುಬ್ಬಳ್ಳಿ

೧೪. ಗೀತಾ ನಾಗಭೂಷಣ, ೧೯೯೩, ದುರುಗಮುರಗಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೫. ಗೋಪಾಲ್ ಬಾ.ರಾ., ೨೦೦೧, ಗೋಪಾಲರಾವ್ ಎಚ್.ಎಸ್., ಕೃಷ್ಣಮೂರ್ತಿ ಪಿ.ವಿ. (ಸಂ.), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೪, ತಮಿಳುನಾಡಿನ ಕನ್ನಡ ಶಾಸನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

೧೬. ಚಂದ್ರಪ್ಪ ಎನ್., ೧೯೯೩, ಮೊಂಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೭. ಚಿನ್ನಸ್ವಾಮಿ ಸೋಸಲೆ ಎನ್., ೨೦೦೪, ನಮ್ಮ ಗ್ರಾಮಗಳು: ಅಂದು-ಇಂದು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೮. ಜಗದೀಶ ಕುಮಾರ, ೨೦೦೪, ಬೇಡ ಬುಡಕಟ್ಟಿನ ಬೇಟೆ ಆಚರಣೆ ಒಂದು ಸಮಾಜಶಾಸ್ತ್ರೀಯ ಅಧ್ಯಯನ, (ಅಪ್ರಕಟಿತ ಎಂ.ಫಿಲ್. ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೯. ಜೋಗನ್ ಶಂಕರ್, ೧೯೯೫, ಗ್ರಾಮ ಸಮಾಜ, ಜೀವ ಪ್ರಕಾಶನ, ಮೈಸೂರು

೨೦. ದಾಕ್ಷಾಯಿಣಿ, ೧೯೯೪, ಕೃಷಿ ಮಾರುಕಟ್ಟೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೧. ದೇವರಕೊಂಡಾರೆಡ್ಡಿ (ಸಂ.), ೧೯೯೮, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧ - ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೨. ದೇವರಕೊಂಡಾರೆಡ್ಡಿ (ಸಂ.), ೧೯೯೮, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨ - ಕೊಪ್ಪಳ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೩. ದೇವರಕೊಂಡಾರೆಡ್ಡಿ (ಸಂ.), ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೭ - ರಾಯಚೂರು ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೪. ದೇವೇಂದ್ರ ಕುಮಾರ ಸಿ. ಹಕಾರಿ, ೧೯೯೩, ಡೊಂಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೫. ನಾಗರಾಜ ಎಂ.ಜಿ., ಕೃಷ್ಣಮೂರ್ತಿ ಪಿ.ವಿ., ಇತಿಹಾಸ ದರ್ಶನ ಸಂಪುಟ ೧೬, ಲೇ. ಪಾಟೀಲ ಎಂ.ಬಿ., ೨೦೦೧, ವಿಜಯನಗರದ ಕಾಲದ ಸಂತೆಗಳು ಒಂದು (ವಾಣಿಜ್ಯಕ) ಅಧ್ಯಯನ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೨೬. ನಾಗೇಗೌಡ ಎಚ್.ಎಲ್. (ಸಂ.), ೧೯೬೯, ಪ್ರವಾಸಿ ಕನ್ನಡ ಇಂಡಿಯಾ ಸಂಪುಟ ೨, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨೭. ನಾಗೇಗೌಡ ಎಚ್.ಎಲ್. (ಸಂ.), ೧೯೭೨, ಪ್ರವಾಸಿ ಕನ್ನಡ ಇಂಡಿಯಾ ಸಂಪುಟ ೪, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨೮. ನಾಗೇಗೌಡ ಎಚ್.ಎಲ್. (ಸಂ.), ೧೯೭೫, ಪ್ರವಾಸಿ ಕನ್ನಡ ಇಂಡಿಯಾ ಸಂಪುಟ ೫, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨೯. ನಾಗೇಗೌಡ ಎಚ್.ಎಲ್. (ಸಂ.), ೧೯೮೩, ಪ್ರವಾಸಿ ಕನ್ನಡ ಇಂಡಿಯಾ ಸಂಪುಟ ೭, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೩೦. ನಾಗೇಶ್ ಎಚ್.ವಿ., ೧೯೮೧, ಗ್ರಾಮ ವ್ಯಾಸಂಗ, ಚಂದ್ರನಾಥ ಪ್ರಕಾಶನ, ಧಾರವಾಡ

೩೧. ನಾಯಕ್ ಡಿ.ಬಿ. (ಸಂ.), ಗಿರಿಜನ ಸಿರಿ, ಪ್ರೊ. ಪಿ.ಕೆ. ಖಂಡೋಬಾ ಅಭಿನಂದನ ಸಮಿತಿ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೩೨. ಪ್ರಭಾಕರ ಎ.ಎಸ್., ೨೦೦೦, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

೩೩. ಪ್ರಭಾಕರ ಎ.ಎಸ್. (ಸಂ.), ೨೦೦೪, ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

೩೪. ಪ್ರಮೋದ್ ಬಾತ್ರ, ೨೦೦೪, ಗ್ರಾಹಕ ಮಹಾಶಯ ನಿಮಗೆ ಸ್ವಾಗತ, ಸ್ವಪ್ನ ಬುಕ್‌ಹೌಸ್, ಬೆಂಗಳೂರು

೩೫. ಪ್ರಹ್ಲಾದ್ ಬೆಟಗೇರಿ, ೧೯೯೩, ಅಡವಿಚೆಂಚರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೩೬. ಬೋರಲಿಂಗಯ್ಯ ಹಿ.ಚಿ., ೧೯೯೧, ಗಿರಿಜನ ನಾಡಿಗೆ ಪಯಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು

೩೭. ಬೋರಲಿಂಗಯ್ಯ ಹಿ.ಚಿ., ೧೯೯೧, ಕಾಂಡು ಕಾಂಕ್ರೀಟ್ ಮತ್ತು ಜಾನಪದ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ

೩೮. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್. (ಸಂ.), ೨೦೦೩, ಬುಡಕಟ್ಟು ಅಧ್ಯಯನ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

೩೯. ಬೆಸಕನಹಳ್ಳಿ ಜಿ. ನಾಯಕ್, ೧೯೮೨, ಮೇಲುಪಿಕಾರಿಗಳು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

೪೦. ಮೊಗಳ್ಳಿ ಗಣೇಶ್, ೧೯೯೯, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

೪೧. ಮಾನಸ, ೧೯೯೩, ಕೊರವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೨. ಮಾರುತಿ ವಿ.ಎಸ್., ೨೦೦೨, ಗೋಸಂಗಿ ಸಮುದಾಯ ಒಂದು ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೩. ಮೈತ್ರಿ ಕೆ.ಎಂ., ೨೦೦೨, ಬುಡಕಟ್ಟು ಕುಲಕಸುಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

೪೪. ಮುರಳೀಧರ ವೈ.ಜಿ., ೨೦೦೨, ಮಾರುಕಟ್ಟೆಯಲ್ಲಿ ಬಳಕೆದಾರ, ನವ ಕರ್ನಾಟಕ ಪ್ರಕಾಶನ, ಬೆಂಗಳೂರು

೪೫. ಮರುಳಸಿದ್ದಯ್ಯ ಎಚ್.ಎಂ., ೧೯೯೩, ಗ್ರಾಮೋನ್ನತ, ಸ್ವಸ್ತಿ ಪ್ರಕಾಶನ, ಬೆಂಗಳೂರು

೪೬. ಮಾಲಿ ಮುದ್ದಣ್ಣ, ೧೯೯೮, ಐ.ಎ.ಎಸ್. ಮತ್ತು ಕೆ.ಎ.ಎಸ್. ಸಾಮಾನ್ಯ ಅಧ್ಯಯನ, ಪದ್ಮ ಪ್ರಕಾಶನ, ಬೆಂಗಳೂರು

೪೭. ಯಳನಾಡು ಅಂಜಿನಪ್ಪ, ೧೯೯೩, ಹಗಲು ವೇಷದವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೮. ರಾಜೇಂದ್ರ ಚೆನ್ನಿ, ಸಿರಾಜ್ ಅಹಮದ್ ಎಸ್., ೨೦೦೪, ಜಾಗತೀಕರಣ ಒಂದು ಸಮಗ್ರ ಮಂಥನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೯. ರಾವ್ ಎಂ.ವಿ.ಆರ್., ೧೯೮೬, ಮಾರಾಟ ಕಾರ್ಯಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೫೦. ರೊಟ್ಟಿ ಎ.ಆರ್., ೧೯೮೭, ಗ್ರಾಮಾಂತರ ಪ್ರದೇಶದ ಮಾರುಕಟ್ಟೆಯ ಮಹತ್ವ, ಪ್ರಸಾರಾಂಗ, ಧಾರವಾಡ ವಿಶ್ವವಿದ್ಯಾನಿಲಯ, ಧಾರವಾಡ

೫೧. ಲಕ್ಕಪ್ಪಗೌಡ ಎಚ್.ಜೆ. (ಸಂ.), ೨೦೦೦, ಕರ್ನಾಟಕ ಬುಡಕಟ್ಟುಗಳು ಸಂಪುಟ ೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೫೨. ವಾಸುದೇವ ಸೇಡಂ ಎಚ್., ೨೦೦೩, ಚಾಣಕ್ಯ, ಜ್ಯೋತಿ ಪ್ರಕಾಶನ, ಗುಲಬರ್ಗಾ

ಶಂಕರನಾರಾಯಣರಾವ್ ಎನ್.ಪಿ., ೨೦೦೦, ಪರಿವರ್ತನೆಯ ಸುಳಿಯಲ್ಲಿ ಕಿರು ಸಮುದಾಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೫೩. ವಿಜಯಲಕ್ಷ್ಮಿ ಆರ್., ೨೦೦೪, ಲಂಬಾಣಿಗರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ, (ಅಪ್ರಕಟಿತ ಎಂ.ಫಿಲ್. ಸಂಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೪. ಶಿವಯೋಗ ಮಂದಿರ ಹಸ್ತಪ್ರತಿ, ಅಪ್ರಕಟಿತ ಹಸ್ತಪ್ರತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೫. ಶೇಷಾದ್ರಿ ಜಿ., ೧೯೯೮, ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರೀಕರಣ ಮತ್ತು ಜನಾಂದೋಳನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೫. ಶೂಮ್ಯಾಕರ್ ಇ.ಎಫ್. (ಮೂಲ), ಈಶ್ವರ ಸಿಂಪಿ (ಅನು), ೨೦೦೩, ಸ್ವಪ್ನ ಬುಕ್ ಹೌಸ್, ಬೆಂಗಳೂರು

೫೬. ಷೇಕ್‌ಅಲಿ ಬಿ. (ಸಂ), ೧೯೯೩, ಕರ್ನಾಟಕ ಚರಿತ್ರೆ ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೭. ಸಂಗಣ್ಣ ಸಣ್ಣಕ್ಕಿ, ೧೯೯೩, ಗೊಂದಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೫೮. ಪುಟ್ಟಪ್ಪ ಕೆ.ವಿ. (ಸಂ.), ೧೯೬೮, ವಾಣಿಜ್ಯಶಾಸ್ತ್ರ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೫೯. ಸದಾಶಿವ ಕೆ., ೨೦೦೫, ಸಮಗ್ರ ಭಾರತದ ಇತಿಹಾಸ, ಪ್ರಿಯದರ್ಶಿನಿ ಪ್ರಕಾಶನ, ಮೈಸೂರು

೬೦. ಸುದರ್ಶನ ಕುಮಾರ ಎಂ., ೨೦೦೨, ಬದಲಾಗುತ್ತಿರುವ ಸಮಾಜದಲ್ಲಿ ಹಕ್ಕಿಪಿಕ್ಕಿ ಸಮುದಾಯದ ಆರ್ಥಿಕ ಸ್ಥಿತಿಗತಿ, (ಅಪ್ರಕಟಿತ ಎಂ.ಫಿಲ್. ಸಂಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ

೬೧. ಸೋಮಶೇಖರ್ ಎಸ್.ವೈ., ೧೯೯೭, ಹಂಪಿಯ ಬಜಾರುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

೬೨. ಹರಿಲಾಲ್ ಕೆ. ಪವಾರ್, ೧೯೯೩, ಹೆಳವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೬೩. Anand Mohan D.C., 2003, Anubhav, Valentary Health Association of India, NewDelhi

೬೪. Edwen Jayadas, 1992, Tribals in our Global Village, Pan Media, Bangalore

೬೫. Ranga N.G., 1998, The Modern Indian Peasant, Anmol Publications, NewDelhi

೬೬. Tripathy S.N., 1998, Tribals in India, Dicovery Publishing House, NewDelhi

## ನಿಘಂಟುಗಳು

೬೭. ಪಂಡಿತ ಜೆ.ಎ. ಕವಲಿ, ೧೯೮೩, ಕಸ್ತೂರಿ ಕೋಶ, ರಾಮಾಶ್ರಮ ಬುಕ್ ಡಿಪೋ, ಧಾರವಾಡ

೬೮. ಬಸವಾರಾಧ್ಯ ಎಂ.ಎ., ೧೯೯೫, ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಂಪುಟ ೮, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೭೦. ಮಹಾದೇವಯ್ಯ ಟಿ.ಆರ್., ೧೯೯೮, ಕನ್ನಡ ಜಾನಪದ ಕೋಶ, ಕರ್ನಾಟಕ ಜಾನಪದ ಪರಿಷತ್, ಬೆಂಗಳೂರು

೭೧. ವೆಂಕಟರಮಣಯ್ಯ ಡಿ.ವಿ., ೧೯೯೪, ಕನ್ನಡ ಪಡೆನುಡಿಗಳ ಬೃಹತ್ ಕೋಶ, ಮನೋಹರ ಪಾಣೇಕರ್, ಧಾರವಾಡ

೭೨. ಶಿವರಾಮ ಕಾರಂತ, ೧೯೯೦ ಸಿರಿಗನ್ನಡ ಅರ್ಥಕೋಶ, ಎಸ್.ಬಿ.ಎಸ್. ಪಬ್ಲಿಷರ್ಸ್, ಬೆಂಗಳೂರು

## ಪತ್ರಿಕೆಗಳು

೧. ಪ್ರಜಾವಾಣಿ ದಿನಪತ್ರಿಕೆ
೨. ವಿಜಯ ಕರ್ನಾಟಕ ದಿನಪತ್ರಿಕೆ
೩. ಸಂಯುಕ್ತ ಕರ್ನಾಟಕ ದಿನಪತ್ರಿಕೆ
೪. ಉಷಾಕಿರಣ ದಿನಪತ್ರಿಕೆ
೫. ಜಾನಪದ ವಾರಪತ್ರಿಕೆ
೬. Economic and Political Weekly
೭. Economic Thoughts

## ೨. ವಕ್ತೃಗಳ ವಿವರ

| ಕ್ರ. ಸಂ. | ಹಸರು | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ | ವಿಳಾಸ |
|---|---|---|---|---|---|---|
| ೧. | ಗಂಗಮ್ಮ | ೬೫ | ಕೊರವರು | | ಪೊರಕೆ ಮಾರಾಟ | ಕೊಪ್ಪಳ ಅಂಚೆ, ತಾಲೂಕು ಕೊಪ್ಪಳ ಜಿಲ್ಲೆ |
| ೨. | ದುರುಗಮ್ಮ | ೩೫ | ಕೊರವರು | | ಪೊರಕೆ ಮಾರಾಟ | ಕೊಪ್ಪಳ ಅಂಚೆ, ತಾಲೂಕು ಕೊಪ್ಪಳ ಜಿಲ್ಲೆ |
| ೩. | ಗಂಗಮ್ಮ ಗಂಡ ರಾಮಪ್ಪ | ೫೫ | ಕೊರವರು | | ಪೊರಕೆ ಮಾರಾಟ | ಕೊಪ್ಪಳ ಅಂಚೆ, ತಾಲೂಕು ಕೊಪ್ಪಳ ಜಿಲ್ಲೆ |
| ೪. | ಶಕುಂತಲಾ | ೪೦ | ಮೇದರು | ೦೪ | ಬಿದಿರಿನಿಂದ ತಯಾರಿಸಿದ ವಸ್ತುಗಳ ಮಾರಾಟ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೫. | ಜಯಮ್ಮ | ೪೮ | ಮೇದರು | ೦೩ | ಬಿದಿರಿನಿಂದ ತಯಾರಿಸಿದ ವಸ್ತುಗಳ ಮಾರಾಟ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೬. | ನಾಗಮ್ಮ | ೪೫ | ಮೇದರು | ೦೩ | ಬಿದಿರಿನಿಂದ ತಯಾರಿಸಿದ ವಸ್ತುಗಳ ಮಾರಾಟ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೭. | ಶ್ರೀನಿವಾಸ | ೨೮ | ಮೇದರು | ೧೦ | ಬಿದಿರಿನಿಂದ ತಯಾರಿಸಿದ ವಸ್ತುಗಳ ಮಾರಾಟ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೮. | ಉಮಾ | ೩೫ | ಹಂಡಿ ಜೋಗೆರ್ | ೦೭ | ಜನರಲ್ ಸ್ಟೋರ್ಸ್ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೯. | ಎಲ್ಲಮ್ಮ | ೩೫ | ಹಂಡಿ ಜೋಗೆರ್ | | ಜನರಲ್ ಸ್ಟೋರ್ಸ್ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೧೦. | ಗಾಳೆಮ್ಮ | ೨೪ | ಹಂಡಿ ಜೋಗೆರ್ | | ಜನರಲ್ ಸ್ಟೋರ್ಸ್ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |

| | | | | | |
|---|---|---|---|---|---|
| ೧೧. ಲಕ್ಷ್ಮಿ | ೪೫ | ಹಂಡಿ ಜೋಗರ್ | | ಜನರಲ್ ಸ್ಟೋರ್ | ಅನಂತಶಯನ ಗುಡಿ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೨. ರಸೂಲ್ | ೩೨ | ಮುಸ್ಲಿಂ | ಬಿ.ಎ. | ಕೃಷಿ ಸಲಕರಣೆ<br>ಮಾರಾಟ | ಹೊಸಪೇಟೆ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೩. ದಾದಪೀರ್ | ೩೬ | ಮುಸ್ಲಿಂ | ಬಿ.ಎ. | ಕೃಷಿ ಸಲಕರಣೆ<br>ಮಾರಾಟ | ಗಂಗಾವತಿ ಅಂಚೆ, ತಾಲೂಕು<br>ಕೊಪ್ಪಳ ಜಿಲ್ಲೆ |
| ೧೪. ಉಸಯಾನ್ | ೨೮ | ಮುಸ್ಲಿಂ | ೦೮ | ಕೃಷಿ ಸಲಕರಣೆ<br>ಮಾರಾಟ | ಹೊಸಪೇಟೆ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೫. ಸೀನಪ್ಪ | ೨೭ | ಶೆಟ್ಟಿಬಣಜಿಗ | ೦೮ | ಮಸಾಲಾ ವ್ಯಾಪಾರಿ | ಹೊಸಪೇಟೆ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೬. ಚಂದ್ರಶೇಖರ | ೧೮ | ಪದ್ಮಶಾಲಿ | ಪಿ.ಯು.ಸಿ. | ಮಸಾಲಾ ವ್ಯಾಪಾರಿ | ಹೊಸಪೇಟೆ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೭. ಜಯಣ್ಣ | ೪೨ | ಶೆಟ್ಟಿಬಣಜಿಗ | ಪಿ.ಯು.ಸಿ. | ಧಾನ್ಯ ವ್ಯಾಪಾರಿ | ಹೊಸಪೇಟೆ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೮. ಡಿ. ಬಂಡಪ್ಪ | ೨೮ | ಪದ್ಮಶಾಲಿ | ೧೦ | ಧಾನ್ಯ ವ್ಯಾಪಾರಿ | ಕೆಂಚಕನ ಹಳ್ಳಿ ಅಂಚೆ<br>ಹೆಚ್.ಬಿ.ಹಳ್ಳಿ ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೯. ಮಾಬೂ | ೩೫ | ಮುಸ್ಲಿಂ | ೦೭ | ಧಾನ್ಯ ವ್ಯಾಪಾರಿ | ಕಮಲಾಪುರ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೨೦. ಷರಿನ್ | ೧೫ | ಮುಸ್ಲಿಂ | ೦೮ | ಧಾನ್ಯ ವ್ಯಾಪಾರಿ | ಕಮಲಾಪುರ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೨೧. ಸಾಧಿಕ್ | ೨೦ | ಮುಸ್ಲಿಂ | ೦೯ | ಧಾನ್ಯ ವ್ಯಾಪಾರಿ | ಕಮಲಾಪುರ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೨೨. ಜಯಮ್ಮ | ೪೫ | ಬೇಡರು | | ಮೀನಿನ ವ್ಯಾಪಾರಿ | ಹೊಸಪೇಟೆ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೨೩. ಶಿವಲಿಂಗಮ್ಮ | ೬೦ | ಕುಂಬಾರರು | | ಮಣ್ಣಿನಿಂದ<br>ತಯಾರಿಸಿದ ವಸ್ತುಗಳ<br>ಮಾರಾಟ | ಹೊಸಮಲಪನಗುಡಿ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |

| | | | | | | |
|---|---|---|---|---|---|---|
| ೨೪. | ಮಹಾಲಕ್ಷ್ಮಿ | ೬೫ | ಕುಂಬಾರರು | | ಮಣ್ಣಿನಿಂದ ತಯಾರಿಸಿದ ವಸ್ತುಗಳ ಮಾರಾಟ | ಹೊಸಮಲಪನಗುಡಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೨೫. | ರಾಮಪ್ಪ | ೮೬ | ಕುಂಬಾರರು | ೦೪ | ಮಣ್ಣಿನಿಂದ ತಯಾರಿಸಿದ ವಸ್ತುಗಳ ಮಾರಾಟ | ಹೊಸಮಲಪನಗುಡಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೨೬. | ರಾಜ | ೨೧ | ಹಗಲು ವೇಷಗಾರರು | | ಗಿಳಿಶಾಸ್ತ್ರ ಹೇಳುವುದು | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೨೭. | ಗೋಮಬಾಯಿ | ೩೬ | ಲಂಬಾಣಿ | | ಕಟ್ಟಿಗೆ ಮಾರುವುದು | ಮರಿಯಮ್ಮನಹಳ್ಳಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೨೮. | ಲಾಲಕಿಬಾಯಿ | ೬೩ | ಲಂಬಾಣಿ | | ಕಾಡಿನ ಹಣ್ಣಿನ ಮಾರಾಟ | ಕೆರೆತಾಂಡ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೨೯. | ರಾಸಾ ನಾಯ್ಕ | ೪೫ | ಲಂಬಾಣಿ | | ಸಂತೆಯ ಗ್ರಾಹಕ | ಕೆರೆತಾಂಡ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೩೦. | ಚಿಕ್ಕಮ್ಮ | ೪೫ | ಶೆಟ್ಟಿಬಣಜಿಗ | | ದಿನಸಿ ವ್ಯಾಪಾರಿ | ಕಂಪ್ಲಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೩೧. | ಲಕ್ಷ್ಮಿ | ೪೦ | ಬೇಡರು | | ತರಕಾರಿ ವ್ಯಾಪಾರಿ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೩೨. | ಹನುಮಂತ | ೪೨ | ಬೇಡರು | | ತರಕಾರಿ ವ್ಯಾಪಾರಿ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೩೩. | ಗೋವಿಂದಪ್ಪ | ೪೦ | ಬೇಡರು | | ಬೆಳ್ಳುಳ್ಳಿ ಮತ್ತು ಹುಣಿಸೆಹಣ್ಣು ವ್ಯಾಪಾರಿ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೩೪. | ಗುಂಡಮ್ಮ | ೩೫ | ಬೇಡರು | ೦೭ | ತರಕಾರಿ ವ್ಯಾಪಾರಿ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೩೫. | ದ್ಯಾಮಮ್ಮ | ೬೫ | ಬೇಡರು | | ಒಣ ಮೆಣಸಿನಕಾಯಿ ವ್ಯಾಪಾರಿ | ಮದ್ದಟ್ಟಿ ಅಂಚೆ ಬಳ್ಳಾರಿ ತಾಲೂಕು, ಜಿಲ್ಲೆ |
| ೩೬. | ಅನ್ನಪೂರ್ಣಮ್ಮ | ೩೨ | ಕುರುಬರು | | ತರಕಾರಿ ವ್ಯಾಪಾರಿ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |

| | | | | | |
|---|---|---|---|---|---|
| ೩೭. ವೆಂಕಟೇಶ | ೨೮ | ಶೆಟ್ಟರು | ಬಿ.ಎ. | ಒಣ ಮೆಣಸಿನಕಾಯಿ ವ್ಯಾಪಾರಿ | ಕಮಲಾಪುರ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೩೮. ರಾಜಭಕ್ಷಿ | ೨೨ | ಮುಸ್ಲಿಂ | | ಮಸಲಾ ವ್ಯಾಪಾರಿ | ಗಂಗಾವತಿ ಅಂಚೆ, ತಾಲೂಕು ಕೊಪ್ಪಳ ಜಿಲ್ಲೆ |
| ೩೯. ಅಂಜಿನಿ | ೩೦ | ಹರಿಜನ | ೦೫ | ಮಸಲಾ ವ್ಯಾಪಾರಿ | ಹೊಸಪೇಟೆ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೪೦. ವೆಂಕಟಮ್ಮ | ೭೫ | ಹಕ್ಕಿಪಿಕ್ಕಿ | | ಭಿಕ್ಷುಕರು | ಕಂಪ್ಲಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೪೧. ಮೋತಿ | ೩೦ | ಹಕ್ಕಿಪಿಕ್ಕಿ | ಬಿ.ಎ. | ಕೂಲಿಕಾರ್ಮಿಕ | ಕಂಪ್ಲಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೪೨. ಶ್ರೀಕಾಂತ | ೩೨ | ಹಕ್ಕಿಪಿಕ್ಕಿ | ೦೨ | ಕೂಲಿಕಾರ್ಮಿಕ | ಕಂಪ್ಲಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೪೩. ರಾಮುಲಮ್ಮ | ೩೩ | ಹಕ್ಕಿಪಿಕ್ಕಿ | | ಕೂಲಿಕಾರ್ಮಿಕ | ಕಂಪ್ಲಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೪೪. ರಾಜ | ೧೮ | ಬೇಡರು | | ಹಣ್ಣಿನ ವ್ಯಾಪಾರಿ | ಕಂಪ್ಲಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೪೫. ಶಕುಂತಲಾ | ೪೦ | ಕಬ್ಬೇರ್ | | ಸುಣ್ಣದ ವ್ಯಾಪಾರಿ | ಕಂಪ್ಲಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೪೬. ಗೌರಮ್ಮ | ೪೫ | ಕುರುಬರು | | ಸುಣ್ಣದ ವ್ಯಾಪಾರಿ | ಕಂಪ್ಲಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೪೭. ಅಕ್ಬರ್‌ಬಾಷಾ | ೩೭ | ಮುಸ್ಲಿಂ | | ಪ್ಲಾಸ್ಟಿಕ್ ವಸ್ತುಗಳ ವ್ಯಾಪಾರಿ | ಕಂಪ್ಲಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |

| | | | | | | |
|---|---|---|---|---|---|---|
| ೪೮. | ನಾಗಪ್ಪ | ೩೫ | ಶೆಟ್ಟಿಬಣಜಿಗ | | ಊಪಿನಕಡ್ಡಿ ವ್ಯಾಪಾರಿ | ಕಂಪ್ಲಿ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೪೯. | ಸಿದ್ದಮ್ಮ | ೮೦ | ಕುಂಬಾರರು | | ಮಣ್ಣಿನ ವಸ್ತುಗಳ ಮಾರಾಟ | ಕಂಪ್ಲಿ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೫೦. | ಶ್ರೀನಿವಾಸ | ೪೦ | ಭಜಂತ್ರಿ | ಬಿ.ಎ. | ಹಣ್ಣಿನ ವ್ಯಾಪಾರಿ | ಕಂಪ್ಲಿ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೫೧. | ಅಯ್ಯಪ್ಪ | ೨೨ | ಲಿಂಗಾಯತ | ೦೯ | ಹೂವಿನ ವ್ಯಾಪಾರಿ | ಕಂಪ್ಲಿ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೫೨. | ಬಸವರಾಜ | ೨೯ | ಕಜ್ಜೇರ್ | | ನಿಂಬೆಹಣ್ಣು ವ್ಯಾಪಾರಿ | ಕಂಪ್ಲಿ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೫೩. | ಮಹಮ್ಮದ್ | ೨೩ | ಮುಸ್ಲಿಂ | ೧೦ | ನಿಂಬೆಹಣ್ಣು ವ್ಯಾಪಾರಿ | ಕಂಪ್ಲಿ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೫೪. | ಮಂಜುನಾಥ | ೧೮ | ಬಾರಿಕೇರು | ಪಿ.ಯು.ಸಿ. | ಎಲೆ ವ್ಯಾಪಾರಿ | ಕಂಪ್ಲಿ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೫೫. | ನಾರಾಯಣಪ್ಪ | ೪೦ | ನೇಕಾರ್ | | ತಂಬಾಕು ವ್ಯಾಪಾರಿ | ಕಂಪ್ಲಿ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೫೬. | ರಾಜಾಸಾಬ್ | ೬೫ | ಮುಸ್ಲಿಂ | | ತಂಬಾಕು ವ್ಯಾಪಾರಿ | ಬಳ್ಳಾರಿ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೫೭. | ದೊಡ್ಡೂರ್ ಸಾಬ್ | ೪೫ | ಮುಸ್ಲಿಂ | | ಕುರಿಮಾಂಸ ವ್ಯಾಪಾರಿ | ಕಂಪ್ಲಿ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೫೮. | ಲಕ್ಷ್ಮಣಪ್ಪ | ೪೫ | ಕುರುಬರು | | ಕುರಿ ಮಾರುವವರು ಮತ್ತು ಗ್ರಾಹಕ | ನಲವಾಡಿ ಅಂಚೆ<br>ಬೆಳಗಾಂ ಜಿಲ್ಲೆ |

| | | | | | |
|---|---|---|---|---|---|
| ೫೯. ಬೀಬಿ | ೩೫ | ಮುಸ್ಲಿಂ | | ಒಣ ಮೀನು ಮಾರುವವರು | ಕಂಪ್ಲಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೬೦. ಮಾಬೂಬಿ | ೫೫ | ಮುಸ್ಲಿಂ | | ಒಣ ಮೀನು ಮಾರುವವರು | ಕಂಪ್ಲಿ ಅಂಚೆ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ |
| ೬೧. ಯಮನಪ್ಪ | ೪೦ | ಬೇಡರು | | ಚಾಪೆ ವ್ಯಾಪಾರ | ಎಕ್ಕ ಅಂಚೆ ಕೂಡ್ಲಿಗಿ ತಾಲೂಕು ಬಳ್ಳಾರಿ ಜಿಲ್ಲೆ |
| ೬೨. ಶರಣಪ್ಪ | ೪೦ | ಲಿಂಗಾಯತ | ೦೪ | ತೆಂಗಿನಕಾಯಿ ವ್ಯಾಪಾರಿ | ಭೀಮನ ಸಮುದ್ರ ಅಂಚೆ ಕೂಡ್ಲಿಗಿ ತಾಲೂಕು ಬಳ್ಳಾರಿ ಜಿಲ್ಲೆ |
| ೬೩. ನಾಗರಾಜ | ೨೫ | ಹರಿಜನ | | ಬಾಳೆಹಣ್ಣು ವ್ಯಾಪಾರಿ | ನಾಣ್ಯಾಪುರ ಅಂಚೆ ಕೂಡ್ಲಿಗಿ ತಾಲೂಕು ಬಳ್ಳಾರಿ ಜಿಲ್ಲೆ |
| ೬೪. ಬೋಜರಾಜ | ೧೪ | ಶೆಟ್ಟಿಬಣಜಿಗ | ೦೬ | ಕುಂಕುಮ ವ್ಯಾಪಾರಿ | ಚೋರನೂರು ಅಂಚೆ ಸಂಡೂರು ತಾಲೂಕು ಬಳ್ಳಾರಿ ಜಿಲ್ಲೆ |
| ೬೫. ಶ್ರೀನಿವಾಸ | ೬೫ | ಶೆಟ್ಟರು | | ಮಿಠಾಯಿ ಅಂಗಡಿ | ಉಜ್ಜಿನಿ ಅಂಚೆ ಕೂಡ್ಲಿಗಿ ತಾಲೂಕು ಬಳ್ಳಾರಿ ಜಿಲ್ಲೆ |
| ೬೬. ಬಸವರಾಜಪ್ಪ | ೫೩ | ಶೆಟ್ಟರು | ೦೫ | ಬಳೆ ವ್ಯಾಪಾರಿ | ಕೂಡ್ಲಿಗಿ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೬೭. ಪರಶುರಾಮ | ೧೮ | ದೊಂಬರು | ೦೭ | ಪಾನ್‌ಶಾಪ್ ವ್ಯಾಪಾರಿ | ಕೂಡ್ಲಿಗಿ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೬೮. ನಾಗೇಂದ್ರ | ೨೮ | ನೇಕಾರರು | ೧೦ | ಸೋಡಾ ವ್ಯಾಪಾರಿ | ಕೂಡ್ಲಿಗಿ ಅಂಚೆ, ತಾಲೂಕು ಬಳ್ಳಾರಿ ಜಿಲ್ಲೆ |
| ೬೯. ದೇವರಾಜ ಎಂ. | ೩೮ | ಮೇದರು | | ಬಿದಿರಿನ ವಸ್ತುಗಳ ಮಾರಾಟ | ಹಗರಿಬೊಮ್ಮನಹಳ್ಳಿ ಅಂಚೆ ಹಗರಿಬೊಮ್ಮನಹಳ್ಳಿ ತಾ. ಬಳ್ಳಾರಿ ಜಿಲ್ಲೆ |
| ೭೦. ಜಿ. ರಾಮಸ್ವಾಮಿ | [illegible] | ಕಿಂದರಜೋಗಿ | ೦೩ | ಭಿಕ್ಷಾಟನೆ | ಕಪ್ಪಳ್ಳಿ ಅಂಚೆ ಕೂಡ್ಲಿಗಿ ತಾಲೂಕು ಬಳ್ಳಾರಿ ಜಿಲ್ಲೆ |

| | | | | | |
|---|---|---|---|---|---|
| ೨೧. ನಾಗರಾಜ | ೬೦ | ಬುಡಬುಡಕಿ | ೦೬ | ಭಿಕ್ಷಾಟನೆ | ರಾಮದುರ್ಗ ಅಂಚೆ<br>ಕೂಡ್ಲಿಗಿ ತಾಲೂಕು<br>ಬಳ್ಳಾರಿ ಜಿಲ್ಲೆ |
| ೨೨. ಶಿವಪ್ಪ | ೬೦ | ಸುಡುಗಾಡು<br>ಸಿದ್ಧರು | | ಭಿಕ್ಷಾಟನೆ | ಜೊಟ್ಟವಿಕೆ ಅಂಚೆ<br>ಕೂಡ್ಲಿಗಿ ತಾಲೂಕು<br>ಬಳ್ಳಾರಿ ಜಿಲ್ಲೆ |
| ೨೩. ಹನುಮಂತ | ೩೫ | ಜೇಡರು | | ಜೋಗಪ್ಪ<br>ಭಿಕ್ಷಾಟನೆ | ಕೂಡ್ಲಿಗಿ ಅಂಚೆ. ತಾಲೂಕು<br>ಬಳ್ಳಾರಿ ಜಿಲ್ಲೆ |
| ೨೪. ಮದ್ದಾನ ಮಾರೆಮ್ಮ | ೨೦ | ಜೇಡರು | | ಜೋಗಮ್ಮ<br>ಭಿಕ್ಷಾಟನೆ | ಕಮಲಾಪುರ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೨೫. ನಾಗರಾಜ | ೬೮ | ಗೋಸಾಯಿ | | ಪ್ಲಾಸ್ಟಿಕ್ ಮತ್ತು<br>ಸೋಫಾಸೆಟ್ ರಿಪೇರಿ | ಹೊಸಪೇಟೆ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೨೬. ರಾಜ | ೨೮ | ಗೋಸಾಯಿ | | ಸೆಂಟ್ ವ್ಯಾಪಾರಿ | ಹೊಸಪೇಟೆ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಜಿಲ್ಲೆ |
| ೨೭. ಪರಶುರಾಮ | ೨೨ | ಕೊರವರು | ಬಿ.ಎ. | ಚಾಪೆ ವ್ಯಾಪಾರಿ | ಹಂಪಸಾಗರ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೨೮. ಕರಿಬಸವರಾಜು | ೨೫ | ಲಿಂಗಾಯತ | ೧೦ | ಬಟ್ಟೆ ವ್ಯಾಪಾರಿ | ಹೊಳಗುಂದಿ ಅಂಚೆ<br>ಹೂ. ಹಡಗಲಿ ತಾಲೂಕು<br>ಬಳ್ಳಾರಿ ಜಿಲ್ಲೆ |
| ೨೯. ತಿಮ್ಮಪ್ಪ | ೩೫ | ಕೊರವರು | | ಚಾಪೆ ವ್ಯಾಪಾರಿ | ಹಗರಿಬೊಮ್ಮನಹಳ್ಳಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೩೦. ಈರಣ್ಣ | ೪೫ | ಲಿಂಗಾಯತ | ಬಿ.ಎ. | ಕಿರಾಣಿ ವ್ಯಾಪಾರಿ | ಹೂ. ಹಡಗಲಿ ಅಂಚೆ, ತಾ.<br>ಬಳ್ಳಾರಿ ಜಿಲ್ಲೆ |
| ೩೧. ರಾಮಪ್ಪ | ೪೫ | ಜ್ಯೋಗೇರ್ | | ಬೀಗ ರಿಪೇರಿ | ಹೂ. ಹಡಗಲಿ ಅಂಚೆ<br>ಬಳ್ಳಾರಿ ಜಿಲ್ಲೆ |
| ೩೨. ದುರುಗಪ್ಪ | ೫೦ | ಜ್ಯೋಗೇರ್ | | ಜನರಲ್ ಸ್ಟೋರ್ಸ್ | ಹೂ. ಹಡಗಲಿ ಅಂಚೆ<br>ಬಳ್ಳಾರಿ ಜಿಲ್ಲೆ |

| | | | | | |
|---|---|---|---|---|---|
| ೮೩. ನಾಗಮ್ಮ | ೩೫ | ಜ್ಯೋಗೇರ್ | | ಜನರಲ್ ಸ್ಟೋರ್ | ಹೊಳಲು ಅಂಚೆ<br>ಹೂವಿನ ಹಡಗಲಿ ತಾ.<br>ಬಳ್ಳಾರಿ ಜಿಲ್ಲೆ |
| ೮೪. ರತ್ನಮ್ಮ | ೩೫ | ಜ್ಯೋಗೇರ್ | | ಜನರಲ್ ಸ್ಟೋರ್ | ಹೂವಿನ ಹಡಗಲಿ ಅಂಚೆ, ತಾ.<br>ಬಳ್ಳಾರಿ ಜಿಲ್ಲೆ |
| ೮೫. ಕಸ್ತೂರಪ್ಪ | ೩೬ | ಜ್ಯೋಗೇರ್ | | ಜನರಲ್ ಸ್ಟೋರ್ | ತಿಪ್ಪಾಪುರ ಅಂಚೆ<br>ಹಡಗಲಿ ತಾಲೂಕು<br>ಬಳ್ಳಾರಿ ಜಿಲ್ಲೆ |
| ೮೬. ಪಾರಮ್ಮ | ೪೫ | ಜ್ಯೋಗೇರ್ | | ಜನರಲ್ ಸ್ಟೋರ್ಸ್ | ತಿಪ್ಪಾಪುರ ಅಂಚೆ<br>ಹೂವಿನ ಹಡಗಲಿ ತಾಲೂಕು<br>ಬಳ್ಳಾರಿ ಜಿಲ್ಲೆ |
| ೮೭. ಗೌರಮ್ಮ | ೩೫ | ಗೋಸಂಗಿ | ೦೪ | ಜನರಲ್ ಸ್ಟೋರ್ಸ್ | ತಿಪ್ಪಾಪುರ ಅಂಚೆ<br>ಹೂವಿನ ಹಡಗಲಿ ತಾಲೂಕು<br>ಬಳ್ಳಾರಿ ಜಿಲ್ಲೆ |
| ೮೮. ಪದ್ಮವ್ವ | ೫೦ | ಗೋಸಂಗಿ | | ಜನರಲ್ ಸ್ಟೋರ್ಸ್ | ಹೂವಿನ ಹಡಗಲಿ ಅಂಚೆ, ತಾ.<br>ಬಳ್ಳಾರಿ ಜಿಲ್ಲೆ |
| ೮೯. ಬಸವರಾಜ | ೨೬ | ಬೇಡರು | ೦೭ | ಬಾಳೆಹಣ್ಣು ವ್ಯಾಪಾರಿ | ಗದ್ದಿಕೇರಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೯೦. ಮರಿಯಜ್ಜಿ | ೪೦ | ಉಪ್ಪಾರ್ | | ತರಕಾರಿ ವ್ಯಾಪಾರಿ | ಕೊಂಡನಹಳ್ಳಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೯೧. ಬಸವರಾಜ | ೩೧ | ಬೇಡರು | ಬಿ.ಎ. | ಬಾಳೆಹಣ್ಣು ವ್ಯಾಪಾರಿ | ಗದ್ದಿಕೇರಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೯೨. ಟಿ. ಪಕ್ಕೀರಪ್ಪ | ೨೭ | ಬೇಡರು | ಪಿ.ಯು.ಸಿ. | ಬಾಳೆಹಣ್ಣು ವ್ಯಾಪಾರಿ | ಗದ್ದಿಕೇರಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೯೩. ರಹಮತ್ತುಲ್ಲಾ ಸಾಹೇಬ್ | ೪೮ | ಮುಸ್ಲಿಂ | | ಎಲೆ ವ್ಯಾಪಾರಿ | ಹೂವಿನ ಹಡಗಲಿ ಅಂಚೆ, ತಾ.<br>ಬಳ್ಳಾರಿ ಜಿಲ್ಲೆ |
| ೯೪. ಜಹರುದ್ದೀನ್ | [illegible] | ಮುಸ್ಲಿಂ | ೦೪ | ಹೂ, ಹಣ್ಣಿನ ವ್ಯಾಪಾರಿ | ಹೂವಿನ ಹಡಗಲಿ ಅಂಚೆ, ತಾ.<br>ಬಳ್ಳಾರಿ ಜಿಲ್ಲೆ |

| | | | | | |
|---|---|---|---|---|---|
| ೯೫. ಬಾಟಪ್ಪ | ೪೫ | ದುರುಗಮುರುಗಿ | | ಭಿಕ್ಷಾಟನೆ | ಹೂವಿನ ಹಡಗಲಿ ಅಂಚೆ, ತಾ.<br>ಬಳ್ಳಾರಿ ಜಿಲ್ಲೆ |
| ೯೬. ಮಾರೆಪ್ಪ | ೩೫ | ದುರುಗಮುರುಗಿ | | ಭಿಕ್ಷಾಟನೆ | ಹೂವಿನ ಹಡಗಲಿ ಅಂಚೆ, ತಾ.<br>ಬಳ್ಳಾರಿ ಜಿಲ್ಲೆ |
| ೯೭. ಲಕ್ಷ್ಮಿ | ೩೮ | ಲಂಬಾಣಿ | | ಲಂಬಾಣಿ ಉಡುಪು<br>ಮತ್ತು<br>ಆಭರಣಗಳ ವ್ಯಾಪಾರಿ | ಕಂಗಲಕಟ್ಟೆ ತಾಂಡ ಅಂಚೆ<br>ಹೂವಿನ ಹಡಗಲಿ ತಾ.<br>ಬಳ್ಳಾರಿ ಜಿಲ್ಲೆ |
| ೯೮. ಪಕ್ಕೀರಪ್ಪ | ೩೮ | ಲಂಬಾಣಿ | | ಲಂಬಾಣಿ ಉಡುಪು<br>ಮತ್ತು<br>ಆಭರಣಗಳ ವ್ಯಾಪಾರಿ | ಹಿರಾಪುರ ತಾಂಡ ಅಂಚೆ<br>ಹೂವಿನ ಹಡಗಲಿ ತಾ.<br>ಬಳ್ಳಾರಿ ಜಿಲ್ಲೆ |
| ೯೯. ಮಂಜುನಾಥಗೌಡ | ೪೫ | ಲಿಂಗಾಯತ | ೦೬ | ಕೂಲಿಕಾರ್ಮಿಕ | ಹನಸಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೧೦೦.ಹನುಮಂತಪ್ಪ | ೫೬ | ಬೇಡರು | ೦೪ | ಕೂಲಿಕಾರ್ಮಿಕ | ಹನಸಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೧೦೧.ಬಾಬುರಿ ಕೆಂಚಪ್ಪ | ೫೧ | ಬಾರಿಕರು | | ಕೂಲಿಕಾರ್ಮಿಕ | ಹನಸಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೧೦೨.ಮಹೇಶಪ್ಪ | ೪೫ | ಲಿಂಗಾಯತ | | ತರಕಾರಿ ವ್ಯಾಪಾರಿ | ಉಪ್ಪರಗಟ್ಟೆ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೧೦೩.ಕೆ. ಸುಬಾನ್ ಸಾಹೇಬ್ | ೨೮ | ಮುಸ್ಲಿಂ | ಪಿ.ಯು.ಸಿ. | ಮಸಾಲಾ ವ್ಯಾಪಾರಿ | ಮಾನವಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೧೦೪.ಸಾವಿತ್ರಮ್ಮ | ೪೦ | ಬೇಡರು | | ತರಕಾರಿ ವ್ಯಾಪಾರ | ಹಗರಿಬೊಮ್ಮನಹಳ್ಳಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೧೦೫.ಚೌಡಮ್ಮ | ೬೦ | ಬೇಡರು | | ತರಕಾರಿ ವ್ಯಾಪಾರ | ಹನಸಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |

| | | | | |
|---|---|---|---|---|
| ೧೦೬.ಅಜ್ಜಪ್ಪ | ೩೦ | ಬೇಡರು | | ತರಕಾರಿ ವ್ಯಾಪಾರ | ಕಾಟಿನ ಕಂಭ ಅಂಚೆ<br>ಸಂಡೂರು ತಾ.<br>ಬಳ್ಳಾರಿ ಜಿಲ್ಲೆ |
| ೧೦೭.ಲೋಕಮ್ಮ | ೪೫ | ಪದ್ಮಶಾಲಿ | | ತರಕಾರಿ ವ್ಯಾಪಾರಿ | ಕುರುಕುಪ್ಪೆ ಅಂಚೆ<br>ಸಂಡೂರು ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೦೮.ಬಸಮ್ಮ | ೫೦ | ಪದ್ಮಶಾಲಿ | ೦೩ | ತರಕಾರಿ ವ್ಯಾಪಾರಿ | ಕುರುಕುಪ್ಪೆ ಅಂಚೆ<br>ಸಂಡೂರು ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೦೯.ರಮ್ಮಜಿಬಿ | ೩೦ | ಮುಸ್ಲಿಂ | | ಹಣ್ಣಿನ ವ್ಯಾಪಾರಿ | ಸಂಡೂರು ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೧೦.ಅನುಸೂಯಾ | ೨೫ | ಕೊರವರು | | ತರಕಾರಿ ವ್ಯಾಪಾರ | ಸಂಡೂರು ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೧೧.ರಾಮಕ್ಕ | ೩೦ | ಕೊರವರು | | ತರಕಾರಿ ವ್ಯಾಪಾರ | ಸಂಡೂರು ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೧೨.ಶಂಕ್ರಮ್ಮ | ೩೫ | ಕೊರವರು | | ತರಕಾರಿ ವ್ಯಾಪಾರ | ಸಂಡೂರು ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೧೩.ಗಂಗಮ್ಮ | ೩೦ | ಕುರುಬರು | | ಹೂ ತರಕಾರಿ ವ್ಯಾಪಾರಿ | ಹಗರಿಬೊಮ್ಮನಹಳ್ಳಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |
| ೧೧೪.ಎರ್ರಮ್ಮ | ೨೫ | ಬೇಡರು | ೦೫ | ತರಕಾರಿ ವ್ಯಾಪಾರಿ | ಸಂಡೂರು ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೧೫.ಜಂಬಯ್ಯ | ೩೫ | ಬೇಡರು | ೦೫ | ತರಕಾರಿ ವ್ಯಾಪಾರಿ | ಸಂಡೂರು ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೧೬.ಭೀಮೇಶ | ೩೦ | ಲಿಂಗಾಯತ | ೦೭ | ತರಕಾರಿ ವ್ಯಾಪಾರಿ | ಸಂಡೂರು ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೧೭.ಗೌರಮ್ಮ | ೨೫ | ಕೊರವರು | | ಜನರಲ್ ಸ್ಟೋರ್ಸ್ | ಸಂಡೂರು ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೧೮. ರುದ್ರೇಶ | ೧೭ | ಜ್ಯೋಗೇರ್ | | ಜನರಲ್ ಸ್ಟೋರ್ಸ್ | ಕೂಡ್ಲಿಗಿ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೧೯.ಅಂಜಿನಪ್ಪ | ೨೫ | ಬೇಡರು | | ಮೀನಿನ ವ್ಯಾಪಾರ | ಕೆರೆನಹಳ್ಳಿ ಅಂಚೆ<br>ಸಂಡೂರು ತಾಲೂಕು<br>ಬಳ್ಳಾರಿ ಜಿಲ್ಲೆ |

| | | | | | |
|---|---|---|---|---|---|
| ೧೨೦.ದುರುಗಮ್ಮ | ೨೫ | ಬೇಡರು | | ಮೀನಿನ ವ್ಯಾಪಾರ | ಕೆರೆನಹಳ್ಳಿ ಅಂಚೆ<br>ಸಂಡೂರು ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೨೧.ಸೋಮಕ್ಕ | ೩೦ | ಕಬ್ಬೇರ್ | | ದಿನನಿತ್ಯ ಬಳಕೆಯ<br>ಕಬ್ಬಿಣ ಸಾಮಾನಿನ<br>ವ್ಯಾಪಾರ | ಹೊಸಪೇಟೆ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೨೨.ನೀಲಮ್ಮ | ೪೫ | ಮೇದರು | | ಬುಟ್ಟಿ ವ್ಯಾಪಾರ | ಯಶವಂತನಗರ ಅಂಚೆ<br>ಸಂಡೂರು ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೨೩.ಹನುಮವ್ವ | ೫೦ | ಬೇಡರು | | ಜೋಗಮ್ಮ<br>ಭಿಕ್ಷಾಟನೆ | ಜೋಗಿಕಲ್ಲು ಅಂಚೆ<br>ಸಂಡೂರು ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೨೪.ಬಸವರಾಜ | ೪೫ | ಬಡಿಗೇರ | ೦೫ | ಡ್ರೈವರ್ | ಕುಡುತಿನಿ ಅಂಚೆ<br>ಬಳ್ಳಾರಿ ತಾಲೂಕು, ಜಿಲ್ಲೆ |
| ೧೨೫.ನೀಲಮ್ಮ | ೫೦ | ಕುರುಬರು | | ತರಕಾರಿ ವ್ಯಾಪಾರ | ಕುಡುತಿನಿ ಅಂಚೆ<br>ಬಳ್ಳಾರಿ ತಾಲೂಕು, ಜಿಲ್ಲೆ |
| ೧೨೬.ಜಡೆಪ್ಪ | ೪೦ | ಕುರುಬರು | ೦೪ | ತರಕಾರಿ ವ್ಯಾಪಾರ | ಕುಡುತಿನಿ ಅಂಚೆ<br>ಬಳ್ಳಾರಿ ತಾಲೂಕು, ಜಿಲ್ಲೆ |
| ೧೨೭.ಲಕ್ಷ್ಮಿ | ೩೦ | ಉಪ್ಪಾರ | | ತರಕಾರಿ ವ್ಯಾಪಾರ | ಕುಡುತಿನಿ ಅಂಚೆ<br>ಬಳ್ಳಾರಿ ತಾಲೂಕು, ಜಿಲ್ಲೆ |
| ೧೨೮.ಹನುಮಕ್ಕ | ೩೫ | ಬೇಡರು | | ತರಕಾರಿ ವ್ಯಾಪಾರ | ಕುಡುತಿನಿ ಅಂಚೆ<br>ಬಳ್ಳಾರಿ ತಾಲೂಕು, ಜಿಲ್ಲೆ |
| ೧೨೯.ಹನುಮಕ್ಕ | ೩೨ | ಕೊರಚರು | | ತರಕಾರಿ ವ್ಯಾಪಾರ | ಕುಡುತಿನಿ ಅಂಚೆ<br>ಬಳ್ಳಾರಿ ತಾಲೂಕು, ಜಿಲ್ಲೆ |
| ೧೩೦.ಸಾವಿತ್ರಿ | ೫೨ | ಉಪ್ಪಾರ್ | | ತರಕಾರಿ ವ್ಯಾಪಾರ | ಸಿರುಗುಪ್ಪ ಅಂಚೆ<br>ಸಿರುಗುಪ್ಪ ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೩೧.ಮಾರುತಿ | ೧೯ | ಬೇಡರು | | ತರಕಾರಿ ವ್ಯಾಪಾರ | ಸಿರುಗುಪ್ಪ ಅಂಚೆ<br>ಸಿರುಗುಪ್ಪ ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೩೨.ಸಂಜೀಮಲ್ಲಮ್ಮ | ೨೨ | ಬಾರಿಕೇರ್ | | ತರಕಾರಿ ವ್ಯಾಪಾರ | ಸಿರುಗುಪ್ಪ ಅಂಚೆ<br>ಸಿರುಗುಪ್ಪ ತಾಲೂಕು<br>ಬಳ್ಳಾರಿ ಜಿಲ್ಲೆ |

| | | | | | |
|---|---|---|---|---|---|
| ೧೩೩.ಚೆನ್ನಬಸಮ್ಮ | ೪೨ | ಕೊರಚರು | | ಹುಣಸೇಹಣ್ಣು ವ್ಯಾಪಾರ | ಸಿಂಧನೂರು ಅಂಚೆ<br>ಸಿಂಧನೂರು ತಾಲೂಕು<br>ರಾಯಚೂರು ಜಿಲ್ಲೆ |
| ೧೩೪.ಯಲ್ಲಮ್ಮ | ೨೬ | ಭಜಂತ್ರಿ | | ಹುಣಸೇಹಣ್ಣು ವ್ಯಾಪಾರ | ಸಿಂಧನೂರು ಅಂಚೆ<br>ಸಿಂಧನೂರು ತಾಲೂಕು<br>ರಾಯಚೂರು ಜಿಲ್ಲೆ |
| ೧೩೫. ಈರಣ್ಣ | ೨೨ | ಶೆಟ್ಟಿಬಣಜಿಗ | ೦೭ | ಮಸಲಾ ವ್ಯಾಪಾರ | ಸಿರಗೇರಿ ಅಂಚೆ<br>ಸಿರುಗುಪ್ಪ ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೩೬.ಕಾಡಸಿದ್ದಪ್ಪ | ೩೬ | ಉಪ್ಪಾರರು | ೧೦ | ಅಡಿಕೆ ವ್ಯಾಪಾರ | ತೆಕ್ಕಲಕೋಟೆ ಅಂಚೆ<br>ಸಿರುಗುಪ್ಪ ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೩೭.ಗೌಸ್ | ೨೮ | ಮುಸ್ಲಿಂ | | ಅಡಿಕೆ ವ್ಯಾಪಾರ | ಬಳ್ಳಾರಿ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೩೮.ಸಾಯುಬ್ | ೨೩ | ಮುಸ್ಲಿಂ | ೦೭ | ಊದಿನಕಡ್ಡಿ ವ್ಯಾಪಾರ | ಆದೋನಿ ಅಂಚೆ, ತಾಲೂಕು<br>ಕರ್ನೂಲು ಜಿಲ್ಲೆ<br>ಆಂದ್ರಪ್ರದೇಶ ರಾಜ್ಯ |
| ೧೩೯.ಅಬ್ದುಲ್ | ೨೪ | ಮುಸ್ಲಿಂ | | ಎಲೆ ವ್ಯಾಪಾರಿ | ಸಿರುಗುಪ್ಪ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೪೦.ಗಾಳೆಪ್ಪ | ೬೦ | ಬೇಡರು | | ಭಿಕ್ಷಾಟನೆ | ಹಳೇಕೋಟೆ ಅಂಚೆ<br>ಸಿರುಗುಪ್ಪ ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೪೧.ಮಾರೆಪ್ಪ | ೪೦ | ಸಿಂದೋಳ್ಳಿ | | ಮೀನು ವ್ಯಾಪಾರ | ತೆಕ್ಕಲಕೋಟೆ ಅಂಚೆ<br>ಸಿರುಗುಪ್ಪ ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೪೨.ದಿವಾಕರ್ | ೪೦ | ಬ್ರಾಹ್ಮಣ | ಬಿ.ಎ. | ಜಿಲ್ಲಾ ಪಂಚಾಯತ್ ಸುಪರಿಟೆಂಡೆಂಟ್ | ಹೊಸಪೇಟೆ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |
| ೧೪೩.ಜನಾರ್ದನರೆಡ್ಡಿ | ೩೭ | ರೆಡ್ಡಿ | ಬಿ.ಎ. | ಅಧ್ಯಕ್ಷರು. ತಾಲೂಕು ಪಂಚಾಯತ್ ಬಳ್ಳಾರಿ | ಬಳ್ಳಾರಿ ಅಂಚೆ, ತಾಲೂಕು<br>ಬಳ್ಳಾರಿ ಜಿಲ್ಲೆ |

| | | | | |
|---|---|---|---|---|
| ೧೪೪.ಗವಿಯಪ್ಪ | ೩೨ | ಈಡಿಗರು | ಶಾಸಕರು<br>ಹೊಸಪೇಟೆ | ಹೊಸಪೇಟೆ ಅಂಚೆ<br>ಹೊಸಪೇಟೆ ತಾಲೂಕು<br>ಬಳ್ಳಾರಿ ಅಂಚೆ |
| ೧೪೫.ಪರಸಪ್ಪ | ೩೨ | ಹರಿಜನ | ಹಣ್ಣಿನ ವ್ಯಾಪಾರಿ | ಹೊಳಗುಂದಿ ಅಂಚೆ<br>ಹೂವಿನ ಹಡಗಲಿ ತಾ.<br>ಬಳ್ಳಾರಿ ಅಂಚೆ |
| ೧೪೬.ವೆಂಕಣ್ಣ | ೩೮ | ಬೇಡರು | ತರಕಾರಿ ವ್ಯಾಪಾರಿ | ವೊರಗೇರಿ ಅಂಚೆ<br>ಹಗರಿಬೊಮ್ಮನಹಳ್ಳಿ ತಾ.<br>ಬಳ್ಳಾರಿ ಜಿಲ್ಲೆ |

# ಸಂತೆ ಮತ್ತು ಬುಡಕಟ್ಟು ಸಮುದಾಯ

(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ, ಒಂದು ಅರ್ಥಶಾಸ್ತ್ರೀಯ ಅಧ್ಯಯನ)

## ೩. ಪ್ರಶ್ನಾವಳಿ

೧. ಮಾಹಿತಿದಾರರ ಹೆಸರು :

೨. ಊರು :

೩. ಹೋಬಳಿ :

೪. ತಾಲೂಕು :

೫. ಜಿಲ್ಲೆ :

೬. ವಯಸ್ಸು :

೭. ಲಿಂಗ :

೮. ವಿದ್ಯಾಭ್ಯಾಸ :

೯. ಜಾತಿ :

೧೦. ಬಳಿ / ಬೆಡಗು :

೧೧. ಸಮೀಕ್ಷೆಯ ದಿನಾಂಕ :

೧೨. ಕುಟುಂಬದವರ ಸದಸ್ಯರ ಹೆಸರು :

೧.

೨.

೩.

೪.

೫.

೬.

೧೩. ದುಡಿಯುವವರ ಸಂಖ್ಯೆ :

೧೪. ವೃತ್ತಿ / ಕಸುಬು :

೧೫. ಮಾರುವಂಥ ವಸ್ತುಗಳು :

೧೬. ಕಚ್ಚಾವಸ್ತು ತರುವ ಊರು / ಸ್ಥಳ :

೧೬. ಬಂಡವಾಳ :

☐ ☐

೧೭. ಬಂಡವಾಳ ಹಾಕಿದ ಎಲ್ಲಾ ವಸ್ತುಗಳನ್ನು ಮಾರುತ್ತೀರಾ?

೧. ಹೌದು ೨. ಇಲ್ಲ

೧೮. ಸಂತೆಯನ್ನು ಅವಲಂಬಿಸಿದ ಕಾಲಾವಧಿ :

☐ ☐

೧೯. ಭೂಹಿಡುವಳಿ ಎಕರೆಗಳಲ್ಲಿ :

೧. ಒಣ ೨. ನೀರಾವರಿ

೨೦. ಮನೆ ಮಾದರಿ :

೨೧. ಸರ್ಕಾರಿ ಸೌಲಭ್ಯಗಳು ದೊರೆತಿವೆಯೇ?

ದೊರೆತಿದ್ದರೆ ಯಾವ ಸೌಲಭ್ಯ ?

೨೨. ಸಂತೆಯಲ್ಲಿ ಮಾಡುವಂತ ವೃತ್ತಿಗೆ ಯಾವ ರೀತಿಯಲ್ಲಿ ವಹಿವಾಟು ವೆಚ್ಚವಾಗುತ್ತದೆ ?

೨೩. ನಿವ್ವಳ ಲಾಭ ಎಷ್ಟು ?

☐ ☐

೨೪. ಈ ವೃತ್ತಿಯಿಂದ ನಿಮಗೆ ತೃಪ್ತಿ ಇದೆಯೇ :

೧. ಹೌದು ೨. ಇಲ್ಲ

೨೫. ಸಂತೆಗಳಲ್ಲಿ ತಮ್ಮ ಉತ್ಪಾದನೆಯ ಮಾರಾಟ ಇತ್ತೀಚೆಗೆ ಹೆಚ್ಚಾಗಿದೆಯೋ / ಕಡಿಮೆಯಾಗಿದೆಯೋ?

೨೬. ಕಡಿಮೆಯಾಗಿದ್ದರೆ ಯಾಕೆ ಕಡಿಮೆಯಾಗಿದೆ?

೨೭. ಸಂತೆಯ ವಹಿವಾಟಿನಿಂದ ನಿಮ್ಮ ಆರ್ಥಿಕ ಸ್ಥಿತಿಗತಿಗಳಲ್ಲಿ ಬದಲಾವಣೆಗಳಾಗಿವೆಯೇ?



ತರಕಾರಿ ವ್ಯಾಪಾರ



ಬಟ್ಟೆ ವ್ಯಾಪಾರ



ಮಡಿಕೆ ವ್ಯಾಪಾರ



ಬಳೆ ವ್ಯಾಪಾರ



ಒಣಮೆಣಸಿನಕಾಯಿ ವ್ಯಾಪಾರ



ಸುಣ್ಣದ ವ್ಯಾಪಾರ



ಪ್ಲಾಸ್ಟಿಕ್ ವ್ಯಾಪಾರ



ಮಸಾಲೆದಿನಿಸು ವ್ಯಾಪಾರ



ಕುರಿ ಮಾಂಸ ವ್ಯಾಪಾರ



ಹಣ್ಣಿನ ವ್ಯಾಪಾರ



ತಂಬಾಕು ವ್ಯಾಪಾರ



ಊದುಬತ್ತಿಯ ವ್ಯಾಪಾರ



ಕುಂಕುಮ ವ್ಯಾಪಾರ



ಹೂವಿನ ವ್ಯಾಪಾರ



ನಿಂಬೆಹಣ್ಣಿನ ವ್ಯಾಪಾರ



ಮೀನಿನ ವ್ಯಾಪಾರ



ಅಲಂಕಾರಿಕ ವಸ್ತುಗಳ ವ್ಯಾಪಾರ



ಧಾನ್ಯ ವ್ಯಾಪಾರ



ತೆಂಗಿನಕಾಯಿ ವ್ಯಾಪಾರ



ಬಾಲ ಭಿಕ್ಷಾಟನೆ



ಸಿರಿಗುಪ್ಪ ಸಂತೆ



ಸಂಡೂರ ಸಂತೆ



ಹೊಸಪೇಟೆ ಸಂತೆ



ಹಡಗಲಿ ಸಂತೆ



ಬುಡುಬುಡುಕೆಯುವರ ಗಿಳಿಶಾಸ್ತ್ರ



ಕೊರಚರ ಚಾಪೆಯ ವ್ಯಾಪಾರ



ಕೊರಚರ ಬುಟ್ಟಿ ವ್ಯಾಪಾರ



ಕೊರಚರ ಪೊರಕೆ ವ್ಯಾಪಾರ



ಡೊಂಬರಾಟ



ಜೋಗಪ್ಪನವರ ಭಿಕ್ಷಾಟನೆ



ಡೊಂಬರಾಟ



ಕಿನ್ನರಜೋಗಿ



ಬೇಡರ ಕಟ್ಟಿಗೆ ವ್ಯಾಪಾರ



ಮೇದಾರ ಬುಟ್ಟಿ ವ್ಯಾಪಾರ



ಮೇದಾರ ಬುಟ್ಟಿ ವ್ಯಾಪಾರ



ಬೇಡರ ಹಣ್ಣಿನ ವ್ಯಾಪಾರ



ಲಂಬಾಣಿಯವರ ಕಾಡುಉತ್ಪನ್ನ ವ್ಯಾಪಾರ



ಲಂಬಾಣಿ ಕಟ್ಟಿಗೆ ವ್ಯಾಪಾರ



ಲಂಬಾಣಿಯವರ ಬಟ್ಟೆ ಆಭರಣಗಳ ವ್ಯಾಪಾರ



ಗೋಸಾಯಿಗಳ ಬಕೆಟ್ ರಿಪೇರಿ
ಮತ್ತು ಸೆಂಟ್ ವ್ಯಾಪಾರ



ಬುಡುಬುಡುಕೆ



ಜೋಗಮ್ಮ



ರಗ ಮುರಗಿಯರ ಭಿಕ್ಷಾಟನೆ



ದುರಗ ಮುರಗಿಯರ
ಮೀನಿನ ವ್ಯಾಪಾರ

